# ಕಸ್ತೂರಿ

ಕನ್ನಡ ಡೈಜೆಸ್ಟ



ವ್ಯವಸ್ಥಾಪಕ ಸಂಪಾದಕ :
ಎಸ್. ಎ. ಪಾಟೀಲ

ಸಹಸಂಪಾದಕ :
ಮಾಧವ ನಾ. ಮಹಿಂಷಿ

ಕಲೆ :
ಕೆ. ಬಿ. ಕುಲಕರ್ಣಿ

ಮುಖಪುಟ :
ಧಾನ್ಯಲಕ್ಷ್ಮಿ

ಚಿತ್ರ :
ಎಂ. ವಿಶ್ವನಾಥ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨–೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯–೦೦ |
| ೨ ವರ್ಷಕ್ಕೆ | ,, | ೫೫–೦೦ |
| ೩ ವರ್ಷಕ್ಕೆ | ,, | ೮೨–೦೦ |

KASTURI November 1984

# ಬೆಳಕಿಂಡಿ

ಜಗತ್ತು ದುಂಡಗಿದೆ. ಅದರ ಕೊನೆಯೆಂದು ನಾವು ಭಾವಿಸುವ ಜಾಗವೇ ಬಹುಶಃ ಅದರ ಆರಂಭವಾಗಿರಬಹುದು.

-ಐ ಬಿ ಪಿ

*

ಪ್ರತಿಯೊಬ್ಬ ಪ್ರತಿಭಾವಂತನ ಹಿಂದೆ ಒಬ್ಬ ಸ್ತ್ರೀಯಿರುತ್ತಾಳೆ–ಉಡಲು ಬಟ್ಟೆ, ಉಣ್ಣಲು ಅನ್ನವಿಲ್ಲದೆ ಒದ್ದಾಡುವಂಥವಳು.

–ಹೆರಾಲ್ಡ್ ಕಾಫಿನ್

*

ಪುರುಷ ಪೃಥ್ವಿಯ ಹಾಗೆ, ನಾವು ಸ್ತ್ರೀಯರು ಚಂದ್ರನ ಹಾಗೆ. ನಮ್ಮ ಒಂದೇ ರೂಪವನ್ನು ನಾವು ಅವನೆದುರು ಪ್ರಕಟಪಡಿಸುತ್ತೇವೆ. ಹೀಗಾಗಿ ಅವ ನಮಗೆ ಬೇರೊಂದು ರೂಪವಿಲ್ಲವೆಂದೇ ಭಾವಿಸಿಕೊಂಡುಬಿಡುತ್ತಾನೆ.

- ಆಲಿವ್ ಶ್ರೈನರ್

*

ಧೂರ್ತರನ್ನು ಬುದ್ಧಿವಂತರೆಂದು ಪರಿಗಣಿಸಲಾರಂಭಿಸಿದ ಕ್ಷಣವೇ ರಾಷ್ಟ್ರಕ್ಕೆ ದೊಡ್ಡ ಅಹಿತವುಂಟಾಗಲಾರಂಭಿಸುತ್ತದೆ.

–ಫ್ರಾನ್ಸಿಸ್ ಬೇಕನ್

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

# ಸಹಚಿಂತನ

### ಕೃತಿ ಚೌರ್ಯ?

ಅಕ್ಟೋಬರ್ ತಿಂಗಳ ಕಸ್ತೂರಿಯಲ್ಲಿ ಶ್ರೀಮಾನ್ ಎಸ್. ವಿಶ್ವನಾಥ ಬರೆದಿರುವ "ಸಂತನ ಸಮಾಧಿ" ಓದಿ ಸಖೇದಾಶ್ಚರ್ಯವಾಯಿತು. ಈ ಕಥೆಯ ಮೂಲ ಲೇಖಕರು ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರರು. ಅವರ "ನವರಾತ್ರಿಗಳು" ಸಂಚಿಕೆಯಲ್ಲಿ "ಸಮಾಧಿಯ ಸತ್ವ" ಎಂಬ ಹೆಸರಿನಿಂದ ಈ ಮೊದಲೇ ಬೆಳಕು ಕಂಡಿದೆ. ಮೂಲ ಲೇಖಕರ ಕೃತಿಯನ್ನು ಸ್ವಲ್ಪ ಬದಲಾಯಿಸಿರುವ, ಅವರ ಹೆಸರನ್ನು ಸ್ಮರಿಸಿಕೊಳ್ಳದ ವಿಶ್ವನಾಥ್‌ರವರ ಔಚಿತ್ಯವೇನೋ ತಿಳಿಯಲಿಲ್ಲ.

ಮೈಸೂರು —ಉಮಾ ರಮೇಶ

ಅಕ್ಟೋಬರ್ ತಿಂಗಳಿನ ನಿಮ್ಮ ಪತ್ರಿಕೆಯಲ್ಲಿ 'ಆತ್ಮಧ್ವನಿ' ಎನ್ನುವ ಕಥೆ (ವಿಜಯ ಭೂಷಣ ತುಂಕೂರ) ಓದಿದೆ. ಓದಿದ ನಂತರ ನನಗೆ ಬರೆಯಬೇಕೆನ್ನಿಸಿದ್ದಿಷ್ಟು: ನಾನು ಪಿ. ಯು. ಸಿ. ಯಲ್ಲಿ ಓದುತ್ತಿರುವಾಗ ಹಿಂದಿ ಪಠ್ಯ ಪುಸ್ತಕದಲ್ಲಿ 'ಭೋಲಾರಾಮನ ಜೀವ' ಎನ್ನುವ ಕಥೆ ಇತ್ತು. ಈಗ ಪ್ರಕಟವಾಗಿರುವ 'ಆತ್ಮಧ್ವನಿ' ಮತ್ತು ಭೋಲಾರಾಮನ ಜೀವ ಎನ್ನುವ ಹಿಂದಿ ಕಥೆ ಎರಡೂ ಒಂದೇ ಆಗಿರುತ್ತದೆ. ಏನೊಂದೂ ಬದಲಾವಣೆಯೂ ಇರುವುದಿಲ್ಲ. ಇದು ಮರೆವಿನಿಂದ ಮೂಲವನ್ನು ಸ್ಮರಿಸದೇ ಇರುವುದೋ ಅಥವಾ ನೇರ ಕೃತಿ ಚೌರ್ಯವೋ ದಯವಿಟ್ಟು ತಿಳಿಸಿ.

ತೆಕ್ಕಟ್ಟೆ —ಕೆ. ಸೂರ್ಯ ಪ್ರಸಾದ

ಅಕ್ಟೋಬರ್ ೮೪ರ ಕಸ್ತೂರಿಯಲ್ಲಿ ಪ್ರಕಟವಾದ ವಿಜಯ ಭೂಷಣ ತುಂಕೂರ ಅವರ 'ಆತ್ಮಧ್ವನಿ'ಯು ಸರಳ ನಿರೂಪಣೆಯಿಂದ ವಾಸ್ತವಿಕತೆಗೆ ತೀರಾ ಹತ್ತಿರವಾಗಿದೆ. ಪಿಂಚಣಿಯ ಬಗ್ಗೆ ಯಮ ಲೋಕದಲ್ಲಿಯೂ ಚಿಂತಿಸುವಂತೆ ಮಾಡಿದ ಹಾಸ್ಯ ಮತ್ತು ವಿಡಂಬನಾತ್ಮಕವಾಗಿ ಹೆಣೆದ ಕಥೆಯನ್ನು ಓದಿ ನಿಜವಾಗಿಯೂ ಖುಷಿಪಟ್ಟೆ!

ಕುಷ್ಟಗಿ —ಶರಣಪ್ಪ ವಡಿಗೇರಿ

### ಅಪೂರ್ವ ನೆನಪುಗಳು

"ಪೋಲೀಸ್ ಅಧಿಕಾರಿಯ ನೆನಪುಗಳು" (ಕಸ್ತೂರಿ, ಅಕ್ಟೋಬರ್) ಒಂದು ಮಹತ್ವಪೂರ್ಣ ಹಾಗೂ ಪೋಲೀಸರು ಅನುಕರಿಸಬೇಕಾದಂಥ ಉತ್ತಮ ಲೇಖನ. ಜಿ. ಎಸ್. ಕುಲಕರ್ಣಿಯವರ ಕರ್ತವ್ಯ ನಿಷ್ಠೆ, ಪ್ರಾಮಾಣಿಕತೆ, ಭಲ ಪೋಲೀಸರಿಗೆ ಮಾದರಿಯಾಗುವುದರಲ್ಲಿ ಸಂದೇಹವಿಲ್ಲ. ಪೋಲೀಸರ ಸದ್ಯದ ಮನಃಪರಿವರ್ತನೆಯಾದಲ್ಲಿ ಈ ಲೇಖನ ಸಾರ್ಥಕ.

ಬೆಂಗಳೂರು —ಪ. ರಾಮಚಂದ್ರರಾವ್

ತಮ್ಮ ಅಕ್ಟೋಬರ್ ಸಂಚಿಕೆಯಲ್ಲಿ ಜಿ. ಎಸ್. ಕುಲಕರ್ಣಿ ಇವರ "ಪೋಲಿಸ್ ಅಧಿಕಾರಿಯ ನೆನಪುಗಳು" ನಿಜವಾಗಿಯೂ ರಂಜನೀಯವಾಗಿವೆ. ಈಗ ಇಂಥ ಎಷ್ಟು ಪೋಲೀಸ ಅಧಿಕಾರಿಗಳು ಕೆಲಸ ಮಾಡುತ್ತಾರೆ ಎನ್ನುವುದು ಸಂಶಯವೆ. ಈ ನೆನಪುಗಳನ್ನು ಓದಲಿಕ್ಕೆ ಸುರು ಮಾಡಿದ ಮೇಲೆ ಅದನ್ನು ಮುಗಿಸಿಯೇ ಬಿಡಬೇಕೆಂಬ ಕುತೂಹಲ ಉತ್ಪನ್ನವಾಗುತ್ತದೆ.

ತಾವು ಇಂಥ ಅನುಭವಗಳನ್ನೂ ಹಾಗೂ ನಿಜವಾದ ಕ್ರಿಮಿನಲ್ ಕೇಸುಗಳ ಬಗ್ಗೆ ತಿಂಗಳಿಗೊಂದು ಖೂನಿ ಕೇಸು, ವಂಚನೆಯ ಕೇಸುಗಳು ಮೋಸ ಮಾಡಿದ ಕೇಸುಗಳು, ಇವು ನಿಜವಿದ್ದರೂ ಕಥೆಯಂತೆ ಇರುತ್ತವೆ. ಇಂಥವುಗಳನ್ನು ಒಳ್ಳೇ ನ್ಯಾಯವಾದಿಗಳಿಂದ, ನ್ಯಾಯಾಧೀಶರಿಂದ ಮತ್ತು ಹಿರಿಯ ಪೋಲೀಸ್ ಅಧಿಕಾರಿಗಳಿಂದ ನಿವೃತ್ತ ಪೋಲೀಸ್ ಅಧಿಕಾರಿಗಳಿಂದ, ನ್ಯಾಯಾಧೀಶರಿಂದ ಅವರವರ ನೌಕರಿಯ ಕಾಲದಲ್ಲಿ ಇಂಥ ಎಷ್ಟೋ ನಿಜವಾದ ಸ್ವಾರಸ್ಯಕರವಾದ ಅನುಭವಗಳು ಬಂದಿರುತ್ತವೆ. ಅಂಥ ಅನುಭವಗಳಿಂದ ತಿಂಗಳಿಗೊಂದು ಇಂಥ ನಿಜ ಕಥೆಗಳನ್ನು ಕೊಟ್ಟರೆ "ಕಸ್ತೂರಿ" ನಿಜವಾಗಿ ಮತ್ತಷ್ಟು ರಂಜನೀಯವಾಗುತ್ತದೆ.

ಧಾರವಾಡ —ಎನ್. ಬಿ. ಪಾಟೀಲ

### ಹೀಗಲ್ಲ, ಹೀಗೆ

ಅಕ್ಟೋಬರ್ ೮೪ರ ಕಸ್ತೂರಿಯಲ್ಲಿ ಪ್ರಕಟವಾದ ನನ್ನ ಲೇಖನದಲ್ಲಿ 'ಕೃಷ್ಣಂ ವಂದ್ಯೇ ಜಗದ್ಗುರುಂ' ಎಂದಿದೆ. ಇದು ತಪ್ಪಾಗಿದ್ದು ಸರಿಯಾಗಿದ ರೂಪ 'ಕೃಷ್ಣಂ ವಂದೇ ಜಗದ್ಗುರುಂ'. ಶ್ಲೋಕದ ಪೂರ್ಣ ಪಾಠ ಹೀಗಿದೆ. 'ವಸುದೇವ ಸುತಂ ದೇವಂ ಕಂಸ ಚಾಣೂರ ಮರ್ದನಂ। ದೇವಕೀ ಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಂ.'

ಯಲಹಂಕ —ಕಿಬ್ಬಳ್ಳಿ ಗಣಪತಿ ಶರ್ಮ

### ಕ್ಷೇಮ

ಕ್ಷೇಮ ಓದಿ,-ಕ್ಷೇಮವೆನ್ನಿ (ಅಕ್ಟೋಬರ್ ಕಸ್ತೂರಿ) ವೆಂಕಟೇಶ ಸಾಂಗ್ಲಿಯವರ ಲೇಖನ ಓದಿ ಪುಲಕಿತನಾದೆ. ನಿಜಕ್ಕೂ ಇದೊಂದು ಸಂಬಲಸಾಧ್ಯವಾದ ಅಸಾಮಾನ್ಯ ಪ್ರಯೋಗ! ಈ ರೀತಿಯ ಮಾದರಿ ಪ್ರಯೋಗ ಭಾರತದಲ್ಲಿ ಮಾತ್ರವಲ್ಲ, ಜಗತ್ತಿನಲ್ಲೇ ಬೇರೊಂದಿರಲಾರದು.

ಬರೋಡಾ - ಎಸ್ಕೆ ಹಳೆಯಂಗಡಿ

### ಭೀಕರ

'ಕಸ್ತೂರಿ'ಯ ಅಕ್ಟೋಬರ್ ತಿಂಗಳ ಮಾಸ ಪತ್ರಿಕೆಯಲ್ಲಿ ಸುದರ್ಶನರ 'ಮೆಡೂಸಾ ದುರಂತ'ದಷ್ಟೇ ಅವರದೇ ಲೇಖನವಾದ 'ಟಿಟಾನಿಕ್' ದುರಂತ ಮತ್ತು ನಾಗೇಶ ವೈದ್ಯರ 'ಎಸೆಕ್ಸ್ ಹಡಗಿನ ದುರ್ಘಟನೆ' ಅಷ್ಟೇ ಭೀಕರ, ಇವೆಲ್ಲಾ ದೀರ್ಘ ಕಾಲದ ಹಿಂದಿನ ಘಟನೆಗಳಾದ್ದರಿಂದ ನಸು ನೋಯೋ ಮನಕ್ಕೆ ನೆಮ್ಮದಿ ಹೇಳಬೇಕಷ್ಟೆ.

ಬೆಲ್ಲದ ಬಾಗೇವಾಡಿ —ಆರ್. ಬಿ. ಗೋಕಾಕ

### ಪಾಠ?!

ಸಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟಗೊಂಡ ಡಿ. ಸುಮಿತ್ರರವರ ಲೇಖನ 'ನಾನು ಮತ್ತು ಮಹಾಭಾರತದ ಪಾಠ' ಹೆಸರನ್ನು ಓದಿ ಅಷ್ಟು ಖುಷಿಯಾಗದಿದ್ದರೂ ಲೇಖನ ಓದಿದ ಮೇಲೆ ತೃಪ್ತಿ ಕೊಟ್ಟಿತು. ಈ ಲೇಖನವು ನಮ್ಮ ದೇಶದ ಶಿಕ್ಷಣ ಮಾಧ್ಯಮದಲ್ಲಿ ಕಂಡು ಬರುವ ಕುಂದು ಕೊರತೆಗಳನ್ನು ಎತ್ತಿ ಹಿಡಿಯುತ್ತದೆ. ಇದರಿಂದ ಮಕ್ಕಳಲ್ಲಿ ವಿರುದ್ಧ ಅಭಿಪ್ರಾಯಗಳು ತಲೆದೋರುತ್ತವೆ. ವಯಸ್ಸಿಗೆ ತಕ್ಕಂತೆ ಪಾಠಗಳ ಬೇಕಾದುದು ಎಷ್ಟು ಮುಖ್ಯ ಎಂದು ಈ ಲೇಖನ ತೋರಿಸುತ್ತದೆ. ಒಟ್ಟಿನಲ್ಲಿ ಲೇಖನವು ನಮ್ಮನ್ನು ವಿಚಾರಪರರಾಗಿ ಮಾಡುವುದರಲ್ಲಿ ಯಶಸ್ವಿಯಾಗಿದೆ.

- ಹೆಚ್. ಎನ್. ಸುಮಾ

### ಖಗೋಳ ಜ್ಞಾನ

ಶುಕ್ರ ಗ್ರಹದ ಬಗೆಗೆ ವಿವರವಾದ ಪರಿಚಯಾತ್ಮಕ ಲೇಖನ ಹಾಗೂ ಚಿತ್ರಗಳ ಸಮಗ್ರ ಮಾಹಿತಿಯನ್ನು ಒದಗಿಸಿ, ಈ ಗ್ರಹದ ಬಗೆಗೆ ನಮಗಿರುವ ಜ್ಞಾನವನ್ನು ಹೆಚ್ಚಿಸಿದ್ದಿರಿ. ವಂದನೆಗಳು.

ಸಿರಸೈಂ (ಗೋವಾ) —"ಅವಿನಾಶ"

ಸಪ್ಟೆಂಬರ್ ತಿಂಗಳಲ್ಲಿ ಪ್ರಕಟವಾದ ನನ್ನ ಲೇಖನದ ಕುರಿತಾದ ಬಗ್ಗೆ ಶ್ರೀ ಶ್ರೀನಿವಾಸ ಇವರು "ಆಶ್ಚರ್ಯಕರ"ವೆಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿ, ಅದರವಿ ಧಾನವನ್ನು ತಿಳಿಸಲಿಕ್ಕೆ ಬರೆದಿರುತ್ತಾರೆ. ಅವರು ವಿವರಗಳಿಗಾಗಿ, ಉಸ್ಮಾನಿಯ ವಿಶ್ವವಿದ್ಯಾಲಯ ಹೈದರಾಬಾದದ ಶ್ರೀ ರಹಿಮತ್ ಉಲ್ಲಾ ಮತ್ತು ಶ್ರೀ ದಾಸ ಇವರ "A New Technique for the preparation of whole mounts vertebrate Skeletons by tissue transparancy methods" ಲೇಖನದಲ್ಲಿಯ ವಿವರಗಳನ್ನು ಓದಿ ತಿಳಿದುಕೊಳ್ಳಬಹುದು.

ಭಾರತ ಸರಕಾರದವರು ೧೯೬೨-೬೩ ಸ್ಥಾಪಿತವಾದ ಪ್ರಪ್ರಥಮ ಕೃಷಿವಿದ್ಯಾಲಯದ ಸಂದರ್ಶನಕ್ಕೆ ಅಜಮಾಸು ೯೦ ಪತ್ರಕರ್ತರ ಸಮಿತಿಯನ್ನು ಉತ್ತರ ಪ್ರದೇಶದ ಪಂತನಗರಕ್ಕೆ ಕಳುಹಿಸಿದ್ದರು. 'ಕರ್ಮವೀರ' ಹಾಗೂ ಇನ್ನೂ ಅನೇಕ ಪತ್ರಿಕೆಗಳು ಈ ವಿಷಯದ ಮೇಲೆ ತಮ್ಮ ಪತ್ರಿಕೆಗಳಲ್ಲಿ ಬರೆದಿರುತ್ತವೆ.

ಧಾರವಾಡ —ಕೃಷ್ಣರಾವ ಆಲೂರ

# ಕಸ್ತೂರಿ

ವರ್ಷ: ೨೯ | ನವೆಂಬರ್, ೧೯೮೪ | ಸಂಚಿಕೆ : ೩

## ಲಕ್ಷ್ಮಿ

**ಸಂತೋಷ ವ್ಯಾಸ**

ಆತನೊಬ್ಬ ಲಕ್ಷ್ಮಿಯ ಉಪಾಸಕ. ಹಾಗೆಂದೇ ಲಕ್ಷ್ಮಿಯ ಗುಡಿಯ ಬಾಗಿಲಲ್ಲಿ ಕುಳಿತು ಅಹರ್ನಿಶಿಯಾಗಿ ಮೂರ್ತಿಯನ್ನು ನೋಡುತ್ತಾ ದೇವಿಯನ್ನು ಸ್ತುತಿಸುತ್ತಿದ್ದ. ಒಂದಿಲ್ಲೊಂದು ದಿನ ದೇವಿ ಒಲಿದು ಪ್ರಸನ್ನಳಾಗುವಳೆಂಬ ಆಶೆ ಆತನದು. ದಿನಗಳುರುಳಿದವು, ವಾರಗಳುರುಳಿದವು, ತಿಂಗಳುಗಳುರುಳಿದವು, ಕೊನೆಗೊಂದು ದಿನ ವರ್ಷವೂ ಉರುಳಿಹೋಯಿತು. ಆದರೆ ಲಕ್ಷ್ಮಿ ಮಾತ್ರ ಪ್ರಸನ್ನಳಾಗಲೂ ಇಲ್ಲ; ಇವನ ದಾರಿದ್ರ್ಯ ತೊಲಗಲೂ ಇಲ್ಲ. ಆದರೂ ಅವನು ಛಲದಿಂದ ಸ್ತೋತ್ರಪಠಣವನ್ನು ಮುಂದುವರಿಸುತ್ತಲೇ ಇದ್ದ.

ದೀಪಾವಳಿ ಬಂತು. ಲಕ್ಷ್ಮಿಯ ಪೂಜೆಗಾಗಿ ಮಂದಿರದಲ್ಲೆಲ್ಲ ಭರ್ಜರಿಯಾಗಿ ತಯಾರಿ ನಡೆಯುತೊಡಗಿತು. ಭಕ್ತರು ಹಿಂಡುಹಿಂಡಾಗಿ ಬರತೊಡಗಿದರು. ನಡೆದಾಡಲೂ ಸ್ಥಳವಿಲ್ಲದಷ್ಟು ಜನಜಂಗುಳಿ ದೇವಾಲಯದ ಒಳಗೂ ಹೊರಗೂ ನೆರೆಯಿತು. ಆದರೂ ಅವನು ಏಕಾಗ್ರ ಚಿತ್ತ

‘ಭಾರತಿ’ಯಿಂದ

ದಿಂದ ಪಠಣವನ್ನು ನಡೆಸುತ್ತಲೇ ಇದ್ದ.

ಒಮ್ಮೆ ಪೂಜಾರಿಯ ದೃಷ್ಟಿ ಆತನ ಮೇಲೆ ಬಿತ್ತು. ಛೇ! ಇವನೆಂಥ ದರಿದ್ರದವ! ಈತನಿಗೇನು ಇಲ್ಲಿ ಕೆಲಸ? ಎನ್ನುತ್ತಾ ಮಂದಿರದ ಸೇವಕರನ್ನು ಕರೆದು ದೂರಕ್ಕೆ ನೂಕಿಸಿದ. ಅದರ ರಭಸವನ್ನು ತಡೆಯಲಾರದೆ ಜರ್ಜರಿತನಾದ ಆತ ಧೊಪ್ಪನೆ ಕೆಳಗೆ ಬಿದ್ದು, ಮತ್ತೆ ಹೇಗೋ ಸಾವರಿಸಿಕೊಂಡು ಜನಜಂಗುಳಿಯಲ್ಲಿ ಮಾಯವಾದ.

ಹಗಲು ಕಳೆದು ರಾತ್ರಿ ಬಂತು ನೀರವ ನಿಶೀಥದಲ್ಲಿ ಅಸ್ಪಷ್ಟ ಆಕೃತಿಯೊಂದು ಮೆಲ್ಲಗೆ ದೇವಾಲಯದತ್ತ ಸಾಗುತ್ತಿತ್ತು. ಕೈಯಲ್ಲೊಂದು ಸುತ್ತಿಗೆ, ಕಣ್ಣುಗಳಲ್ಲಿ ಕ್ರೋಧಾಗ್ನಿ. ಮಂದಿರದ ಒಳಗೆ ಸೇರಿದೊಡನೆ ಸರಸರನೆ ಗರ್ಭಗೃಹದತ್ತ ನಡೆದು ದೇವಿಯ ಬಳಿ ಸಾರಿ, "ದೇವಿ! ವರ್ಷವಿಡಿ ನಿನ್ನನ್ನು ಸ್ತುತಿಸಿದರೂ ನನ್ನ ಮೇಲೆ ಪ್ರಸನ್ನಳಾಗಲಿಲ್ಲ ಬದಲು ಆ ಡಾಂಭಿಕರೇ ನಿನಗೆ ಹೆಚ್ಚಾದರು. ಇಂಥವಳಿಗೆ ಇದೇ ತಕ್ಕ ಶಾಸ್ತಿ," ಎನ್ನುತ್ತಾ ಸುತ್ತಿಗೆಯನ್ನು ಮೇಲೆತ್ತಿದ.

ಅಷ್ಟರಲ್ಲಿ ಗರ್ಭಗೃಹದಿಂದ ಧ್ವನಿ ಬಂತು: "ಮೂರ್ಖಾ, ನೀನೊಬ್ಬನೇ ನನ್ನ ಭಕ್ತನೆಂದು ತಿಳಿದಿದ್ದೀಯಾ? ಧನ, ಕನಕ, ಐಶ್ವರ್ಯಗಳು ಯಾರಿಗೆ ಬೇಡ? ಹಾಗಾಗಿ ಜಗತ್ತಿನಲ್ಲಿರುವವರೆಲ್ಲರೂ ನನ್ನ ಭಕ್ತರೆ. ಆದರೆ ಅವರೆಲ್ಲರೂ ನಿನ್ನ ಹಾಗೆಯೇ ಮೂರ್ಖರು. ನನಗೆ ಯಾರ ಬಗೆಗೂ ಬೇಸರವಿಲ್ಲ. ಯಾರ ಮೇಲೂ ಅಭಿಮಾನವಿಲ್ಲ. ನಿಜ ಹೇಳಬೇಕೆಂದರೆ ಭಕ್ತರಿಗೆ ವರವನ್ನು ಅನುಗ್ರಹಿಸುವ ಶಕ್ತಿಯೇ ನನ್ನಲಿಲ್ಲ.

"ನನ್ನಲ್ಲಿ ಸೌಂದರ್ಯವಿದೆ, ಆಕರ್ಷಣೆಯಿದೆ. ಆದರೆ ಬೇಕಾದಲ್ಲಿ ಹೋಗಬೇಕೆಂದರೆ ನನ್ನ ಕಾಲುಗಳಲ್ಲಿ ಶಕ್ತಿಯೇ ಇಲ್ಲ. ಯಾರಲ್ಲಿ ಶಕ್ತಿಯಿದೆಯೋ ಯಾರಲ್ಲಿ ಸಾಮರ್ಥ್ಯವಿದೆಯೋ ಮತ್ತು ಯಾರಲ್ಲಿ ಪೌರಷವಿದೆಯೋ ಅವರು ಮಾತ್ರ ನನ್ನನ್ನು ಹೊಂದಬಲ್ಲರು. ಈ ಶಕ್ತಿ ನಿನಗೂ ಉಂಟೆ?"

ಭಕ್ತನ ಕೈಲಿದ್ದ ಸುತ್ತಿಗೆ ತಾನಾಗಿಯೇ ಕೆಳಗೆ ಬಿತ್ತು. ❖



## ವಾಕ್ಯದೀಪ

**ಜೀವನ ವಸ್ತ್ರವಿದ್ದಂತೆ, ಹೊಲಸಾಯಿತೂ ಒಗೆದು ಒಣಗಿಸಲೇಬೇಕು; ಹರಿಯಿತೋ ಹೊಲಿಗೆ ಹಾಕಲೇಬೇಕು; ಬಿಟ್ಟು ಎಷ್ಟು ದಿನ ಸಾಧ್ಯವೋ ಅಷ್ಟು ದಿನ ಮುಂದುವರಿಸಿಕೊಂಡು ಹೋಗಲೇಬೇಕು.**

—ಬಾಲ್ಜಾಕ್

**ಅರೆಬರೆ ಕೆಲಸ, ಅರೆಯಾದ ಆಸೆಗಳು ಅರೆ ಮನುಷ್ಯನ ಚಿಹ್ನೆಗಳು.**

—ನೆಪೋಲಿಯನ್ ಬೊನಾಪಾರ್ಟ್

**ಜೀವನ ಅಮರತ್ವದ ಶೈಶವಾವಸ್ಥೆ.**

ಗಯಟೆ—

**ಆಜ್ಞೆಗಳನ್ನು ಕೊಡುವಾಗ ಕೈಯನ್ನು ಕಿಸೆಯಲ್ಲಿಟ್ಟುಕೊಳ್ಳಲೂ ಸಾವಿರದಲ್ಲೊಬ್ಬನಿಗೂ ಸಾಧ್ಯವಾಗದು.**

—ಬಿ. ಪಿ.

**ಇಚ್ಛಾಶಕ್ತಿಯ ಮೇಲೆ ಸಮಯ ಸಾಧಿಸಿದ ವಿಜಯದ ಕುರುಹೇ ಚಟ.**

—ಮಾಂಟೇನ್

ಹೆಚ್ಚು ಬೆಳೆಗೊಂದು
ಹೊಚ್ಚ ಹೊಸ ವಿಧಾನ

# ಜೇನ್ನೊಣಗಳಿಂದ ಪರಾಗ ಸ್ಪರ್ಶ

**ಬಾರ್ಕೂರು ರಾಮನಾಥ ಜೋಶಿ**

ಒಂದು ದಶಕದ ಹಿಂದೆ ನಮ್ಮ ದೇಶದಲ್ಲಿ ಎಣ್ಣೆ ಕಾಳುಗಳ ಅಭಾವ ಅದೆಷ್ಟು ತೀವ್ರ ವಾಗಿತ್ತೆಂದರೆ ಸಾಬೂನು, ವನಸ್ಪತಿ ಮೊದ-ಲಾದವು ದುರ್ಲಭವಾಗಿದ್ದವು. ಇಂಥ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಾಬೂನು ಉತ್ಪಾದಕರು ಭವಿಷ್ಯ ದಲ್ಲಿ ತಮ್ಮ ಉದ್ಯಮಗಳು ಮುಂದುವರಿಯುವ ಕುರಿತು ಸಂದೇಹ ಪಡುವುದು ಸಹಜವೇ ಆಗಿತ್ತು. ಹಿಂದೆಂದೂ ಈ ಪ್ರಮಾಣದಲ್ಲಿ ಎಣ್ಣೆಯ ಕೊರತೆಯನ್ನು ಕಾಣದ ಉದ್ಯೋಗಪತಿಗಳು ಎದೆಗುಂದಿದುದು ಅಚ್ಚರಿಯ ವಿಷಯವಲ್ಲ. ಆಗ ಅಂತಾರಾಷ್ಟ್ರೀಯ ಉತ್ಪಾದಕ ಕಂಪನಿಯೊಂದು ಈ ಸಮಸ್ಯೆಯನ್ನು ನೀಗಲು ಭಾರತದಲ್ಲಿ ತನ್ನದೇ ಆದ ಸೂರ್ಯಕಾಂತಿಯನ್ನು ಬೃಹತ್ ಪ್ರಮಾಣ ದಲ್ಲಿ ಬೆಳೆಯುವುದಾಗಿ ನಿರ್ಧರಿಸಿ ಯೋಜನೆಯನ್ನು ರೂಪಿಸತೊಡಗಿತು. ಈ ಹಂತದಲ್ಲಿ ಕಂಪನಿಯ ತಂತ್ರಜ್ಞರು ದೇಶದ ಹಿರಿಯ ಕೀಟ ತಜ್ಞರ ಸಲಹೆಯನ್ನು ಪಡೆಯ ತೊಡಗಿದರು. ಏಕೆಂದರೆ ಕೀಟಗಳ ಪರಾಗಸ್ಪರ್ಶವಿಲ್ಲದೆ ಸೂರ್ಯ ಕಾಂತಿಯ ಹೂ ಬೀಜಗಳನ್ನು ಪಡೆಯುವುದು ಸಾಧ್ಯವಾಗದು. ಕೀಟಗಳ ಸಾಮ್ರಾಜ್ಯದಲ್ಲಿ ಜೇನ್ನೊಣವೊಂದೇ ಮಾನವನ ನಿಯಂತ್ರಣದಲ್ಲಿ ಕೆಲಸ ಮಾಡಬಹುದಾದ್ದರಿಂದ ಈ ಅಂತಾ-ರಾಷ್ಟ್ರಿಯ ಕಂಪನಿ ದೇಶದ ಜೇನುಗಾರಿಕೆಯ ಪರಿಣತರ ಸಹಕಾರವನ್ನು ಕೋರಿತು.

ಇತಿಹಾಸಪೂರ್ವ ಕಾಲದಿಂದ ಸವಿ ಜೇನಿಗಾಗಿ ಜೇನ್ನೊಣಗಳು ಮಾನವನಿಗೆ ಸುಪರಿಚಿತ, ಆದರೆ ಅವುಗಳ ಪರಾಗಸ್ಪರ್ಶದ ಅನುಪಮ ಸೇವೆ ಯನ್ನು ಇತ್ತೀಚಿಗಷ್ಟೇ ಗುರುತಿಸಲಾಗಿದೆ. ಇತರ ಗ್ರಾಮೀಣ ಉದ್ಯೋಗಗಳಂತೆ ಜೇನು ಸಾಕಣೆಯನ್ನು ಭಾರತದಲ್ಲಿ ತಲೆಮಾರಿನಿಂದ ಕೈಗೊಳ್ಳದಿದ್ದರೂ, ಅರ್ಧ ಶತಮಾನದಿಂದ ಈ ಗುಡಿ ಕೈಗಾರಿಕೆ ನಮ್ಮ ದೇಶದಲ್ಲಿ ಪ್ರಚಲಿತವಿದೆ. ಪ್ರಗತಿಪರ ಜೇನುಗಾರ ಒಂದು ಪ್ರದೇಶದಲ್ಲಿ ಹೂವಿನ ಸುಗ್ಗಿ ಮುಗಿದ ಮೇಲೆ ಪುಷ್ಪಸಮೃದ್ಧ ವಾದ ಬೆಳೆಯಿರುವಲ್ಲಿಗೆ ತನ್ನ ಜೇನು ಪೆಟ್ಟಿಗೆ ಗಳನ್ನು ಸಾಗಿಸುತ್ತಾನೆ. ಇದಕ್ಕೆ ಸ್ಥಾನಾಂತರ ಜೇನುಗಾರಿಕೆ ಎನ್ನುತ್ತಾರೆ. ಈ ನವೀನ ಪದ್ಧತಿಯು ತೋಟಗಾರಿಕೆ, ತರಕಾರಿ ಮತ್ತು ಹಣ್ಣುಗಳ ಬೆಳೆ ಹಾಗೂ ಎಣ್ಣೆಕಾಳುಗಳ ಹುಟ್ಟು ವಳಿಗೆ ಹೊಸ ಆಯಾಮವನ್ನು ತಂದಿದೆ. ಈ ಬೆಳೆಗಳು ಹೂ ಬಿಡುವ ವೇಳೆಗೆ ಜೇನು ಪೆಟ್ಟಿಗೆ ಗಳನ್ನು ತೋಟ ಪಟ್ಟಿಗಳಲ್ಲಿರಿಸುವುದರಿಂದ ಜೇನ್ನೊಣಗಳ ಪರಾಗಸ್ಪರ್ಶದಿಂದಾಗಿ ಕೃಷಿಯ ಉತ್ಪಾದನೆ ಹೆಚ್ಚುವುದರೊಂದಿಗೆ, ಹೂವಿನಿಂದ ಹೀರಿದ ಮಕರಂದದಿಂದಾಗಿ ಪೆಟ್ಟಿಗೆಯಲ್ಲಿ ಜೇನು ಹೆಚ್ಚು ಹೆಚ್ಚು ಸಂಗ್ರಹವಾಗುತ್ತದೆ. ಪರಾಗಸ್ಪರ್ಶದಿಂದ ಕೃಷಿಯ ಉತ್ಪನ್ನ ಅದೆಷ್ಟು ಹೆಚ್ಚುತ್ತದೆಂದರೆ, ನಮ್ಮ ದೇಶದ ಹಲವಾರು

ಪ್ರಾಂತಗಳಲ್ಲಿ ಜೇನುಗಾರರಿಗೆ ಅವರ ಜೇನು ಗೂಡುಗಳು ಸಲ್ಲಿಸುವ ಈ ಸೇವೆಗಾಗಿ ಕೃಷಿಕರು ಪ್ರತಿಫಲವನ್ನು ನೀಡುತ್ತಾರೆ.

ಒಂದು ಕಿಲೋಗ್ರಾಂ ಮಧುವನ್ನು ಸಂಗ್ರಹಿಸಲು ಜೇನ್ನೊಣಗಳು ಲಕ್ಷ ಗಟ್ಟಲೆ ಪುಷ್ಪ ರಾಶಿಯನ್ನು ಸಂದರ್ಶಿಸಬೇಕಾಗುತ್ತದೆ. ಪ್ರತಿ ಜೇನು ಕುಟುಂಬ ತನ್ನ ಸ್ವಂತ ಬಳಕೆಗಾಗಿ ಹಾಗೂ ತನ್ನೊಡೆಯನಿಗೆ ಉತ್ಪಾದಿಸುವ ಜೇನನ್ನು ವರ್ಷಕ್ಕೆ ಇಪ್ಪತ್ತು ಕಿಲೋಗ್ರಾಂ ಎಂದು ಗಣಿಸಿದರೂ, ಈ ಕಿರಿಯ ಕೀಟಜೀವಿ ಸ್ಪರ್ಶಿಸುವ ಅಗಣಿತ ಪುಷ್ಪಕೋಟಿಯು ಕಲ್ಪನೆಯಾದೀತು!

ನಮ್ಮ ಹಲವಾರು ಬೆಳೆಗಳಿಗೆ ಪರಾಗೀಕರಣ ಅನಿವಾರ್ಯ. ಎಣ್ಣೆ ಕಾಳುಗಳಲ್ಲಿ ಸಾಸಿವೆ, ಕುಸಬಿ, ಸೂರ್ಯಕಾಂತಿ, ಅಗಸಿ; ದ್ವಿದಳ ಧಾನ್ಯಗಳಲ್ಲಿ ತೊಗರಿ, ಉದ್ದು, ಹೆಸರು, ಅವರೆ; ತರಕಾರಿಗಳಲ್ಲಿ ಕುಂಬಳ, ಸೌತೆ, ತೊಂಡೆ, ಪಡುವಲ, ಹಾಗಲ, ಹೀರೆ, ಗಜ್ಜರಿ, ಮೂಲಂಗಿ. ಕ್ಯಾಬೀಜ, ಹೂಕೋಸು, ಈರುಳ್ಳಿ; ಹಣ್ಣುಗಳಲ್ಲಿ ಮೋಸಂಬಿ. ಕಿತ್ತಳೆ, ಲಿಂಬೆ, ಪೇರಳೆ, ದಾಳಿಂಬೆ, ಸೇಬು ಮತ್ತು ಆರಳೆ. ಕಾಫೀ ಮತ್ತು ಏಲಕ್ಕಿ ಬೆಳೆಗೆ ಪರಾಗ ಸ್ಪರ್ಶ ಬೇಕೇ ಬೇಕು. ಪರಾಗೀಕರಣದಿಂದ ಉತ್ಪನ್ನ ಹೆಚ್ಚಾಗುವುದರೊಂದಿಗೆ, ಫಲದ ಗಾತ್ರ ಕೂಡ ಹೆಚ್ಚುತ್ತಲ್ಲದೆ ಅದರ ಬಣ್ಣ ಹೆಚ್ಚು ಆಕರ್ಷಕವಾಗುತ್ತದೆ.

ಇನ್ನಿತರ ಕೀಟಗಳ ನೆರವನ್ನು ಹೊರತುಪಡಿಸಿ ಕೇವಲ ಜೇನ್ನೊಣಗಳ ಸ್ಪರ್ಶ ಲಾಭದಿಂದ ಬೆಳೆಯ ಹೆಚ್ಚಳದ ಪ್ರಮಾಣ ಇಂತಿದೆ: ಸಾಸಿವೆ ೧೩೧%. ಕುಸಬಿ, ೫೧೨%, ಸೂರ್ಯಕಾಂತಿ ೬೭೫%, ಅಗಸಿ ೨೩೨%, ಈರುಳ್ಳಿ ೧೭೮%, ಗಜ್ಜರಿ ೫೦೦%, ಮೂಲಂಗಿ ೭೦೦%, ಬದನೆ ೨೫% ಮೋಸಂಬಿ, ಕಿತ್ತಳೆ ೩೫ ರಿಂದ ೯೦%, ಕಾಫಿ ೮೩%. ಭತ್ತ ಹಾಗೂ ಗೋದಿ ಬೆಳೆಗೆ ಪರಾಗೀಕರಣ ಬೇಕಿಲ್ಲ.

ಕೀಟಗಳಲ್ಲಿ ಜೇನ್ನೊಣಗಳು ಅತ್ಯಂತ ವಿಶ್ವಸನೀಯ ಹಾಗೂ ನಿಪುಣ ಪರಾಗೀಕರಣ ಮಾಡಬಲ್ಲವು. ಏಕೆಂದರೆ ಅವುಗಳಲ್ಲಿ ಸಾಮಾಜಿಕ-ಸುಸಂಘಟಿತ ಜೀವನ ಕ್ರಮವಿದೆ. ಸಾವಿರಾರು ಜೇನ್ನೊಣಗಳಿರುವ ಪೆಟ್ಟಿಗೆಯನ್ನು ಪುಷ್ಪ-ಸಮೃದ್ಧವಾದ ಯಾವುದೇ ಭಾಗಕ್ಕೆ ನಾವು ಕೊಂಡೊಯ್ದು ಅವನ್ನು ಇರಿಸಬಹುದು. ಈ ಸೌಲಭ್ಯ ಇತರ ಕೀಟಗಳ ವಿಷಯದಲ್ಲಿ ನಮ್ಮ ಕೈ ಮೀರಿದ ಮಾತು.

ಭಾರತದಲ್ಲಿ ಪರಾಗೀಕರಣದ ಪ್ರಜ್ಞೆ ಬೆಳೆಗಾರರಲ್ಲಿ ಹೆಚ್ಚಬೇಕು. ಗೊಬ್ಬರ, ನೀರು, ತಳಿ ಬೀಜಕ್ಕೆ ನೀಡುವ ಗಮನ ಮತ್ತು ಪ್ರಾಶಸ್ತ್ಯ ಕೃಷಿ ಉತ್ಪಾದನೆಯನ್ನು ಹೆಚ್ಚಿಸುವ ಈ ಹೊಸ ಅಂಶಕ್ಕೂ ಸಲ್ಲಬೇಕು.

ಜೇನುಗಾರಿಕೆಯ ಬೆಳವಣಿಗೆಯಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಅವು ಈ ಉದ್ದಿಮೆಗೆ ತೊಡಗುವವರಿಗೆ ಋಣ ಸಹಾಯವನ್ನು ನೀಡುತ್ತವೆ. ಜೇನು ಕುಟುಂಬದ ಮೇಲೆ ಇಂದು ನಮ್ಮ ದೇಶದಲ್ಲಿ ವಿಮೆ ಇಳಿಸಬಹುದಾದ್ದರಿಂದ ಮಧುವನದಿಂದ ತೋಟಪಟ್ಟಿಗಳಿಗೆ ಜೇನು ಗೂಡನ್ನು ಸಾಗಿಸುವಲ್ಲಿ ನಷ್ಟವಾಗುವ ಭಯವಿಲ್ಲ. ಜೇನ್ನೊಣಗಳು ತಮ್ಮ ಪರಾಗ ಸ್ಪರ್ಶದಿಂದ ನೀಡುವ ಲಾಭ ಅವು ನೇರವಾಗಿ ಜೇನಿನ ಉತ್ಪನ್ನದಿಂದ ಸಲ್ಲಿಸುವುದಕ್ಕಿಂತ ಕನಿಷ್ಠ ಹತ್ತು ಪಾಲು ಹೆಚ್ಚು ಎಂದು ವಿಜ್ಞಾನಿಗಳು ಗಣಿಸುತ್ತಾರೆ.

ಜೇನ್ನೊಣಗಳು ಇಲ್ಲದಿದ್ದಲ್ಲಿ ನಾವು ಕಾಣುವ ಹಲವು ಅಪೂರ್ವ ಸಸ್ಯರಾಶಿಗಳು ಪೃಥ್ವಿಯಿಂದ ಎಂದೋ ಕಣ್ಮರೆಯಾಗುತ್ತಿದ್ದವೆಂಬುದು ಸಸ್ಯತಜ್ಞರ ಎಚ್ಚರಿಕೆಯ ಮಾತು. ◇

# ಅಬ್ಬಾ, ಎಷ್ಟೊಂದು ವಿಶೇಷಾಂಕಗಳು!

ಚಿತ್ರ/ಲೇಖನ : **ಎನ್. ಸಿ. ದೇಸಾಯಿ**

ಮಹಾರಾಷ್ಟ್ರದಲ್ಲಿ ದೀಪಾವಳಿಗೆ ವಿಶೇಷವಾಗಿ ಎರಡು ವಸ್ತುಗಳನ್ನು ಬಹುತೇಕ ಎಲ್ಲರೂ ಕೊಳ್ಳುತ್ತಾರೆ. ಹಬ್ಬದ ಸಂಭ್ರಮಕ್ಕೆ ಇವು ಮೆಟ್ಟಿನ ಮೆರುಗನ್ನು ತರುತ್ತವೆ. ನಾನಾ ನಮೂನೆಯ ತರಾತರಾ ಮದ್ದುಗಳ ಸಿಡಿತ. ಪಟಾಕಿಗಳ ಮಿಂಚು ಮಕ್ಕಳಿಗೆ ಆನಂದವುಂಟು ಮಾಡಿದರೆ, ದೀಪಾವಳಿಯ ವಿಶೇಷಾಂಕಗಳು ಹೆಂಗಳೆಯರಿಗೆ ಹಿರಿಯರಿಗೆ ಮುದ ನೀಡುತ್ತವೆ. ಪಟಾಕಿಗಳಲ್ಲಿರುವ ವೈವಿಧ್ಯದ ಹಾಗೆಯೇ ಈ ವಿಶೇಷ ಸಂಚಿಕೆಗಳದ್ದೂ ಕೂಡ.

ಭಾರತೀಯ ಭಾಷೆಗಳಲ್ಲೇ ಹೆಚ್ಚು ಸಂಖ್ಯೆಯಲ್ಲಿ ದೀಪಾವಳಿ ವಿಶೇಷಾಂಕಗಳು ಪ್ರಕಟಗೊಳ್ಳುವುದು ಮರಾಠಿಯಲ್ಲೇ ಎನ್ನುವುದು ಅಚ್ಚರಿಯ ಸಂಗತಿ. (ಕನ್ನಡದಲ್ಲಿಷ್ಟು ಬರುತ್ತವೆ ಲೆಕ್ಕ ಹಾಕಿ) ಅದೂ ಒಂದಕ್ಕಿಂತ ಒಂದು ಸುಂದರ. ಮುದ್ರಣ ವಿನ್ಯಾಸಗಳಲ್ಲಿ, ಪುಟದ ಸಂಖ್ಯೆಗಳಲ್ಲಿ, ವರ್ಣ ವೈವಿಧ್ಯದಲ್ಲಿ, ವಿಷಯ ನಿರೂಪಣೆಯಲ್ಲಿ ಒಂದಕ್ಕಿಂತ ಒಂದು ಆಕರ್ಷಣೀಯ. ಕಳೆದ ವರ್ಷ (೧೯೮೩) ಪ್ರಕಟವಾದ ಮರಾಠಿ ದೀಪಾವಳಿ ಸಂಚಿಕೆಗಳು ಎಷ್ಟು ಗೊತ್ತೆ? ೩೦೦ಕ್ಕೂ ಹೆಚ್ಚು. ಇದರಲ್ಲಿ ದೈನಿಕ, ಸಾಪ್ತಾಹಿಕ, ಮಾಸಿಕ, ತ್ರೈಮಾಸಿಕ, ಹಾಗೂ ಕೆಲವು ನಿಯತಕಾಲಿಕೆಗಳ ವಾರ್ಷಿಕ

ಕೆಲವು ವರ್ಷಗಳ ಹಿಂದೆ ಮರಾಠಿ ದೀಪಾವಳಿ ವಿಶೇಷಾಂಕವೊಂದರ ಬೆಲೆ ೫ ಅಥವಾ ೬ ರೂಪಾಯಿ. (ಆಗ ಕನ್ನಡ ವಿಶೇಷಾಂಕಗಳ ಬೆಲೆ ಬಹುಶಃ ೩ ರೂಪಾಯಿಯೇನೊ.) ಕಳೆದ ವರ್ಷ ೧೦ ರಿಂದ ೧೬ ರೂಪಾಯಿಗಳ ವರೆಗೆ ಇದ್ದ ಈ ವಿಶೇಷಾಂಕಗಳ ಬೆಲೆ ಈ ವರ್ಷ ಕನಿಷ್ಠ ೨೦ ರೂಪಾಯಿಗಳಾಗಬಹುದು. ೧-೦೦ ರೂಪಾಯಿ ಬೆಲೆಯ ಕೆಲವೇ ಪುಟಗಳ ಒಂದು ಗ್ರಾಮ್ಯ ವಿಶೇಷಾಂಕ ಸಂಚಿಕೆಯೂ ಹೋದ ವರುಷ ಬಂತು.

ಕನ್ನಡದ ವಿಶೇಷಾಂಕಗಳು ಕಡಿಮೆ ಬೆಲೆ ಹಾಗೂ ಉತ್ಕೃಷ್ಟ ವಿಷಯಕ್ಕೆ ಹೆಸರಾಗಿವೆ ಎಂಬುದೊಂದು ಹೆಮ್ಮೆಯ ವಿಷಯ. ಆದರೆ ಪ್ರಕಟಗೊಳ್ಳುವ ಪತ್ರಿಕೆಗಳು ಕೈಬೆರಳ ಮೇಲೆಣಿಸುವಷ್ಟು ಎಂಬುದೊಂದೇ ಕೊರತೆ.



೧



೨

'ಆವಾಜ್' ವಿಶೇಷಾಂಕ, ಮೊದಲ ಪುಟ ಹೀಗಿದೆ!  ಅದನ್ನು ತೆರೆದು ನೋಡಿದರೆ ...?

ವಿಶೇಷಾಂಕಗಳಲ್ಲದೇ ದೀಪಾವಳಿಗೆಂದೇ ಪ್ರಕಟವಾಗುವ ವಿಶೇಷ ಸಂಚಿಕೆಗಳೂ ಸೇರಿವೆ.

ಬಹುಶಃ ಭಾರತದಲ್ಲಿ ದೀಪಾವಳಿ ವಿಶೇಷಾಂಕಗಳನ್ನು ಪ್ರಕಟಿಸಲಾರಂಭಿಸಿದ್ದೇ ಮರಾಠಿಯಲ್ಲಿ ಮೊಟ್ಟಮೊದಲಿರಬೇಕು. ೭೫ ವರ್ಷಗಳ ಹಿಂದೆ (೧೯೦೯ರಲ್ಲಿ) ಮುಂಬಯಿಯಲ್ಲಿ ಆಗಿನ 'ಮನೋರಂಜನ' ಎಂಬ ಮಾಸಪತ್ರಿಕೆ ಮೊಟ್ಟಮೊದಲ ದೀಪಾವಳಿ ಸಂಚಿಕೆಯನ್ನು ಪ್ರಕಟಿಸಿತು. ಈಗಿನಂತೆ ಪ್ರಚಾರಕ್ಕೆ ಪ್ರಸಾರಕ್ಕೆ, ಮಾರಾಟಕ್ಕೆ ವಿಶೇಷ ವ್ಯವಸ್ಥೆಗಳಿರಲಿಲ್ಲ, ಇಂದು ಕಾಣುವ ಸಾವಿರ ಸಂಖ್ಯೆಯ ಸ್ಟಾಲ್‌ಗಳೂ ಇರಲಿಲ್ಲ. ಏನೇ ಇದ್ದರೂ 'ಚಂದಾದಾರ'ರ ಮೂಲಕವೇ ವಿತರಣೆ ನಡೆಯಬೇಕಿತ್ತು. ಚಂದಾದಾರರ ಸಂಖ್ಯೆಯಷ್ಟೇ ಪ್ರತಿಗಳು ಮುದ್ರಗೊಳ್ಳುತ್ತಿದ್ದವು. 'ಮನೋರಂಜನ' ಪ್ರಕಟಿಸಿದ ಈ ವಿಶೇಷ ಸಂಚಿಕೆಯ ಮುದ್ರಿತ ಪ್ರತಿಗಳೆಷ್ಟು ಗೊತ್ತೆ? ಇಪ್ಪತ್ತು ಸಾವಿರ! ೧೯೦೯ರಲ್ಲಿ ಒಂದು ಪತ್ರಿಕೆ ೨೦೦೦೦ ಪ್ರತಿಗಳನ್ನು ಪ್ರಕಟಿಸಿತೆಂದರೆ ನಾವು ನಿಜವಾಗಿಯೂ ಅಚ್ಚರಿಗೊಳ್ಳಲೇಬೇಕು. (ಕನ್ನಡದಲ್ಲಿ ದೀಪಾವಳಿ ಸಂಚಿಕೆಗಳ ೨೦೦೦೦ ಪ್ರತಿಗಳನ್ನು ಪ್ರಕಟಿಸಲು ಹಿಂದೆ ಮುಂದೆ ನೋಡುತ್ತಿರಬೇಕು ಪ್ರಕಾಶನ ಸಂಸ್ಥೆಗಳು.)

'ಮನೋರಂಜನ'ದ ಯಶಸ್ಸು ಉಳಿದ ಪತ್ರಿಕೆಗಳಿಗೂ ಕುಮ್ಮಕ್ಕು ನೀಡಿರಬೇಕು. ಹೀಗಾಗಿ ದೀಪಾವಳಿ ಸಂಚಿಕೆಗಳ ಸಂಖ್ಯೆ ಹೆಚ್ಚತೊಡಗಿತು. ದೀಪಾವಳಿ ಸಮೀಪಿಸತೊಡಗಿದರೆ ಬಹುತೇಕ ಪತ್ರಿಕೆಗಳು ವಿಶೇಷ ಸಂಚಿಕೆಗಳ ಉತ್ಪಾದನೆಯಲ್ಲಿ ತೊಡಗುತ್ತಿದ್ದವು.

'ಕಿರ್ಲೋಸ್ಕರ್' ಪತ್ರಿಕೆ ಈ ದಿಶೆಯಲ್ಲಿ ಹೊಸ ತಿರುವು ನೀಡಿತು. ಮೊದಲಿಗಿಂತ ಹೆಚ್ಚು ಆಕರ್ಷಕವಾಗಿ (ವ್ಯಾಪಾರಿ) ದೃಷ್ಟಿಯಿಂದ ಮತ್ತು ಓದುಗರ ದೃಷ್ಟಿಯಿಂದ) ಇದು ಪ್ರಕಟಗೊಂಡಿತ್ತು. ಇದರ ಪ್ರತಿಸ್ಪರ್ಧಿಯೆಂಬಂತೆ 'ರತ್ನಾಕರ'ವೂ ವಿಶೇಷಾಂಕಗಳನ್ನು ಪ್ರಕಟಿಸ



ಇಕೋ ಇನ್ನಷ್ಟು



ಒಂದಕ್ಕಿಂತ ಒಂದು ಮಿಗಿಲು

ತೊಡಗಿತು. ಮುಂದೆ ಎಲ್ಲ ಪತ್ರಿಕೆಗಳೂ ಈ ಕ್ರಮವನ್ನು ಅನುಸರಿಸಿದವು.

ಒಂದಷ್ಟು ವರ್ಷಗಳುರುಳಿದ ಮೇಲೆ ಕೆಲವು ಕುಶಾಗ್ರಮತಿಗಳು ಕೇವಲ ವಿಶೇಷ ಸಂಚಿಕೆಗಳನ್ನು ಮಾತ್ರ ಪ್ರಕಟಿಸುವುದಕ್ಕೆ ಮೊದಲು ಮಾಡಿದರು. ಕಲೆ. ಸಾಹಿತ್ಯ, ಮನೋರಂಜನೆಗಳನ್ನೇ ಪ್ರಧಾನವಾಗಿಟ್ಟುಕೊಂಡು ಇಂಥವು ಹೊರಬರತೊಡಗಿದವು. ಅಂದಿನ ಸುಪ್ರಸಿದ್ಧ ಚಿತ್ರಕಾರರಾಗಿದ್ದ ದೀನಾನಾಥ ದಲಾಲರು ಪ್ರಕಟಿಸಲಾರಂಭಿಸಿದ 'ದೀಪಾವಲೀ' ಎಂಬ ವಿಶೇಷ ಸಂಚಿಕೆ ಬಹು ರಂಜನೀಯವಾಗಿ ಬಂತು. ಇನ್ನೊಬ್ಬ ಕಲಾವಿದ ಮುಳಗಾಂವಕರರೂ ಒಂದು ಪತ್ರಿಕೆಯನ್ನು ಪ್ರಾರಂಭಿಸಿದರು. ಇವರು ಪತ್ರಿಕಾರಂಗಕ್ಕಿಳಿದ ಮೇಲೆ ಇವುಗಳ ಸ್ವರೂಪವೇ ಬದಲಾಯಿತು. ಪತ್ರಿಕೆಗಳಿಗೆ ವಿಶೇಷ ಸಂಚಿಕೆಗಳಿಗೆ ಕಲಾತ್ಮಕತೆಯ ಮೆರುಗು ಸಿಗತೊಡಗಿತು. ಮುಖಪುಟ ಹಾಗೂ ಒಳ ಪುಟಗಳು ಹೆಚ್ಚು ಸಚಿತ್ರವಾಗಿ ವರ್ಣಮಯವಾಗಿ ವಿಶೇಷ ಚಿತ್ರಮಾಲಿಕೆಗಳೊಡನೆ ಬರತೊಡಗಿದುವು. ಮರಾಠಿ ವಾಚಕನ ಅಭಿರುಚಿಯನ್ನು ಬಲ್ಲ ಸಂಪಾದಕರು ತಕ್ಕ ಹೂರಣ ನೀಡತೊಡಗಿದರು. ವಿಶೇಷಾಂಕಗಳಿಗೆ ಬರೆಯುವವರಿಗೆ ಆರಾರು ತಿಂಗಳು ಮುಂಚಿತವಾಗಿ ಆಮಂತ್ರಣಗಳನ್ನು ಕಳಿಸ ತೊಡಗಿದರು.

ಆದರೆ ಪ್ರಕಟಗೊಳ್ಳುವುದೆಲ್ಲ ಪುಟವಿಕ್ಕಿದ ಚಿನ್ನವಲ್ಲ, ಇದರಲ್ಲಿ ಕೆಲವು ಜೊಳ್ಳು ಕಾಳುಗಳೂ ಇವೆ. ಕೇವಲ ಜಾಹಿರಾತು ಗಿಟ್ಟಿಸಿ ಕೆಲವೇ ಪ್ರತಿಗಳನ್ನು ಮುದ್ರಿಸಿ ಹಣ ಮಾಡಿಕೊಳ್ಳುವ ವಿಶೇಷ ಸಂಚಿಕೆಗಳ ಸಂಪಾದಕ-ಪ್ರಕಾಶಕರೂ ಇದ್ದಾರೆ. ದೊಡ್ಡ ಸರಕಾರಿ ಹುದ್ದೆಯಲ್ಲೊ, ಮತ್ತೆಲ್ಲೊ ಇದ್ದು, ಹಿರಿಯ ಕಂಪನಿಗಳಿಂದ ಸುಲಭವಾಗಿ ಜಾಹಿರಾತು ದೊರಕಿಸುವ

ಮಗುವಿಗೆ ಯಾವ ಹೆಸರಿಡಬೇಕೆಂಬುದು ತಂದೆ-ತಾಯಿಗಳಿಗೊಂದು ಸಮಸ್ಯೆಯಾಗುವುಲ್ಲವಾದರೂ ಪತ್ರಿಕೆಗಳ ಪಿತೃಗಳಿಗೆ ನಿಜವಾಗಿಯೂ ಇದೊಂದು ಸಮಸ್ಯೆಯೆ. ಒಂದು ವೇಳೆ ಯಾವುದಾದರೊಂದು ಹೆಸರನ್ನು ಆಯ್ಕೆ ಮಾಡಿಕೊಂಡರೂ ಮೇಲಿನವರು (ರಿಜಿಸ್ಟ್ರಾರ್ ಆಫ್ ನ್ಯೂಸ್ ಪೇಪರ್ಸ್) ಒಪ್ಪಲಿಕ್ಕಿಲ್ಲ.

ಮರಾಠಿ ವಿಶೇಷಾಂಕಗಳ ಹೆಸರುಗಳನ್ನು ನೋಡಿ, ಹೇಗಿವೆ?

'ಕಿರ್ಲೋಸ್ಕರ್' ಪತ್ರಿಕೆ ಬಂದು ಮನೆತನದ ಹೆಸರು ಹೊತ್ತು ಬಂದಿದೆ. ಇದೇ ರೀತಿ 'ಬಾವಾ', 'ನಾಳಿಂಬೆ', 'ಕಿರ್ನೇಕೆ', 'ಕಾರ್ಲೇಕರ್', 'ಘೋರೆ', 'ಟಾಗೋರ್ಕರ್' ಇತ್ಯಾದಿ.

'ಮಾಹೇರ್' (ತೌರು). 'ಮಾನಿನಿ', ಗೃಹಲಕ್ಷ್ಮಿ', 'ಗೃಹಸಾಮ್ರಾಜ್ಞಿ', 'ರಾಜಲಕ್ಷ್ಮಿ', 'ಸ್ವಾಮಿನಿ', 'ಮೇನಕಾ' ಇವು ಮಹಿಳೆಯರಿಗೆ ಮೀಸಲಾದುವು.

'ಭವಿಷ್ಯ ಆಣಿ ಉಪಾಸನಾ', 'ಭವಿಷ್ಯ ಅವರಿಗೆಗೆಷ್ಟು ಪ್ರಸಾರ !

'ಕಥಾಶ್ರೀ'-'ರಮ್ಯಕಥಾ' – 'ಉತ್ತಮ ಕಥಾ' - 'ಸಾಹಿತ್ಯದರ್ಪಣ' ಇವು ಬಹು ಜನಪ್ರಿಯ.

ಇನ್ನು ಕೆಲವು ವಿಚಿತ್ರ ಹೆಸರುಗಳನ್ನು ನೋಡಿ.

'ಕಕಾಕ', 'ಹಾಹಾಹಾ', 'ಕಟ್‌ಕಟ್', 'ಶಾಕ್‌ರಾಕ್', 'ಜಾಮ್ರೂ ಮಾಮ್ರೂ', 'ಜಾಯಿ ಜೂಯಿ', 'ಧುಮ್ ಧಮಾಲ್', 'ರೋಮಿಯೋ', 'ಇಬ್ಲಿಸ್', 'ಫಿರ್‌ಕೀ', 'ಭರಾರಿ', 'ಬಿಸಾರಾ', 'ಅಶ್ರೀಸ್', 'ಚಾಕ್‌ಲೇಟ್', 'ಟಾನಿಕ್', 'ಬುವಾಜಿ', 'ತಫಾನಾ'.

ಯೋಗ್ಯತೆಯುಳ್ಳ ಅಧಿಕಾರಿಗಳ ಪತ್ನಿಯರೇ ಸಂಪಾದಕರೂ ಪ್ರಕಾಶಕರೂ ಆಗಿರುವ ಉದಾಹರಣೆಗಳೂ ಉಂಟು.

ಸಾಮಾನ್ಯವಾಗಿ ಇತರ ಭಾಷೆಗಳಲ್ಲಿ ವಿಶೇಷಾಂಕ ಎಂದರೆ ಅದು ಎಲ್ಲ ರಂಗದ ಬಗ್ಗೆಯೂ ಮಾಹಿತಿ ನೀಡುವ–ಮನರಂಜಿಸುವ ಲೇಖನಗಳು ಚಿತ್ರಗಳ ಸಂಪುಟ ಎಂಬ ಭಾವನೆ. ಮರಾಠಿಯಲ್ಲಿಯೂ ಇಂಥ ಪತ್ರಿಕೆಗಳಿವೆಯಾದರೂ ಕೆಲ ಸಂಚಿಕೆಗಳು ಒಂದೊಂದು ವಿಷಯವನ್ನೇ ಪ್ರಧಾನವಾಗಿಟ್ಟುಕೊಂಡು ಹೊರಬರುತ್ತವೆ. ಇದು ಮರಾಠಿ ವಿಶೇಷಾಂಕಗಳ ವೈಶಿಷ್ಟ್ಯ.

ಲಲಿತ ಸಾಹಿತ್ಯದಿಂದ ಹಿಡಿದು ದಲಿತ ಸಾಹಿತ್ಯದ ವರೆಗೆ, ಜ್ಞಾನಮಯ ಲೇಖನಗಳಿಂದ ಹಿಡಿದು ವಿಜ್ಞಾನ ವಿಷಯದ ವರೆಗೆ, ಧಾರ್ಮಿಕ, ಆರೋಗ್ಯ, ಹಾಸ್ಯ, ರೋಚಕ (ಪತ್ತೆದಾರಿ), ಮಹಿಳೆ, ಮಕ್ಕಳು, ಭವಿಷ್ಯ, ಪ್ರವಾಸ, ನಾಟಕ, ಸಿನಿಮಾ, ಕ್ರೀಡೆ ಹೀಗೆ ಒಂದೊಂದು ವಿಭಾಗವನ್ನೇ ಪೂರ್ಣ ಸಂಚಿಕೆಗಾಗಿ ಮೀಸಲಿಡುವ ಪತ್ರಿಕೆಗಳಿಲ್ಲಿವೆ.

ಕಿರ್ಲೋಸ್ಕರ್, ವಾಙ್ಮಯ ಶೋಭಾ, ಸೋಬತ್, ಹಂಸ, ಸಹ್ಯಾದ್ರಿ, ಮೌಜ್ ಮುಂತಾದವು ಲಲಿತ ಸಾಹಿತ್ಯವನ್ನೇ ಪ್ರಧಾನವಾಗಿ ಪ್ರಕಟಿಸಿದರೆ, ಧರ್ಮಭಾಸ್ಕರ, ಜ್ಞಾನದೂತ, ಪ್ರಸಾದ, ಸಿದ್ಧಿಯೋಗ ಮುಂತಾದವುಗಳ ಗಮನ ಧಾರ್ಮಿಕ ಸಾಹಿತ್ಯದೆಡೆ. ಶತಾಯುಷಿ, ಆರೋಗ್ಯ ವೈಭವಗಳು ಆರೋಗ್ಯಕ್ಕೆ ಸಂಬಂಧಿಸಿದ ಹಳೆಯ ಪತ್ರಿಕೆಗಳು. ಫ್ಯಾಮಿಲಿ ಡಾಕ್ಟರ್ ಎಂಬುದು ಇದೇ ಗುಂಪಿಗೆ ಈಚೆಗೆ ಸೇರಿದ್ದು. ಆವಾಜ್, ಜಾತ್ರಾ, ಹಾಹಾಹಾ ಮುಂತಾದವು ಹಾಸ್ಯಕ್ಕೆ ಮೀಸಲು. ಹಾಸ್ಯಕತೆ, ವ್ಯಂಗ್ಯ ಲೇಖನ ಹರಟೆ, ವ್ಯಂಗ್ಯಚಿತ್ರಮಾಲಿಕೆ ಇವುಗಳ ಮಸಾಲೆ. ದಕ್ಷತಾ, ಗುನ್ಹೇಗಾರ, ಹೇರ್, ಕಾಕೋಡಕರ್ ಮುಂತಾದವು ರೋಚಕ (ಪತ್ತೇದಾರಿ) ಸಾಹಿತ್ಯ ನೀಡುತ್ತವೆ. ಪರ್ಯಟನ, ಭಟಕಂತಿ ಮುಂತಾದವು ಪ್ರವಾಸ ಸಾಹಿತ್ಯದ ಪತ್ರಿಕೆಗಳು. ವಿಜ್ಞಾನ ಯುಗ ವಿಜ್ಞಾನ ಪತ್ರಿಕೆ.

ಪುಣೆ ಈ ವಿಶೇಷಾಂಕಗಳನ್ನು ಹೆಚ್ಚು ಸಂಖ್ಯೆಯಲ್ಲಿ ಪ್ರಕಟಿಸುತ್ತವೆ. ಆದರೆ ಇವುಗಳ ಮಾರಾಟ ಮುಂಬೈಯಲ್ಲೇ ಹೆಚ್ಚು. ನಾಸಿಕ, ಕೊಲ್ಲಾಪುರ, ಸೊಲ್ಲಾಪುರ, ನಾಗಪುರಗಳಿಂದಲೂ ಕೆಲವು ವಿಶೇಷಾಂಕಗಳು ಬರುತ್ತವೆ.

ಮುಂಬೈಯಲ್ಲೇ ಏಕೆ ಇವು ಹೆಚ್ಚು ಸಂಖ್ಯೆಯಲ್ಲಿ ಮಾರಾಟವಾಗುತ್ತವೆ? ಉತ್ತರ ಬಹು ಸ್ಪಷ್ಟ. ನೌಕರರೆಲ್ಲ ಸೇರಿಕೊಂಡು ಹೆಚ್ಚು ಸಂಖ್ಯೆಯಲ್ಲಿ ವಾಚಕರ ಸಂಘಗಳನ್ನು ಮಾಡಿಕೊಂಡಿದ್ದಾರೆ. ಒಂದೊಂದು ಸಂಘವೂ ೪೦ರಿಂದ ೧೦೦ರ ವರೆಗೆ ವಿಶೇಷಾಂಕಗಳನ್ನು ಕೊಳ್ಳುತ್ತದೆ.

ಮರಾಠಿ ವಿಶೇಷಾಂಕಗಳಲ್ಲಿ ಅತಿ ಹೆಚ್ಚಿನ ಪ್ರಸಾರ ಸಂಖ್ಯೆ ೭೦ ಸಾವಿರವಾದರೆ ಅತಿ ಕಡಿಮೆಯೆಂದರೆ ೫೦೦. ಕೇವಲ ಜಾಹಿರಾತಿಗಾಗಿ ಹೊರಡುವ ಸಂಚಿಕೆಗಳ ಪ್ರಸಾರ ಸಂಖ್ಯೆ ಬಹುತೇಕ ಕಡಿಮೆ.

ಹಾಸ್ಯ ಸಂಚಿಕೆಗಳಿಗೆ ಮಾರಾಟದಲ್ಲಿ ಮೊದಲ ಸ್ಥಾನ.

ಆಫ್‌ಸೆಟ್ ಬಂದಿರುವುದೊಂದು ಈ ಪತ್ರಿಕೆಗಳಿಗೆ ವರದಾನವಾಗಿದೆ. ಹೀಗಾಗಿ ಒಂದು ಅಂದಾಜಿನ ಪ್ರಕಾರ ಮಹಾರಾಷ್ಟ್ರದಲ್ಲಿ ಪ್ರಕಟಗೊಳ್ಳುವ ದೀಪಾವಳಿ ಸಂಚಿಕೆಗಳ ವ್ಯಾಪಾರದ ಮೊತ್ತ ಒಂದು ಕೋಟಿ ರೂಪಾಯಿ ದಾಟುತ್ತದೆ. ಜಾಹಿರಾತಿನ ಮೂಲಕ ಬರುವ ಆದಾಯ ೪೦ ಲಕ್ಷದಷ್ಟು. ಹೀಗಿರುವಾಗ ವರ್ಷದ ಅನ್ನ ವೈಭೋಗದ ಸಂಪಾದನೆಗಾಗುವಷ್ಟನ್ನು ವರ್ಷಕ್ಕೊಂದು ವಿಶೇಷಾಂಕ ಪ್ರಕಟಿಸಿ ಗಿಟ್ಟಿಸಿಕೊಳ್ಳುವವರೇ ಹೆಚ್ಚು.

ಮುಂಬಯಿ ಮರಾಠಿ ಪತ್ರಕರ್ತರ ಸಂಘ ಈ ದಿಶೆಯಲ್ಲಿ ಒಂದು ಹೊಸ ಹೆಜ್ಜೆಯಿಟ್ಟಿದೆ. ಇಂಥ ವಿಶೇಷಾಂಕಗಳ ಮುದ್ರಣ–ವಿನ್ಯಾಸ ಹಾಗೂ ಗುಣಮಟ್ಟದ ಏರಿಕೆಗಾಗಿ ಪ್ರದರ್ಶನ ಹಾಗೂ ಸ್ಪರ್ಧೆಯೇರ್ಪಡಿಸಿ ಗೆದ್ದವುಗಳಿಗೆ ಬಹುಮಾನ ನೀಡುತ್ತಾರೆ. ಇದೇ ರೀತಿ ಮರಾಠಿ ಸಾಹಿತ್ಯ ಸಂಘವೂ ಒಂದು ಯೋಜನೆಯಿರಿಸಿಕೊಂಡಿದೆಯೆಂದು ತಿಳಿದಿದೆ.



# ಹತ್ತು ರೂಪಾಯಿ

ಆತ ಅವಳಿಗಳಲ್ಲೊಬ್ಬ. ಶಾಲೆಯಿಂದ ಮನೆಗೆ ಹೊರಟಾಗ, ದಾರಿಯಲ್ಲಿ- "ಅರೆ! ಹತ್ತು ರೂಪಾಯಿಯ ನೋಟು!" ಗಕ್ಕನೇ ಎತ್ತಿಕೊಂಡ. ಜೇಬಿಗಿಳಿಸಿದ. ಅಲ್ಲಿಯೇ ನಿಂತರೇ ಯಾರಾದರೂ ನೋಡಿಯಾರೆಂಬ ಭಯ.

ಮನೆಗೆ ಬಂದವನೆ ನೇರವಾಗಿ ತನ್ನ ಕೋಣೆಗೆ ಹೋದ. "ಹತ್ತು ರೂಪಾಯಿಯ ನೋಟನ್ನು ಏನು ಮಾಡುವುದು? ಅಪ್ಪ ಅಮ್ಮನಿಗೆ ಗೊತ್ತಾದರೆ ಬೈಯುತ್ತಾರಲ್ಲ. ಎಲ್ಲಿಯಾದರೂ ಬಚ್ಚಿಡಬೇಕು" ಎಂದು ಅತ್ತಿತ್ತ ನೋಡುತ್ತಿದ್ದಂತೆಯೇ ಗೋಡೆಯಲ್ಲೊಂದು ದೊಡ್ಡ ಬಿರುಕು ಬಿಟ್ಟಿರುವುದು ಕಾಣಿಸಿತು. ಕೈಯಿಂದ ಅದನ್ನು ಮತ್ತಷ್ಟು ಕೆರೆದು ಆ ನೋಟನ್ನು ಅದರಲ್ಲಿ ಇಟ್ಟು ಮತ್ತೆ ಮಣ್ಣು ಮೆತ್ತಿ ನೆಮ್ಮದಿಯ ಉಸಿರು ಬಿಟ್ಟ.

"ಆದರೆ ಈ ಗೋಡೆಯನ್ನು ಮೆತ್ತಿರುವುದು ಯಾರೆಂದು ಯಾರಾದರೂ ಕೇಳಿದರೆ ಹೇಗೆ?" ಎಂದುಕೊಂಡವನೆ ಬಣ್ಣದ ಬಳಪದಿಂದ 'ಇಲ್ಲಿ ಹತ್ತು ರೂಪಾಯಿ ನೋಟು ಇರುವದಿಲ್ಲ' ಎಂದು ಬರೆದು ಹೆಮ್ಮೆಯಿಂದ ಅಲ್ಲಿಂದ ಹೊರಟ. ಮಧ್ಯಾಹ್ನ ಮತ್ತೆ ಶಾಲೆಗೆ ಹೋಗಬೇಕಲ್ಲ.

ಕೆಲ ನಿಮಿಷಗಳಲ್ಲಿಯೇ ಅವಳಿಗಳಲ್ಲಿನ್ನೊಬ್ಬ ಅಲ್ಲಿಗೆ ಬಂದ. ಶಾಲೆಗೆ ಹೋಗುವ ಹೊತ್ತಾಗಿತ್ತು. ಪುಸ್ತಕಗಳನ್ನೆತ್ತಿಕೊಳ್ಳುವಾಗ ಮೆತ್ತಿದ್ದ ಗೋಡೆ ಹಾಗೂ ಆ ಬರೆದ ಕಂಡವು. ತಲೆ ಚುರುಕಾಯಿತು. ಗೋಡೆಯನ್ನು ಕೆರೆದ. ಹತ್ತು ರೂಪಾಯಿಯ ನೋಟನ್ನು ಎತ್ತಿಕೊಂಡು ಜೇಬಿಗಿಳಿಸಿದ.

"ನಾನೇ ತೆಗೆದುಕೊಂಡಿರುವನೆಂಬ ಸಂಶಯ ಉಂಟಾದರೆ?" ಎಂದುಕೊಂಡವನೆ ಗೋಡೆಯನ್ನು ಮೊದಲಿನಂತೆ ಮೆತ್ತಿದ. ಆದರೂ ಸಮಾಧಾನವಾಗಲಿಲ್ಲ. ಮತ್ತೆ ಯೋಚಿಸಿದ. ಬಳಪ ಎತ್ತಿಕೊಂಡ. "ಈ ಗೋಡೆಯೊಳಗಿನ ಹತ್ತು ರೂಪಾಯಿಯ ನೋಟನ್ನು ನಾನು ತೆಗೆದುಕೊಂಡಿಲ್ಲ-ದೇವರಾಣೆಯಾಗಿಯೂ" ಎಂದು ಬರೆದವನೇ ಶಾಲೆಗೆ ಹೊರಟ.

–ನಾಗೇಶ ಜಿ. ವೈದ್ಯ

# ಗ್ರಂಥಪಾಲ ದೇಶಪಾಂಡೆ

ಶ್ರೀನಿವಾಸ ವಾಡಪ್ಪಿ

ಪುರಾತನ ಕಾಲದಿಂದಲೂ ಮಾನವ ತನ್ನ ಮುಂಬರುವ ಪೀಳಿಗೆಗಳಿಗಾಗಿ ತನ್ನ ಅನುಭವಗಳನ್ನು ತಾನು ಸಂಗ್ರಹಿಸಿದ ಜ್ಞಾನವನ್ನು ಒಂದಲ್ಲೊಂದು ರೀತಿ ದಾಖಲಿಸುತ್ತ ಬಂದಿದ್ದಾನೆ. ಈಜಿಪ್ತ್, ಬೆಬಿಲೋನಿಯಾ ಸಂಸ್ಕೃತಿಗಳಿಂದ ಹಿಡಿದು ಭಾರತೀಯ ಸಂಸ್ಕೃತಿ ಪರಂಪರೆಯ ಪುಟಗಳಲ್ಲಿ ಇಂತಹ ಅನೇಕಾನೇಕ ನಿದರ್ಶನಗಳು ನಮಗೆ ದೊರೆಯುತ್ತವೆ. ಇಂತಹ ಅಪಾರ ಜ್ಞಾನಸಂಗ್ರಹವನ್ನು ನಮ್ಮ ಪೂರ್ವಜರು ನಿಧಿಯಂತೆ ಕಾಯುತ್ತ ಬಂದರು. ವಿಜ್ಞಾನ ಮತ್ತು ತಂತ್ರಜ್ಞಾನಗಳಲ್ಲಾದ ಆವಿಷ್ಕಾರದಿಂದಾಗಿ ಜ್ಞಾನ ದ್ವಿಗುಣಗೊಳ್ಳುವುದರ ಮೂಲಕ ಉಂಟಾದ ಹೊಸ ಹೊಸ ಸಂವೇದನೆಗಳು ಸಾಂದ್ರೀಕೃತಗೊಂಡಿದ್ದು ಗ್ರಂಥಾಲಯಗಳಲ್ಲಿ ಹೀಗೆ ಹಲವು ಮುಖಗಳಾಗಿ ಹರಿದುಬರುವ ಜ್ಞಾನವನ್ನು ವ್ಯವಸ್ಥಿತವಾಗಿ ಹಿಡಿದು ಅದನ್ನು



ರಾಷ್ಟ್ರೀಯ ಗ್ರಂಥಪಾಲರಾಗಿದ್ದ ಶ್ರೀ ಬಿ. ಎಸ್. ಕೇಶವನ್ ಮತ್ತು ರಾಷ್ಟ್ರಪತಿ ಡಾ. ರಾಧಾಕೃಷ್ಣನ್ನರೊಂದಿಗೆ ಶ್ರೀ ದೇಶಪಾಂಡೆಯವರು

ಓದುಗರಿಗೆ ತಲುಪಿಸುವ ಕಾರ್ಯ ಬಹಳ ಗುರುತರವಾದ ಸಾಹಸವೇ ಆಗತೊಡಗಿದಾಗ, ಸಹಜವಾಗಿಯೇ ಗ್ರಂಥಾಲಯ ವಿಜ್ಞಾನ ಬಹಳ ತ್ವರಿತ ಗತಿಯಿಂದ ಮುನ್ನಡೆದು ಬದುಕಿನ ಎಲ್ಲ ಸ್ತರಗಳಲ್ಲೂ ತನ್ನ ವೈಶಿಷ್ಟ್ಯವನ್ನು ಮೆರೆಯುತ್ತದೆ.

ವಿದೇಶಗಳಲ್ಲಿ ಮೆಲವಿಲ್ ಡೆವೀ ಮತ್ತು ಶೇಯರ್ಸ್‌ರಂತಹ ವ್ಯಕ್ತಿಗಳಿಂದ ಗ್ರಂಥಾಲಯ ವಿಜ್ಞಾನ ಆರಂಭಗೊಂಡರೆ ಭಾರತದಲ್ಲಿ ಡಾ. ಎಸ್. ಆರ್. ರಂಗನಾಥನ್‌ರಂತಹ ಪ್ರತಿಭಾನ್ವಿತರಿಂದ ಗ್ರಂಥಾಲಯ ಶಾಸ್ತ್ರ ಹೊಸ ಆಯಾಮ ಕಂಡುಕೊಂಡಿತು. ಮುಂಬಯಿ ವಿಶ್ವವಿದ್ಯಾಲಯದ ಗ್ರಂಥಪಾಲ ಪ್ರೊ. ಮಾರ್ಶಲ್, ಕಲಕತ್ತಾದಲ್ಲಿರುವ ರಾಷ್ಟ್ರೀಯ ಗ್ರಂಥಾಲಯದ ಶ್ರೀ ಬಿ. ಎಸ್. ಕೇಶವನ್, ದಿಲ್ಲಿ ವಿಶ್ವವಿದ್ಯಾಲಯದ ಶ್ರೀ ದಾಸಗುಪ್ತಾ, ಮದ್ರಾಸ ವಿಶ್ವವಿದ್ಯಾಲಯದ ಡಾ. ಕೃಷ್ಣರಾಯರಂತಹ ಅನೇಕ ಮಹನೀಯರು ಗ್ರಂಥಪಾಲಕತನಕ್ಕೆ ಹಿರಿಮೆ ತಂದುಕೊಟ್ಟರು. ಇಂತಹ ವಿದ್ವಾಂಸರ ಸಾಲಿನಲ್ಲಿ ಹೆಸರಿಸಬೇಕಾಗಿರುವ ಇನ್ನೊಂದು ಮಹತ್ವದ ಹೆಸರೆಂದರೆ ಶ್ರೀ ಕೆ. ಎಸ್. ದೇಶಪಾಂಡೆಯವರದು. ೩೫ ವರುಷಗಳ ಕಾಲ ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯದ ಕರ್ಣಧಾರತ್ವವನ್ನು ವಹಿಸಿದ್ದ ದೇಶಪಾಂಡೆಯವರು ತಮ್ಮ ಬದುಕನ್ನೆಲ್ಲ ಗ್ರಂಥಾಲಯದ ಏಳಿಗೆಗಾಗಿಯೇ ಮುಡುಪಾಗಿಟ್ಟಿದ್ದಾರೆಂಬುದದು ಗ್ರಂಥಾಲಯ ಬಲ್ಲವರೆಲ್ಲ ತಿಳಿದ ವಿಷಯವೇ ಆಗಿದೆ.

ದೇಶಪಾಂಡೆಯವರ ಮನೆತನದ ಹಿರಿಯರೆಲ್ಲರೂ ತುಂಬಾ ಸುಸಂಸ್ಕೃತರು. ದೇಶಪಾಂಡೆಯವರ ತಾತ ಶ್ರೀ ರಾ. ಹ. ದೇಶಪಾಂಡೆ ಉತ್ತರ ಕರ್ನಾಟಕದಲ್ಲಿ ಮೊದಲ ಎಂ. ಎ. ಗಳಿಸಿದ ಖ್ಯಾತಿಗೆ ಪಾತ್ರರು. ಅದಕ್ಕಾಗಿಯೇ ಈಗಲೂ ಅವರ ಮನೆಯನ್ನು ಎಂ. ಎ. ದೇಶಪಾಂಡೆಯವರ ಮನೆಯೆಂದೇ ಗುರುತಿಸಲಾಗುತ್ತಿದೆ. ರಾ. ಹ. ದೇಶಪಾಂಡೆಯವರು ಕನ್ನಡದ ಏಳಿಗೆಗಾಗಿ ಕರ್ನಾಟಕತ್ವದ ನವನಿರ್ಮಾಣಕ್ಕಾಗಿ ಉದಯಿಸಿದ ಕರ್ನಾಟಕ ವಿದ್ಯಾವರ್ಧಕ ಸಂಘದ ಮೂಲ ಪ್ರವರ್ತಕರು. ಅವರು ತಮ್ಮ ತನುಮನಧನವನ್ನೆಲ್ಲ ಈ ಸಂಸ್ಥೆಯ ಏಳಿಗೆಗಾಗಿಯೇ ಮೀಸಲಿಟ್ಟರು. ಅನೇಕ ಪುಸ್ತಕಗಳನ್ನು ಬರೆಯುವದರ ಮೂಲಕ ಕನ್ನಡಿಗರಲ್ಲಿ ಬೆಳೆದುಬಂದಿದ್ದ ನೈಚ್ಯಭಾವವನ್ನು ತೊಲಗಿಸಲು ಹೋರಾಡಿದ ಈ ವ್ಯಕ್ತಿ ನಿಜಕ್ಕೂ

---

ಕೇಂದ್ರದ ವಿತ್ತ ಮಂತ್ರಿಗಳಾಗಿ ಭಾರತೀಯ ರಿಜರ್ವ್ ಬ್ಯಾಂಕಿನ ಪ್ರಥಮ ಗವರ್ನರರಾಗಿ ವಿಶ್ವವಿದ್ಯಾಲಯದ ಧನಸಹಾಯ ಆಯೋಗದ ಅಧ್ಯಕ್ಷರಾಗಿ ದಕ್ಷ ಆಯ್. ಸಿ. ಎಸ್. ಅಧಿಕಾರಿಗಳಾಗಿ ಸೇವೆ ಸಲ್ಲಿಸಿದ ಡಾ. ಸಿ.ಡಿ. ದೇಶಮುಖರು ಜಗದ್ವಿಖ್ಯಾತ ವ್ಯಕ್ತಿ. ಇಂತಹ ವ್ಯಕ್ತಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ೧೯೫೭ರಲ್ಲಿ ಭೇಟಿ ಇತ್ತರು. ವಿಶ್ವವಿದ್ಯಾಲಯದ ಗ್ರಂಥಾಲಯ ಸಂದರ್ಶಿಸಲು ೫ ನಿಮಿಷ ಮಾತ್ರ ಅವಕಾಶವಿತ್ತಂತೆ. ಆದರೆ ದೇಶಪಾಂಡೆಯವರೊಡನೆ ಗ್ರಂಥಾಲಯಗಳನ್ನು ಪುನರ್ ರೂಪಿಸುವ ಅನೇಕ ಮಹತ್ವದ ವಿಷಯಗಳನ್ನು ಮಾತನಾಡಿದ ದೇಶಮುಖರು ಮುಕ್ಕಾಲು ಗಂಟೆ ಅವರೊಡನೆ ಚರ್ಚಿಸಿ ತಮ್ಮ ನಡುವೆ ಆದ ಮಾತುಕತೆಯನ್ನು ವಿವರವಾಗಿ ಬರೆದು ಕಳಿಸಬೇಕೆಂದು ಸಲಹೆ ಇತ್ತರು. ಹೀಗೆ ಕಳಿಸಿದ ಟಿಪ್ಪಣಿಯನ್ನು ದೇಶಮುಖರು ಭಾರತದ ಎಲ್ಲ ವಿಶ್ವವಿದ್ಯಾಲಯಗಳಿಗೆ ಕಳಿಸಿ ಅದನ್ನು ಕಾರ್ಯಗತಗೊಳಿಸುವ ಬಗ್ಗೆ ಸೂಚನೆಗಳನ್ನು ಕೇಳಿದರಂತೆ. ಗ್ರಂಥಾಲಯ ವಿಶ್ವವಿದ್ಯಾಲಯದ ಹೃದಯವಿದ್ದಂತೆ ಎಂಬ ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರ ಉಕ್ತಿಯನ್ನು ತತ್ವಶಃ ಕಾರ್ಯರೂಪಕ್ಕೆ ತಂದ ಶ್ರೇಯಸ್ಸು ದೇಶಮುಖರಿಗೆ ಸಲ್ಲುತ್ತದೆ. ಇವರ ಒಡನಾಟ ದೇಶಪಾಂಡೆಯವರ ಜ್ಞಾನದ ಪರಿಧಿಯನ್ನು ವಿಸ್ತರಿಸಿತು.

ಪ್ರಾತಃಸ್ಮರಣೀಯರು. ಇವರ ಪರಂಪರೆಯನ್ನೇ ಮುಂದುವರೆಸಿಕೊಂಡು ಬಂದ ದೇಶಪಾಂಡೆಯವರ ತಂದೆ ಶ್ರೀಪಾದ ದೇಶಪಾಂಡೆಯವರು ಪುಸ್ತಕ ಮಾರಾಟವನ್ನು ತಮ್ಮ ವ್ಯವಸಾಯವನ್ನಾಗಿಸಿಕೊಂಡರು. ಇಂತಹ ಪರಿಸರದಲ್ಲಿಯೇ ಜನಿಸಿದ ಕೆ. ಎಸ್. ದೇಶಪಾಂಡೆಯವರ ಜೀವನದಲ್ಲಿ ಪುಸ್ತಕ ಪ್ರೇಮ ಪುಸ್ತಕ ವಾಚನ ಹಾಸುಹೊಕ್ಕಾಗಿ ಬೆಳೆದು ಬಂದವು.

ದೇಶಪಾಂಡೆಯವರು ಮುಂಬಯಿ ವಿಶ್ವವಿದ್ಯಾಲಯದಿಂದ ಆಂಗ್ಲ ಭಾಷೆಯಲ್ಲಿ ಸ್ನಾತಕೋತ್ತರ ಪದವಿ ಗಳಿಸಿದ ನಂತರ ಪ್ರೊ. ಮಾರ್ಶಲ್‌ರ ನಿರ್ದೇಶನದಲ್ಲಿ ತಮ್ಮ ಗ್ರಂಥಾಲಯ ವಿಜ್ಞಾನದ ತರಬೇತಿ ಪಡೆದರು. ಆದಾದ ನಂತರ ಮಾರ್ಶಲ್‌ರ ಆದೇಶದ ಮೇರೆಗೆ ಕರ್ನಾಟಕವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿರಿಸಿಕೊಂಡು ಗ್ರಂಥಾಲಯಗಳ ಶಾಸ್ತ್ರೀಯ ಬೆಳವಣಿಗೆಗೆ ನಾಂದಿ ಹಾಡಿದರು.

ದೇಶಪಾಂಡೆಯವರು ಧಾರವಾಡಕ್ಕೆ ಮರಳಿ ಬಂದಾಗ ನೂತನ ವಿಶ್ವವಿದ್ಯಾಲಯದ ಗ್ರಂಥಾಲಯದ ಅಸ್ತಿಭಾರವನ್ನು ಹಾಕಿ ಅದನ್ನು ಬೃಹತ್ತಾಗಿ ಬೆಳೆಸುವ ಸದಾವಕಾಶ ಕೈ ಬೀಸಿ ಕರೆಯುತ್ತಿತ್ತು. ಅದೇ ಸಮಯದಲ್ಲಿ ಗ್ರಂಥಾ

---

ಬೆಳಿಗ್ಗೆ ೧೧ ಗಂಟೆಯ ಸಮಯ. ದೇಶಪಾಂಡೆಯವರು ಆಗ ತಾನೆ ಗ್ರಂಥಾಲಯಕ್ಕೆ ಬಂದಿದ್ದರು. ಟೇಬಲ್ ಮೇಲೆ ರಾಶಿಯಾಗಿ ಬಿದ್ದಿದ್ದ ಪತ್ರಗಳಲ್ಲಿಯ ಒಂದು ಪತ್ರವನ್ನು ತುಂಬಾ ಉತ್ಸಾಹದಿಂದ ಮೈಮರೆತು ಓದತೊಡಗಿದರು. ಆಗ ಅವರ ಎದುರಿಗೆ ಇರುವ ಕುರ್ಚಿಯ ಮೇಲೆ ಹಿರಿಯರೊಬ್ಬರು ಬಂದು ಕುಳಿತರು. ಪತ್ರ ಓದುತ್ತಿದ್ದ ದೇಶಪಾಂಡೆಯವರ ಗಮನಕ್ಕೆ ಇದು ಬರಲಿಲ್ಲ. ಪತ್ರ ಓದಿ ಆದ ಮೇಲೆ ತಲೆಯೆತ್ತಿದಾಗ ಕುಳಿತ ವಯೋವೃದ್ಧರನ್ನು ನೋಡಿ ಅವರನ್ನು ಗಮನಿಸದಿದ್ದುದಕ್ಕೆ ಕ್ಷಮೆ ಯಾಚಿಸಿದರಂತೆ. ಆ ಹಿರಿಯರು ಮುಗುಳ್ನಕ್ಕು "ಏನು ತುಂಬಾ ಮೈ ಮರೆತು ಪತ್ರ ಓದುತ್ತಿದ್ದರಲ್ಲ; ಏನು ಪ್ರಿಯತಮೆಯ ಪತ್ರವೊ!? ಎಂದು ಚೇಷ್ಟೆ ಮಾಡಿದರಂತೆ. ದೇಶಪಾಂಡೆಯವರು ಮಂದಸ್ಮಿತರಾಗಿ "ಹಾಗೇನೂ ಇಲ್ಲ ತಮಗೆ ನಾನು ಏನು ಸೇವೆ ಮಾಡಬಹುದು? ಎಂದರಂತೆ ಆ ವ್ಯಕ್ತಿ ಹೇಳಿದರು, "ನಾನು ಕಳೆದ ಎರಡು ವಾರಗಳಿಂದ ಒಂದು ಪತ್ರಿಕೆಗಾಗಿ ಪರದಾಟ ನಡೆಸಿದ್ದೇನೆ ಅದು ಎಲ್ಲಿಯೂ ಸಿಕ್ಕಲಿಲ್ಲ. ಇದರಿಂದಾಗಿ ಮಹತ್ವದ ಸಂಶೋಧನೆಯೊಂದಕ್ಕೆ ತಡೆ ಉಂಟಾಗಿದೆ. ಅದು ನಿಮ್ಮಲ್ಲಿ ಸಿಗಬಹುದೇನೋ ಎಂಬ ಆಶೆಯಿಂದ ಬಂದಿದ್ದೇನೆ" ಎಂದು. ದೇಶಪಾಂಡೆಯಗವರು ಆ ಪತ್ರಿಕೆ ತಮ್ಮಲ್ಲಿ ಇರುವುದಾಗಿ ಹೇಳಿ "ನಿಮಗೆ ವಯಸ್ಸಾಗಿದೆ. ೫೦ ೬೦ ಮೆಟ್ಟಲುಗಳನ್ನು ಏರಿ ಮೇಲೆ ಹತ್ತುವದು ನಿಮಗೆ ತೊಂದರೆಯಾಗುತ್ತದೆ. ನಾನು ನಿಮಗೆ ಈ ಪತ್ರಿಕೆಯನ್ನು ಇಲ್ಲಿಯೇ ತಂದು ಕೊಡುತ್ತೇನೆ. ದಯವಿಟ್ಟು ಕುಳಿತಿರಿ." ಎಂದರು. ಆ ಪತ್ರಿಕೆ ನಿಮ್ಮಲ್ಲಿ ಇರುವದಾದರೆ ಇನ್ನೂ ೫೦-೬೦ ಮೆಟ್ಟಲಗಳನ್ನು ಖಂಡಿತವಾಗಿ ಹತ್ತುತ್ತೇನೆ ನಡೆಯಿರಿ" ಎಂದು ಎದ್ದು ನಿಂತರು ವೃದ್ಧರು. ಮಹಡಿಯ ಮೇಲೆ ಆ ಪತ್ರಿಕೆ ದೊರೆತಾಗ ಆ ವಯೋವೃದ್ಧರ ಮುಖ ಬೆಳಗಿತಂತೆ. ಆ ಘಟನೆಯನ್ನು ನೆನಪಿಸಿಕೊಂಡ ದೇಶಪಾಂಡೆಯವರು ಹೇಳುತ್ತಾರೆ." ಆ ಕ್ಷಣದಲ್ಲಿ ನನ್ನ ಬಳಿ ಒಂದು ಕ್ಯಾಮರಾ ಇರಬೇಕಾಗಿತ್ತು, ಅವರ ಮೊಗದ ಮೇಲಿನ ಸಂತಸ ಹಿಡಿಯಲು! ಎಷ್ಟೊಂದು ಜ್ಞಾನ ಪಿಪಾಸೆ ಅವರಿಗೆ!" ಅವರಲ್ಲಿಗೆ ಬಂದ ವ್ಯಕ್ತಿ ಯಾರು ಗೊತ್ತೆ? ಮತ್ತಾರೂ ಅಲ್ಲ ನೊಬೆಲ್ ಪಾರಿತೋಷಕ ವಿಜೇತ ಡಾ. ಸಿ. ವಿ. ರಾಮನ್.

ಲಯ ಬೆಳವಣಿಗೆ ಭಾರತದಲ್ಲಿ ಕಾಲಿರಿಸಿತ್ತು. ಈ ಭಾಗದಲ್ಲಿ ಅದು ಇನ್ನೂ ಉದಯವಾಗುವುದರಲ್ಲಿತ್ತು. ದೇಶಪಾಂಡೆಯವರೇ ಹೇಳುವಂತೆ ಗ್ರಂಥಾಲಯ ಕ್ಷೇತ್ರದಲ್ಲಿ ಕೃಷಿಗೈಯಲು ಆಕಾಶವೇ ಮಿತಿಯಾಗಿತ್ತು.

ಗ್ರಂಥಾಲಯ ಕಟ್ಟುವ ರಚನಾತ್ಮಕ ಕಾರ್ಯಗಳಲ್ಲಿ ಆಗ ಉಪಕುಲಪತಿಗಳಾಗಿದ್ದ ರ್‍ಯಾಂಗ್ಲರ್ ಡಾ. ಡಿ. ಸಿ. ಪಾವಟೆಯವರು ಬಹುವಾಗಿ ಸಹಕರಿಸಿದರು. ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಅದರ ಗ್ರಂಥಾಲಯ ಬೆಳೆಯುವಲ್ಲಿ ಪಾವಟೆಯವರ ಅನನ್ಯಶ್ರದ್ಧೆ ಅಪಾರ ಜ್ಞಾನ, ಅಪರಿಮಿತ ಉತ್ಸಾಹ ದೇಶಪಾಂಡೆಯವರ ತರುಣ ಜೀವಕ್ಕೆ ಹೊಸ ಚೈತನ್ಯ ಒದಗಿಸಿದವು. ಇಂತಹ ಹಿರಿಯರ ಆದರ್ಶಗಳನ್ನು ಮುಂದಿಟ್ಟುಕೊಂಡ ದೇಶಪಾಂಡೆಯವರು ಆಮೇಲೆ ಹಿಂತಿರುಗಿ ನೋಡಲಿಲ್ಲ. ತಮ್ಮಲ್ಲಿ ಮಡುಗಟ್ಟಿದ ಜ್ಞಾನವನ್ನೂ ಪ್ರತಿಭೆಯನ್ನೂ ಗ್ರಂಥಾಲಯದ ಬೆಳವಣಿಗೆಗಾಗಿ ಮೀಸಲಾಗಿಟ್ಟರು. ಇವರ ಅಸಾಧಾರಣ ಕಾರ್ಯ ಪ್ರತಿಭೆಯನ್ನು ಗುರುತಿಸಿದ ಭಾರತ ಸರಕಾರ ಇವರನ್ನು ಅಮೇರಿಕದ ಗ್ರಂಥಾಲಯಗಳನ್ನು ಸಂದರ್ಶಿಸಲು ಕಳಿಸಿಕೊಟ್ಟಿತು. ದೇಶಪಾಂಡೆಯವರು ಇದರ ಪೂರ್ಣ ಪ್ರಯೋಜನ ಪಡೆದರಲ್ಲದೇ ಗ್ರಂಥಾಲಯ ವಿಜ್ಞಾನದಲ್ಲಿಯ ಹೊಸ ಅಲೆಗಳನ್ನು ತಮ್ಮ ಕಾರ್ಯ ವಿಧಾನಗಳಲ್ಲಿ ಅಳವಡಿಸಿಕೊಂಡರು.

ಇದಾದ ನಂತರ ಕರ್ನಾಟಕ ವಿಶ್ವವಿದ್ಯಾಲಯವೊಂದೇ ಇವರ ಕಾರ್ಯಕ್ಷೇತ್ರವಾಗಿ ಉಳಿಯಲಿಲ್ಲ. ಭಾರತದ ಅನೇಕ ವಿಶ್ವವಿದ್ಯಾಲಯಗಳು ಇವರ ಗ್ರಂಥಾಲಯ ವಿಜ್ಞಾನದಲ್ಲಿರುವ ಆಳವಾದ ಪಾಂಡಿತ್ಯದ ಪ್ರಯೋಜನ ಪಡೆದುಕೊಂಡವು.

ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯ ವಿಶಿಷ್ಟವಾಗಿ ರೂಪುಗೊಳ್ಳುತ್ತಿರುವ ದಿನಗಳಲ್ಲಿಯೇ ಇನ್ನೊಂದು ಗಮನಾರ್ಹ ಕಾರ್ಯದ ರೂಪರೇಖೆಗಳು ಒಡಮೂಡಿದ ಕಾರಣವಾಗಿ ವಿಶ್ವವಿದ್ಯಾಲಯ ಸ್ನಾತಕೋತ್ತರ ಗ್ರಂಥಾಲಯ ತರಬೇತಿ ಶಾಲೆಯೊಂದನ್ನು ಪ್ರಾರಂಭಿಸಿತು. ಇದರ ಸಾರಥ್ಯವನ್ನು ದೇಶಪಾಂಡೆಯವರು ವಹಿಸಿದರು. ಇವರಲ್ಲಿದ್ದ ಅಸ್ಪೃಶ್ಯ ಜ್ಞಾನಪ್ರಭೆಯಿಂದಾಗಿ ಶಾಲೆಗೆ ಒಂದು ವಿಶೇಷ ಕಳೆ ಕಟ್ಟಿತು. ಇದೇ ಸಮಯಕ್ಕೆ ಮೈಸೂರು ವಿಶ್ವವಿದ್ಯಾಲಯ ಇವರ ಅಮೂಲ್ಯ ಸೇವೆಯ ಲಾಭ ಪಡೆಯಬೇಕೆಂಬ ಉದ್ದೇಶದಿಂದ ಇವರನ್ನು ಗ್ರಂಥಪಾಲ ಹಾಗೂ ಗೌರವ ಪ್ರಾಧ್ಯಾಪಕರನ್ನಾಗಿ ನೇಮಿಸಿಕೊಂಡಿತು. ಇದಾದ ನಂತರ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಗ್ರಂಥಪಾಲರಾಗಿ ಸೇವೆಸಲ್ಲಿಸಿದರಲ್ಲದೇ ಜ್ಞಾನ ಭಾರತಿಯಲ್ಲಿ ಪ್ರಾರಂಭವಾಗಬೇಕಾಗಿದ್ದ ವಿಶ್ವವಿದ್ಯಾಲಯ ಗ್ರಂಥಾಲಯದ ನೂತನ ಕಟ್ಟಡದ ರೂಪರೇಷೆಯನ್ನು ವೈಜ್ಞಾನಿಕವಾಗಿ ರೂಪಿಸಿದರು.

ಮೈಸೂರು ವಿಶ್ವವಿದ್ಯಾಲಯದ ಗ್ರಂಥಪಾಲಕರಾಗಿದ್ದಾಗ ಮಂಗಳೂರಿನ ಸ್ನಾತಕೋತ್ತರ ಗ್ರಂಥಾಲಯವನ್ನು ಹಾಗೂ ಕರ್ನಾಟಕ ವಿಶ್ವವಿದ್ಯಾಲಯದ ಗುಲಬುರ್ಗಾ ಸ್ನಾತಕೋತ್ತರ ಕೇಂದ್ರದ ಗ್ರಂಥಾಲಯವನ್ನು ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಾಗುವ ಬಗ್ಗೆ ವರದಿ ಸಲ್ಲಿಸಿದರು. ಹಾಗೆ ನೋಡಿದರೆ ಕರ್ನಾಟಕ ರಾಜ್ಯದಲ್ಲಿರುವ ಎಲ್ಲ ವಿಶ್ವವಿದ್ಯಾಲಯಗಳು ಇವರ ಸೇವೆಯ ಲಾಭ ಪಡೆದುಕೊಂಡಿವೆ. ಇಂತಹ ಪ್ರತಿಭಾವಂತರ ಸೇವೆ ತಮ್ಮ ಸಂಸ್ಥೆಗೆ ಲಭಿಸಲಿ ಎಂದು ಅನೇಕ ಹಿರಿಯ ವ್ಯಕ್ತಿಗಳು ಪೈಪೋಟಿಗೆ ಇಳಿದದ್ದು ಸಹಜವೇ. ನಾರ್ತ್ ಈಸ್ಟರ್ನ್ ಹಿಲ್ ವಿಶ್ವವಿದ್ಯಾಲಯದ ಗ್ರಂಥಪಾಲ ಹಾಗೂ ಪ್ರಾಧ್ಯಾಪಕ ಸ್ಥಾನವನ್ನು ವಹಿಸಿಕೊಳ್ಳಲು ಬಹಳ ಒತ್ತಡ ಬಂದರೂ ದೇಶಪಾಂಡೆಯವರ ಸೇವೆಯನ್ನು ಬಿಟ್ಟುಕೊಡಲು ಕರ್ನಾಟಕ ವಿಶ್ವವಿದ್ಯಾಲಯ ಹಿಂದೇಟು ಹಾಕಿತು. ಇದರಂತೆಯೇ ಇಂತಹ ಅನೇಕ ಮಹತ್ವದ ಸ್ಥಾನಗಳು ದೇಶಪಾಂಡೆಯವರನ್ನು ಹುಡುಕಿಕೊಂಡು ಬಂದವು. ಆದರೆ ಅಂತಹ ಸಂಸ್ಥೆಗಳಿಗೆ ವಿಶ್ವವಿದ್ಯಾಲಯದಲ್ಲಿ ಸ್ಥಾಯಿಯಾಗಿ ಇದ್ದುಕೊಂಡೆ ತಮ್ಮ ಮಾರ್ಗದರ್ಶನ ನೀಡುತ್ತ ಬಂದರು.

ದೇಶಪಾಂಡೆಯವರು ತಮ್ಮ ಸೇವಾವಧಿ

ಯಲ್ಲಿ ಅನೇಕ ವಿಶ್ವವಿದ್ಯಾಲಯಗಳ ಗ್ರಂಥಾಲಯ ವಿಜ್ಞಾನ ಸ್ನಾತಕೋತ್ತರ ವಿಷಯಗಳ ಪಾಠಕ್ರಮಗಳನ್ನು ರೂಪಿಸಿದ್ದಾರೆ. ವಿಶ್ವವಿದ್ಯಾಲಯದ ಧನಸಹಾಯ ಆಯೋಗದ ಸದಸ್ಯರಾಗಿ ಗ್ರಂಥಾಲಯ ಕಟ್ಟಡಗಳ ವಿನ್ಯಾಸಗಳ ಬಗ್ಗೆ ವರದಿ ಸಲ್ಲಿಸಿದ್ದಾರೆ. ನೂರಾರು ರಾಷ್ಟ್ರೀಯ ಅಂತಾರಾಷ್ಟ್ರೀಯ ಸೆಮಿನಾರುಗಳಲ್ಲಿ ಪಾಲುಗೊಂಡು ತಮ್ಮ ಅನುಭವದ ಜ್ಞಾನವನ್ನು ಹಂಚಿದ್ದಾರೆ. ೯೦ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸಿದ್ದಾರೆ. ಗ್ರಂಥಾಲಯ ಕುರಿತಾದ ಆರು ಪುಸ್ತಕಗಳನ್ನು ಹೊರತಂದಿದ್ದಾರೆ. ಇವರ ಮಾರ್ಗದರ್ಶನದಲ್ಲಿ ಅನೇಕ ವಿದ್ಯಾರ್ಥಿಗಳು ಪಿಎಚ್.ಡಿ. ಪದವಿ ಗಳಿಸಿದ್ದಾರೆ. ಗೋವಾ, ದೀವ ಮತ್ತು ದಮನ ಸರ್ಕಾರದ ಗ್ರಂಥಾಲಯ ಸಮಿತಿಯ ಸಲಹೆಗಾರರಾಗಿ ಸಾರ್ವಜನಿಕ ಗ್ರಂಥಾಲಯಗಳನ್ನು ರಚಿಸುವ ಬಗ್ಗೆ ವಿಶೇಷ ವರದಿ ಸಲ್ಲಿಸಿದ್ದಾರೆ. ಇಂತಹ ಅನೇಕ ಕಾರ್ಯಗಳನ್ನು ಲೀಲಾಜಾಲವಾಗಿ ಮುಗಿಸುವ ಕಾರ್ಯಕ್ಷಮತೆ ಅವರ ಬದುಕಿನ ಸಹಜ ಗುಣವಾಗಿದೆ.

ಗ್ರಂಥಾಲಯ ವಿಜ್ಞಾನದಲ್ಲಿ ಆಗುತ್ತಿರುವ ಆವಿಷ್ಕಾರಗಳನ್ನು ಗ್ರಂಥೋದ್ಯಮಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಅವುಗಳಿಗೆ ತಕ್ಕ ಪರಿಹಾರವನ್ನು ಗ್ರಂಥಾಲಯಗಳ ಬಗ್ಗೆ ಹಾಗೂ ಗ್ರಂಥಗಳ ಬಗ್ಗೆ ಜನರ ಅಭಿರುಚಿಯನ್ನು ಮೂಡಿಸುವ ಸಫಲಯತ್ನವನ್ನು ಅನೇಕ ವರುಷಗಳಿಂದ ಇವರು ಮಾಡುತ್ತ ಬಂದಿದ್ದಾರೆ. ಅವಕ್ಕಾಗಿಯೇ ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯ ವಿಜ್ಞಾನ ಸಂಘದ ಆಶ್ರಯದಲ್ಲಿ ಕಳೆದ ೨೨ ವರುಷಗಳಿಂದ ಟ್ರೈವರ್‌ಲೆಸ್ ಫೆಲೋಶಿಪ್' ಎಂಬ ವಾರ್ಷಿಕ ಪತ್ರಿಕೆಯನ್ನು ಹೊರಡಿಸುತ್ತ ಬಂದಿದ್ದಾರೆ. ಅವರ ಸಂಪಾದಕರಾಗಿ ಅಹರ್ನಿಶಿ ದುಡಿದಿದ್ದಾರೆ. ಇವರ ಕಾರ್ಯಸಾಫಲ್ಯವನ್ನು ಕಂಡ ದಿಲ್ಲಿಯ ಭಾರತೀಯ ಗ್ರಂಥಾಲಯ ಅಭಿವೃದ್ಧಿ ಸಂಸ್ಥೆಯು ಇನ್ನೊಂದು ಗ್ರಂಥಾಲಯ ವಿಜ್ಞಾನ ಕುರಿತಾದ ಷಾಣ್ಮಾಸಿಕ ಪತ್ರಿಕೆ ತರಲು ಯೋಚಿಸಿ ಅದಕ್ಕೆ ದೇಶಪಾಂಡೆಯವರನ್ನು ಸಂಪಾದಕರಾಗಲು ಕೇಳಿಕೊಂಡಿತು. ಈಗ ಈ ಪತ್ರಿಕೆಯನ್ನು ಹೊರತರುವ ಹೊಣೆ ದೇಶಪಾಂಡೆಯವರದಾಗಿದೆ. ಕರ್ನಾಟಕ ವಿಶ್ವವಿದ್ಯಾಲಯ ಅವರನ್ನು ಗ್ರಂಥಪಾಲ ಹುದ್ದೆಯಿಂದ ನಿವೃತ್ತಿಗೊಳಿಸಿರಬಹುದಾದರೂ ಗ್ರಂಥಾಲಯ ವಿಜ್ಞಾನ ಅವರನ್ನು ಕೆಲಸದಿಂದ ನಿವೃತ್ತಿಗೊಳಿಸಿಲ್ಲ. ನಿವೃತ್ತರಾಗಿಯೂ ದಿನದ ಬಹುತೇಕ ಸಮಯವನ್ನು ಇಂತಹ ಕೆಲಸಕ್ಕಾಗಿಯೇ ಮೀಸಲಾಗಿಟ್ಟಿರುವದರಿಂದ ಅವರಲ್ಲಿ ತಾರುಣ್ಯದ ಲವಲವಿಕೆ ಈಗಲೂ ಎದ್ದು ಕಾಣುತ್ತದೆ.

ಗ್ರಂಥಪಾಲನನ್ನು 'ಪ್ರಾಧ್ಯಾಪಕರ ಪ್ರಾಧ್ಯಾಪಕ' ಎಂದು ಕರೆಯುವ ವಾಡಿಕೆ ಇದೆ. ಇದು ದೇಶಪಾಂಡೆಯವರ ಮಟ್ಟಿಗಂತೂ ನೂರಕ್ಕೆ ನೂರು ಸತ್ಯ. ಜ್ಞಾನಾರ್ಥಿಗಳಾಗಿ ಬರುವ ಸಾವಿರಾರು ವಿದ್ಯಾರ್ಥಿಗಳಿಗೆ ಪ್ರಾಧ್ಯಾಪಕರಿಗೆ ಯಾವಾಗಲೂ ನಗುಮೊಗದ ಸ್ವಾಗತವಿತ್ತು, ಅವರಿಗೆ ಪುಸ್ತಕ ಓದುವ ಚಟವನ್ನು ಹಚ್ಚುವ ಸಮ್ಮೋಹಿನಿ ಶಕ್ತಿ ಇವರಲ್ಲಿದೆ. ಗ್ರಂಥಾಲಯ ವಿಜ್ಞಾನವನ್ನೇ ತಮ್ಮ ವಿಷಯವನ್ನಾಗಿ ಆಯ್ದುಕೊಂಡ ವಿದ್ಯಾರ್ಥಿಗಳಿಗಂತಲೂ ಅವರ ಉಪನ್ಯಾಸಗಳೆಂದರೆ ಸ್ಫೂರ್ತಿಯ ಸೆಲೆ. ಅವರ ವಿಷಯ ಪ್ರತಿಪಾದನಾ ಶೈಲಿ, ಭಾಷೆಯ ಮೇಲಿನ ಅಪೂರ್ವ ಪ್ರಭುತ್ವ, ಇದಕ್ಕೆಲ್ಲಾ ಮಿಗಿಲಾಗಿ ಗ್ರಂಥಾಲಯ ಶಾಸ್ತ್ರದ ಬಗ್ಗೆ ಅವರಿಗೆ ಇರುವ ಅತ್ಯಂತ ಕಾಳಜಿ ವಿದ್ಯಾರ್ಥಿಗಳನ್ನು ಬೇರೊಂದು ಲೋಕಕ್ಕೆ ಕರೆದೊಯ್ಯುತ್ತವೆ. ಅವರೊಂದು ಚಲಿಸುವ ವಿಶ್ವಕೋಶ. ದೇಶಪಾಂಡೆಯವರು ತಮ್ಮನ್ನು ಯಾವುದೇ ಕಾರ್ಯದಲ್ಲಿ ತೊಡಗಿಸಿಕೊಂಡರೂ ಅದರಲ್ಲಿ ಸಂಪೂರ್ಣವಾಗಿ ಮೈಮರೆಯುವ ಸ್ವಭಾವ ಅವರದು. ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ದೇಶಪಾಂಡೆಯವರ ಅನುಪಸ್ಥಿತಿಯಲ್ಲಿ ಸಪ್ಪಗಾಗಿಬಿಡುತ್ತವೆ. ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯಾಧ್ಯಕ್ಷರಾಗಿ, ಭಾರತೀಯ ಕುಟುಂಬ ಯೋಜನೆ ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾಗಿ, ಧಾರವಾಡ ಜಿಲ್ಲೆಯ ಭಾರತಸ್ಕೌಟ್ಸ್ ಮತ್ತು ಗಾಯಿಡ್ಸ್‌ನ ಉಪಾಧ್ಯಕ್ಷರಾಗಿ ಇಂತಹ ಇನ್ನೂ ಹತ್ತು ಹಲವಾರು ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇಂತಹ

ಬಿಡುವಿರದ ಕೆಲಸಗಳಲ್ಲಿ ಅವರು ಸದಾ ಹಸನ್ಮುಖರಾಗಿರುತ್ತಾರೆ.

ದೇಶಪಾಂಡೆಯವರು ಮಕ್ಕಳ ವಿಶ್ವಕೋಶವಾದ ಜ್ಞಾನಗಂಗೋತ್ರಿಯ ಸಂಪಾದಕೀಯ ಮಂಡಳಿಯ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಇದಕ್ಕೂ ಹೆಚ್ಚಾಗಿ ಮೈಸೂರು ವಿಶ್ವವಿದ್ಯಾಲಯ ಹೊರತಂದ ಕನ್ನಡ ಗ್ರಂಥಸೂಚಿ ದೇಶಪಾಂಡೆಯವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ. ಓದು ಪ್ರತಿಯೊಬ್ಬನ ಜನ್ಮಸಿದ್ಧ ಹಕ್ಕು ಎಂಬ ವಾದಸರಣಿ ಅವರದಾಗಿದೆ. ಬಡವ–ಬಲ್ಲಿದ ಮೇಲು–ಕೀಳು ಎಂಬ ತಾರತಮ್ಯವಿಲ್ಲದೇ ತಮ್ಮ ಬದುಕಿನುದ್ದಕ್ಕೂ ಗ್ರಂಥಾಲಯಗಳ ಮೂಲಕ ಜ್ಞಾನವನ್ನು ಹಂಚುತ್ತ ಬಂದಿದ್ದಾರೆ. ಸದಾ ಕಾರ್ಯತತ್ಪರರಾಗಿ ಮುಂಬರುವ ಪೀಳಿಗೆಗಳ ದಿನಗಳನ್ನು ಸುಂದರವಾಗಿರುವ ಇವರ ಕೈಂಕರ್ಯವನ್ನು ಕಂಡು ಡಾ. ಪ್ರಭುಶಂಕರ ಕನ್ನಡ ಗ್ರಂಥಸೂಚಿಯ ತಮ್ಮ ಮೊದಲ ಮಾತುಗಳಲ್ಲಿ ದೇಶಪಾಂಡೆಯವರನ್ನು ಹೀಗೆ ಕಂಡುಕೊಂಡಿದ್ದಾರೆ: "ದೇಶಪಾಂಡೆಯವರು ಪ್ರಸನ್ನತೆಯ ದ್ವೀಪ, ಕಾರ್ಯತತ್ಪರತೆಯ ಮೂರ್ತಿ ಸ್ವರೂಪ, ನಿಷ್ಕಾಮಕರ್ಮಕ್ಕೆ ಸಜೀವ ಭಾಷ್ಯ. ಈ ಯೋಜನೆಯನ್ನೇ ಕನ್ನಡ ಗ್ರಂಥಸೂಚಿಯನ್ನು ಶಾಸ್ತ್ರೀಯವಾಗಿ ರೂಪಿಸಿದವರು ಅವರು. ಇದು ಇಂದಿಗೆ ರೂಪ ತಾಳಿ ಪ್ರಕಾಶನಕ್ಕೆ ಸಿದ್ಧಗೊಳಿಸುವವರೆಗೂ ಕಾತುರರಾಗಿ ದುಡಿದರವರು. ಅದು ಎಂತಹ ದುಡಿಮೆ! ಸಹಾಯಕ ಸಂಶೋಧಕರಿಗೆ ತರಬೇತಿ ನೀಡುವಾಗ ಮೊದಲು ಮೈಸೂರು ಅನಂತರ ಬೆಂಗಳೂರು ವಿಶ್ವವಿದ್ಯಾಲಯಗಳಿಗೆ ಸಲ್ಲಿಸಬೇಕಾದ ೧೦ ಗಂಟೆಗಳ ದುಡಿಮೆಯ ನಂತರ ಗಂಟೆಗಟ್ಟಲೆ ರಾತ್ರಿ ಸರಿ ಹೊತ್ತಿನವರೆಗೂ ಕುಳಿತು ೪೦–೫೦ ಸಾವಿರ ಪಟ್ಟಿಕೆಗಳನ್ನು ಮತ್ತೆ ಮತ್ತೆ ತಿದ್ದುತ್ತಿದ್ದಾಗ ಬೆಂಗಳೂರಿನಿಂದ ಅನಂತರ ಧಾರವಾಡದಿಂದ ಕರೆದ ಕೂಡಲೇ ಧಾವಿಸಿಬರುತ್ತಿದ್ದರಲ್ಲದೇ ಬಂದ ತಕ್ಷಣದಿಂದಲೇ ದುಡಿಯಲು ತೊಡಗುತ್ತಿದ್ದಾಗ ಅವರನ್ನು ನೋಡಬೇಕಿತ್ತು. ಅವರಿಗೆ ಕನ್ನಡ ಗ್ರಂಥಸೂಚಿಯ ಸೃಷ್ಟಿ ಮೂಜಗವಾಯ್ತು". ಈ ಮಾತುಗಳನ್ನು ಡಾ. ಪ್ರಭುಶಂಕರ ಅಷ್ಟೇ ಅಲ್ಲ ದೇಶಪಾಂಡೆಯವರನ್ನು ತಿಳಿದ ಎಲ್ಲರೂ ಹೇಳುವ ಮಾತು.

ದೇಶಪಾಂಡೆಯವರನ್ನು ಗ್ರಂಥಾಲಯ ವಿಜ್ಞಾನದತ್ತ ಸೆಳೆದ ಪ್ರೊ| ಮಾರ್ಶಲ್ಲರು ತುಂಬಾ ಮೇಧಾವಿಗಳು. I.C.S. ಪರೀಕ್ಷೆ ಪಾಸು ಮಾಡಿದ ಖ್ಯಾತಿ ಅವರದು, ಆದರೂ ಅವರಿಗೆ I.C.S. ಹುದ್ದೆ ದೊರೆಯಲಿಲ್ಲ. ಯಾಕೆ ಗೊತ್ತೆ? ಪ್ರೊ ಮಾರ್ಶಲ್‌ರ ತಾತ ಬ್ರಿಟನ್ನಿನ ದೊರೆ ಮುಂಬಯಿಗೆ ಆಗಮಿಸುವಾಗ ಅವರನ್ನು ಗೌರವಾದರಗಳಿಂದ ಸ್ವಾಗತಿಸಲು ದೊಡ್ಡ ಹಂದರವೊಂದನ್ನು ಹಾಕಿಸುವ ಕಾಂಟ್ರಾಕ್ಟ್ ದೊರಕಿಸಿಕೊಂಡಿದ್ದರಂತೆ. ಹಂದರವನ್ನು ಅಚ್ಚುಕಟ್ಟಾಗಿ ಹಾಕಿ ಆಯಿತು. ಕೊನೆಯ ಗಳಿಗೆಯಲ್ಲಿ ಗವರ್ನರ್ ಸಿದ್ಧತೆಗಳನ್ನು ಪರೀಕ್ಷಿಸುತ್ತ ಬಂದಾಗ ಒಂದೆಡೆಗೆ ಕಾರ್ಪೆಟ್ ಹಾಕಬೇಕೆಂದು ಸಲಹೆ ಇತ್ತರಂತೆ. ಕಾಂಟ್ರಾಕ್ಟ್ ಕೊಡುವ ಮೊದಲು ಈ ರೀತಿ ಕರಾರು ಆಗಿಲ್ಲವೆಂದು ತಿಳಿಸಿದ ಮಾರ್ಶಲ್‌ರ ತಾತ ಈಗ ಕಾರ್ಪೆಟ್ ಹಾಕುವದು ಸಾಧ್ಯವಿಲ್ಲವೆಂದು ಖಡಾಖಂಡಿತವಾಗಿ ಹೇಳಿದರಂತೆ. ಇದನ್ನೇ ಮನಸ್ಸಿನಲ್ಲಿ ಇಟ್ಟುಕೊಂಡು ಗವರ್ನರ್ ಇವರ ವರ್ತನೆಯನ್ನು ವ್ಹಾಯಿಸರಾಯರಿಗೆ ವರದಿ ಮಾಡಿ ಮಾರ್ಶಲರ ಕುಟುಂಬಕ್ಕೆ ಸರಕಾರಿ ನೌಕರಿ ಸಿಗದಂತೆ ಶರಾ ಬರೆದರಂತೆ. ಈ ರೀತಿ ಬರೆದ ಶರಾ ಗ್ರಂಥಾಲಯ ವಿಜ್ಞಾನದ ಮಟ್ಟಿಗಂತೂ ವರಪ್ರದವಾಗಿ ಪರಿಣಮಿಸಿತು. ಪ್ರೊ. ಮಾರ್ಶಲರಂತಹ ಮೇಧಾವಿ ಗ್ರಂಥಾಲಯ ವಿಜ್ಞಾನಕ್ಕೆ ದೊರಕಿದರು. ಅದಕ್ಕಾಗಿ ದೇಶಪಾಂಡೆಯವರು ಈಗಲೂ ಆ ಕಾರ್ಪೆಟ್‌ಗೆ ನಮನ ಸಲ್ಲಿಸುತ್ತಾರೆ. 

ಥೇಬ್ಸ್‌ನಲ್ಲಿಯ ಗ್ರಂಥಾಲಯದ ಮುಂಬಾಗಿಲ ಚೌಕಟ್ಟಿನ ಮೇಲೆ ಕೊರೆಯಲಾದ ಮಾತಿದು: "ಆತ್ಮಕ್ಕೀದೋ ಔಷಧಿ ಇಲ್ಲಿದೆ." –ಡಯೋಡೋರಸ್ ಸಿಕ್ಯುಲಸ್

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

**ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.**

೧. **ತಾಪತ್ರಯ**
(ಅ) ಭಾರೀ ಜ್ವರ (ಆ) ಬಲು ಕಷ್ಟ (ಇ) ಮೂರು ತರದ ಅಡಿಗೆ (ಈ) ಕಠಿನ ತಪಸ್ಸು.

೨. **ಪುಕಾರು**
(ಅ) ಧರ್ಮಕ್ಕೆ ಸಿಕ್ಕಿದ್ದು (ಆ) ಕೌಶಲ್ಯ (ಇ) ರೀತಿ (ಈ) ದೂರು

೩. **ಇಂಚರ**
(ಅ) ಅಂಗುಲ (ಆ) ಅಡವಿ (ಇ) ಸವಿ ದನಿ (ಈ) ಪಕ್ಕಿ

೪. **ಗೆಡೆಗೊಳ್ಳು**
(ಅ) ಕೂಡಿಕೊಳ್ಳು (ಆ) ಆಯುಧ ಹಿಡಿ (ಇ) ಮುತ್ತಿಗೆ ಹಾಕು (ಈ) ಸತ್ತು ಹೋಗು

೫. **ಅಪರಿಹಾರ್ಯ**
(ಅ) ತಪ್ಪಿಸಲಾರದ (ಆ) ಸಾಧ್ಯ (ಇ) ಎಲ್ಲೆ ಇಲ್ಲದ (ಈ) ಕದಿಯಲಾರದ

೬. **ಧೋರಣೆ**
(ಅ) ನೊಗ (ಆ) ರೀತಿ (ಇ) ಯುದ್ಧ (ಈ) ಭೂಮಿ

೭. **ಪಡಂಹಾಕು**
(ಅ) ಪಶ್ಚಿಮಕ್ಕೆ ಸರಿ (ಆ) ಕೆಡಹು (ಇ) ಹಾಳು ಮಾಡು (ಈ) ತಡೆ

೮. **ಆಕಲನ**
(ಅ) ಕಳೆಯುವಿಕೆ (ಆ) ಕಸಿದುಕೊಳ್ಳುವಿಕೆ (ಇ) ವಿಷಯ ಗ್ರಹಣ (ಈ) ಲೆಕ್ಕ ಮಾಡುವುದು.

೯. **ಕಂಠರವ**
(ಅ) ಬೊಬ್ಬಾಟ (ಆ) ಗಟ್ಟಿಯಾಗಿ ಹೇಳುವುದು (ಇ) ಸಿಂಹ (ಈ) ಒಂದು ತರದ ಆಭರಣ

೧೦. **ಅಕ್ಕಲು**
(ಅ) ಇಂಗುವಿಕೆ (ಆ) ಕೂಡಿಸುವಿಕೆ (ಇ) ಬುದ್ಧಿ (ಈ) ಬರಗಾಲ

೧೧. **ಅಕ್ಕಸ**
(ಅ) ರೋಷ (ಆ) ಬಂಗಾರದ ಕೆಲಸ (ಇ) ನಾಣ್ಯ (ಈ) ಗಗನ

೧೨. **ಭಾವೀ**
(ಅ) ಸಂಸಾರಿಕ (ಆ) ನೆಲ (ಇ) ನೆನಪು (ಈ) ಮುಂದೆ ಆಗುವಂಥಾ

## 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ತಾಪತ್ರಯ** (ಅ) ಬಲು ಕಷ್ಟ, ಅಡಚಣೆ; ಆಧಿದೈವಿಕ (ದೇವತೆಗಳಿಂದೊದಗಿದ) ಆದಿಭೌತಿಕ (ಈ ಲೋಕದಿಂದಾದ), ಅಧ್ಯಾತ್ಮಿಕ (ಆತ್ಮಕ್ಕೆ ಸಂಬಂಧಿಸಿದ) ಮೂರುಬಗೆಯ ಕಷ್ಟ. [ಸಂ. ತಾಪ= ತೊಂದರೆ + ತ್ರಯ = ಮೂರು].

೨. **ಪುಕಾರು** (ಈ) ದೂರು, ಹುಯ್ಯಲು, ಬೊಬ್ಬೆ, ಕೂಗು. ಉದಾ–ಮಂತ್ರಿಗಳ ಮೇಲೆ ಭಾರಿ ಪುಕಾರು ಬಂತು. [ಹಿಂದಿ = ಪುಕಾರ್ = ಕರೆ, ಕೂಗು.]

೩. **ಇಂಚರ** (ಇ) ಮಧುರ ಧ್ವನಿ, ಇನಿದನಿ. ಉದಾ- ಹಕ್ಕಿಗಳ ಇಂಚರ [ದೇ. ಇಂ– ಇನಿದಾದ = ಮಧುರ + ಚರ (= ಸಂ. ಸ್ವರ)]

೪. **ಗೆಡೆಗೊಳ್ಳು** (ಅ) ಕೂಡಿಕೊಳ್ಳು, ಸೇರು, ಜೊತೆಗೂಡು, ಸ್ನೇಹಮಾಡು. ಉದಾ: ಗೆಡೆಗೊಂಡು ಬಂದ ಹಕ್ಕಿಗಳು. [ಕನ್ನಡ – ಗೆಡೆ = ದೇಶ್ಯ ಕೆಳೆ=ಸ್ನೇಹ) + ಕೊಳ್].

೫. **ಅಪರಿಹಾರ್ಯ** (ಅ) ತಪ್ಪಿಸಲಾರದ, ತಡೆಯಲಸಾಧ್ಯವಾದ. ಉದಾ – ಅಪರಿಹಾರ್ಯವಾದ ಕಾರಣಗಳಿಂದ ಬರಲಾಗಲಿಲ್ಲ. [ಸಂ. ಅ = ಅಲ್ಲ + ಪರಿಹಾರ್ಯ = ತಪ್ಪಿಸಹುದಾದ್ದು]

೬. **ಧೋರಣೆ** (ಅ) ರೀತಿ, ಕ್ರಮ: ಯಾವುದಾದರೂ ಗುರಿ ಸಾಧಿಸಲು ವಹಿಸುವ ನೀತಿ. ಉದಾ – ಪಕ್ಷದ ಸಾಮಾಜಿಕ ಧೋರಣೆ. [ಸಂ.ಧೋರಣಂ = ನಡವಳಿಕೆ]

೭. **ಪಡಹಾಕು** (ಈ) ತಡೆ, ತಡೆಹಾಕು; ಅಡ್ಡಹಾಕು. ಉದಾ – ದುಷ್ಕರ್ಮಕ್ಕೆ ಪಡಹಾಕಬೇಕು. [ಮರಾಠಿ – ಪದಣೇಂ = ನಿಂತುಹೋಗು – ಏನಿಂದ?]

೮. **ಆಕಲನ** (ಇ) (ವಿಷಯವನ್ನು ಗ್ರಹಿಸುವುದು, ಅರ್ಥವಾಗುವಿಕೆ; ಸಂಗ್ರಹಿಸುವುದು. ಉದಾ – ಮಾತಿನ ಗೂಢಾರ್ಥದ ಆಕಲನೆ ಆಗಲಿಲ್ಲ. [ಸಂ.]

೯. **ಕಂಠರವ** (ಅ) ಗಟ್ಟಿಯಾಗಿ ಹೇಳುವಿಕೆ; ಕೂಗಿ ಕೂಗಿ ಹೇಳುವಿಕೆ, ನಿಸ್ಸಂಶಯವಾಗಿ ಸಾಧಿಸುವುದು. ಉದಾ – ಸ್ವಾತಂತ್ರ್ಯವಿಲ್ಲದೆ ಪ್ರಗತಿಯಿಲ್ಲೆಂದು ಕಂಠರವದಿಂದ ಹೇಳುತ್ತೇನೆ. [ಸಂ. ಕಂಠ = ಕೊರಳು + ರವ = ಶಬ್ದ]

೧೦. **ಅಕ್ಕಲು** (ಇ) ಬುದ್ಧಿ, ಬುದ್ಧಿಶಕ್ತಿ = ವಿಚಾರಶಕ್ತಿ; ವಿವೇಕ ಉದಾ -– 'ಅಕ್ಕಲು' ಇಲ್ಲದೆ ಮಾತಾಡಿದ, [ಅರಬ್ಬಿ – ಅಕ್ಲ್ = ಬುದ್ಧಿ ಶಕ್ತಿ]

೧೧. **ಅಕ್ಕಸ** (ಅ) ರೋಷ, ಆಕ್ರೋಶ; ಕಳಕಳಿ, ಕಳವಳ. ಉದಾ – ಅಕ್ಕಸದಿಂದ ಮಾತಾಡಿದಳು. [ಸಂ. ಆಕ್ರೋಶ = ಕೂಗು].

೧೨. **ಭಾವೀ** (ಈ) ಮುಂದೆ ಆಗುವಂಥ; ಭವಿಷ್ಯತ್ಕಾಲದ. ಉದಾ – ಭಾವೀ ಪತಿ, ಅವಶ ಂಭಾವಿ. [ಸಂ.]

●

### ನಿಮ್ಮ ಶಬ್ದಶಕ್ತಿಯ ತರಗತಿ

**ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿತಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.**

| | | | |
|---|---|---|---|
| ೬—೮ ಸರಿಯಿದ್ದರೆ | | ... | ಸಾಧಾರಣ |
| ೯–೧೦ | ,, | ... | ಉತ್ತಮ |
| ೧೧–೧೨ | ,, | ... | ಅತ್ಯುತ್ತಮ |

●

# ಹೆಂಡತಿ ಎಂಬುದು

**ಕೆ. ಟಿ. ಗಟ್ಟಿ**

"ಮನೆಯೊಳಗೆ ಸಿಗದ ಸುಖವನ್ನು ಮನುಷ್ಯ ಗಂಡೇ ಇರಲಿ ಹೆಣ್ಣೇ ಇರಲಿ, ಹೊರಗೆ ಹುಡುಕುವುದು ಸ್ವಾಭಾವಿಕ," ಸತೀಶನೆಂದ.

"ಯಾವ ರೀತಿಯಲ್ಲಿ ಸುಖ ಎಂಬುದು ನಿಮಗೆ ಮನೆಯೊಳಗೆ ಸಿಗುತ್ತಿಲ್ಲ?" ನಾನು ಸಿಟ್ಟಿನಿಂದಲೇ ಕೇಳಿದೆ.

"ಅದನ್ನು ವಿವರಿಸಿ ಹೇಳುವುದು ಸ್ವಲ್ಪ ಕಷ್ಟ," ಸತೀಶನೆಂದ.

"ಸುಖವೆಂದರೇನು?" ನಾನು ಕೇಳಿದೆ.

"ಸುಖವೆಂದರೆ ಇಂಥದೇ ಎಂದು ಒಂದು ಸ್ಪಷ್ಟವಾದ ಸಿದ್ಧಾಂತ ಇರುವ ಹಾಗೆ ನನಗೆ ತೋರುವುದಿಲ್ಲ. ಸುಖವೇನೆಂಬ ಬಗ್ಗೆ ವಿವರಣೆಯನ್ನು ನೀಡುವುದು ಕಷ್ಟವಾದರೂ ಸುಖವಿಲ್ಲದಿರುವಿಕೆ ಎಂದರೆ ಏನು ಎಂಬ ಬಗ್ಗೆ ವಿವರಣೆಯನ್ನು ನೀಡಲು ಸಾಧ್ಯವೆನಿಸುತ್ತದೆ."

"ಅದನ್ನೇ ಹೇಳು. ನಿನ್ನ ಬಗ್ಗೆ ಹೇಳು," ನಾನೆಂದೆ.

"ಕೆಲವೊಮ್ಮೆ ನನ್ನ ಬಳಲಿದ ತಲೆಯನ್ನು ಇರಿಸಲು ಈ ಭೂಮಿಯಲ್ಲಿ ಎಲ್ಲೂ ಜಾಗವಿಲ್ಲ ಅನಿಸಿದೆ ನನಗೆ. ಅಂಥ ದಿನಗಳಲ್ಲಿ ಮನೆಯಲ್ಲಿ ಮಲಗಲು ಭಯವೆನಿಸಿ ಎಲ್ಲೆಲ್ಲೋ ಅಲೆದಾಡಿದ್ದೇನೆ. ಕ್ಷಣಿಕವಾಗಿ ಸುಖವೆನಿಸುವಂಥ ಅನುಭವಗಳು ನನಗಾಗಿವೆ. ಮತ್ತು ಅಂಥ ಸುಖದ ತುಣುಕುಗಳಲ್ಲಿ ನನಗೆ ವಿಶ್ವಾಸವಿಲ್ಲ. ಆರಂಭದಲ್ಲಿ, ಅದೇ ನಿಜವಾದ ಸುಖ ಎಂದು ನಾನು ಭ್ರಮಿಸಿದ್ದು ಹೌದು. ನಾನೀಗ ಬಯಸುತ್ತಿರುವುದು ಮತ್ತು ಪಡೆಯುತ್ತಿರುವುದು ಸುಖವೆಂಬುದಕ್ಕಿಂತಲೂ ಮಿಗಿಲಾದುದು ಬೇರೇನೋ ಒಂದು ಎಂದು ನನಗನಿಸುತ್ತದೆ. ರಂಗಸ್ವಾಮಿಯ ಹೆಂಡತಿಯನ್ನು ನಾನು ಪ್ರೀತಿಸುತ್ತಿದ್ದೇನೆ, ಎಂದರೆ ತಪ್ಪಾಗುತ್ತದೆ. ಮೆಚ್ಚಿಕೊಂಡಿದ್ದೇನೆ ಎಂದರೆ ನನ್ನ ಭಾವಕ್ಕೆ ಹೊಂದುವ ಮಾತಲ್ಲ. ನಾನು ಕೆಲಸ ಮುಗಿಸಿದ ಮೇಲೆ ಏಕೆ ಯಾವಾಗಲೂ ತಡವಾಗಿ ಮನೆ ಸೇರುತ್ತೇನೆ, ಎಂಬುದಕ್ಕೆ ನಿನ್ನ ತಂಗಿ ಅರ್ಥಾತ್ ನನ್ನ ಹೆಂಡತಿ ಏನೇನೋ ವಿವರಣೆ ನೀಡಬಹುದು. ಆದರೆ ವಾರಕ್ಕೆ ಮೂರು ನಾಲ್ಕು ಬಾರಿ ನಾನು ರಂಗಸ್ವಾಮಿಯ ಹೆಂಡತಿ ವಿಮಲಳನ್ನು ಕಾಣಲು ಹೋಗುತ್ತೇನೆ ಮತ್ತು ಏಕೆ ಎಂಬುದಕ್ಕೆ ನಾನೇ ಸರಿಯಾದ ವಿವರಣೆ ನೀಡಬಲ್ಲೆ.

"ನಿರ್ಭೀತಿಯಿಂದ ಮತ್ತು ನಿರ್ಲಜ್ಜೆಯಿಂದ ಹೇಳಿಬಿಡುತ್ತೇನೆ. ನಾನು ರಂಗಸ್ವಾಮಿಯ ಹೆಂಡತಿಯಲ್ಲಿ ಅನುರಕ್ತನಾಗಿದ್ದೇನೆ. ಗಾಬರಿ ಬೀಳಬೇಡ. ಅಂಥದೇ ಭಾವ ಅವಳಿಗೂ ನನ್ನ ಬಗೆಗೆ ಇದೆ, ಮತ್ತು ಪ್ರೇಮಕ್ಕಿಂತ ಆಳವಾದ ತೀವ್ರವಾದ ಭಾವ ಇದು ಎಂದು ನನಗೆ ತಿಳಿದಿದೆ. ವಿಮಲ ಮತ್ತು ನನ್ನ ನಡುವೆ ಹೀಗೊಂದು ಬಾಂಧವ್ಯ ಉಂಟಾಗಲು ನನ್ನ ಹೆಂಡತಿಯೇ ಕಾರಣ ಎಂಬುದು ರಂಗಸ್ವಾಮಿ ಎಂದೂ ತಿಳಿದಿರಲಿಕ್ಕಿಲ್ಲ.

"ನೀನೇ ಹೇಳು. ಗಂಡಿಗೆ ಅವನದೇ, ಅವನ ಸ್ವಂತದ್ದೇ ಆದ ಹೆಂಡತಿ ಎಂಬ ಪ್ರಾಣಿ ಏಕೆ ಬೇಕು? ಅಥವಾ ಹೆಣ್ಣಿಗೆ ಅವಳದೇ 'ನನ್ನದು' ಎಂದು ಹೇಳಿಕೊಳ್ಳಲು ಗಂಡ ಎಂಬ ಪ್ರಾಣಿ ಏಕೆ ಬೇಕು? ಇಂಥ ವ್ಯವಸ್ಥೆ ಬೇಕೇ ಬೇಕೆಂದಿದೆಯೆ? ಇನ್ನೊಬ್ಬನ ಹೆಂಡತಿಯನ್ನು,



ಇನ್ನೊಂದು ಹೆಣ್ಣನ್ನು ಪ್ರೀತಿಸಬಾರದೆಂದಿದೆಯೆ? ಪ್ರೀತಿಸಬಾರದು ಎಂದು ಯಾವುದಾದರೂ ಒಂದು ಹಳೆಯ ಗ್ರಂಥದಲ್ಲಿ ಹೇಳಿದ್ದರೆ ಅದು ಆ ಗ್ರಂಥವನ್ನು ಬರೆದ ಒಬ್ಬ ವ್ಯಕ್ತಿಯ ಅಭಿಪ್ರಾಯ. ಅದು ಎಲ್ಲರಿಗೂ ಅನ್ವಯವಾಗಬೇಕೆಂದೇನೂ ಇಲ್ಲ. ಒಬ್ಬನದೇ ಆದ ಯಾವ ಅಭಿಪ್ರಾಯ ಜೀವನದ ಯಾವ ಕರ್ಮ ಕ್ಷೇತ್ರದ ಕುರಿತೇ ಆಗಲಿ, ಎಲ್ಲಿ ಸರ್ವ ಸಮ್ಮತವಾಗಿದೆ? ದೇವರ ಮಾತು ಅನ್ನಿಸಿಕೊಳ್ಳುವ ಮಾತೇ ಇರಲಿ, ಅದು ಇಡೀ ಪ್ರಪಂಚ ಒಪ್ಪುವ ಮಾತಾಗಿರುತ್ತದೆಯೆ? ಹಾಗೆ ಯಾರ್ಯಾರೋ, ಎಲ್ಲೋ ಹೇಳಿದ ಮಾತುಗಳು ನನಗೇನೂ ಸ್ವೀಕಾರಾರ್ಹವಲ್ಲ.

"ಏಕೆಂದರೆ, ನನ್ನ ಹೆಂಡತಿಯಾಗಿರುವಾಕೆ ನಾನು ಮನೆ ಹೊಕ್ಕಿದ್ದೇ ತಡ, ಆರ್ಭಟಿಸುತ್ತಾಳೆ. ಪ್ರತಿಯೊಂದು ಮಾತಿಗೂ ಅಪಾರ್ಥ ಕಲ್ಪಿಸುತ್ತಾಳೆ. ನನ್ನ ಯಾವ ಮಾತೂ ಅವಳಿಗೆ ಅದರದೇ ಆದ ಅರ್ಥವನ್ನು ಕೊಡುವುದಿಲ್ಲ. ಆ ಪುಟ್ಟ ಮಕ್ಕಳಿಗೆ ತಿಂಡಿ ತೀರ್ಥ ಕೂಡ ಸರಿಯಾಗಿ ಕೊಡದೆ ಬೈಯುತ್ತಾ, ಹೊಡೆಯುತ್ತಾ ಇರುತ್ತಾಳೆ. ಇಡೀ ದಿನ ಅವಳು ಮನೆಯೊಳಗೆ ಬುಸುಗುಡುತ್ತಾ ಇದ್ದರೆ ಮಕ್ಕಳು ಮನೆಯಿಂದ

ಹೊರಗೇ ಇರುತ್ತವೆ. ಮನೆಯನ್ನವಳು ಒಂದು ಕೊಳೆಗೇರಿ ಮಾಡಿದ್ದಾಳೆ. ಈ ಕೊಳೆ ನಿನ್ನ ಕಣ್ಣಿಗೆ ಕಾಣಿಸಲಾರದು. ಮದುವೆಯ ದಿನದಂದು ಹಸೆಮಣೆಯ ಮೇಲೆ ಸೀತೆಯಾಗಿ ತೋರಿದವಳು ಶೂರ್ಪನಖಿಯಾಗಿದ್ದಾಳೆ. ನಾನೊಂದು ರಾತ್ರಿ ಅವಳೊಡನೆ ಮಲಗಿದ್ದೇ ಮರುದಿನದಿಂದ ತಾನೇ ಸರ್ವಸ್ವವೆಂಬ ಯಾವುದೋ ರಾಕ್ಷಸಿಯ ಅವತಾರವಾಗಿರುವಾಗ ಇಂಥವಳನ್ನು ನಾನು ಪ್ರೀತಿಸಬೇಕೆಂದು ಯಾವ ಗ್ರಂಥದಲ್ಲಿ ಹೇಳಿದೆ? ಯಾವ ನೀತಿ ಸಂಹಿತೆಯಲ್ಲಿ ಹೇಳಿದೆ? ಹೇಳಿದ್ದರೂ ನನಗೇನೂ ಅದು ಮಾನ್ಯವಲ್ಲ."

"ಸರಿ, ವಿಮಲಳ ಬಗ್ಗೆ ಹೇಳು."

"ವಿಮಲಳಿಗೆ ಇಬ್ಬರು ಮಕ್ಕಳು. ಅವಳಿಗೊಂದು ಪುಟ್ಟ ಉದ್ಯೋಗವಿದೆ. ನನ್ನವಳಿಗೆ ಉದ್ಯೋಗವಿಲ್ಲವಾದ ಕಾರಣ ನನಗೆ ಕೈ ತುಂಬಾ ಸಂಬಳ ಬರುವುದರಿಂದ ಅವಳಿಗೆ ಉದ್ಯೋಗದಲ್ಲಿರುವುದಕ್ಕಿಂತ ಹೆಚ್ಚು busyಯಾಗಿರಲು ಸಾಧ್ಯವಿದೆ. ಅಂದರೆ ವಟವಟಗುಟ್ಟುವುದು. ಬುಸುಗುಟ್ಟುವುದು, ಮಕ್ಕಳನ್ನು ಹಿಡಿದು ಚಚ್ಚುವುದು, ದಿನಾ ನನ್ನ ಶ್ರಾದ್ಧ..."

"ಪುನಃ ಅವಳ ವಿಷಯಕ್ಕೇ ಬಂದೆಯಲ್ಲಾ. ರಂಗಸ್ವಾಮಿಯ ಹೆಂಡತಿಯ ವಿಚಾರ ಹೇಳು."

"ವಿಮಲ! ನನ್ನನ್ನು ಕಂಡೊಡನೆ ಎದ್ದು ನಿಂತು 'ಬನ್ನಿ ಕುಳಿತುಕೊಳ್ಳಿ' ಎಂದು ನಮ್ರತೆಯಿಂದ ಹೇಳುತ್ತಾಳೆ. ಅವಳ ಮುಗುಳ್ನಗು ಚೇತೋಹಾರಿಯಾಗಿದೆ. ಐದೇ ನಿಮಿಷದಲ್ಲಿ ಘಮಘಮ ಎನಿಸುವ ಬಿಸಿ ಬಿಸಿ ಕಾಫಿ, ರುಚಿಕರವಾದ ಏನಾದರೂ ತಿಂಡಿ ತಂದಿರಿಸುತ್ತಾಳೆ. ಅವಳಿಗೆ ನಾನು ಹಣವನ್ನೇನೂ ಕೊಡುತ್ತಿಲ್ಲ. ಅಂದರೆ ನಿನ್ನ ತಂಗಿಗೆ ಏನೂ ಅನ್ಯಾಯವಾಗುತ್ತಿಲ್ಲ ಅಂತ ಅರ್ಥ. ವಿಮಲ ಮತ್ತು ನಾನು ಹಲವಾರು ವಿಚಾರಗಳನ್ನೆತ್ತಿ ಚರ್ಚಿಸುತ್ತೇವೆ. ಅವಳು ಬಹಳ ಸಲುಗೆಯಿಂದ. ಆತ್ಮೀಯತೆಯಿಂದ ಮಾತಾಡುತ್ತಾಳೆ. ಅವಳು ತನ್ನಿಬ್ಬರು ಮಕ್ಕಳನ್ನು ಎಷ್ಟು ಪ್ರೀತಿಯಿಂದ, ಎಷ್ಟು ಆಸಕ್ತಿಯಿಂದ ನೋಡಿಕೊಳ್ಳುತ್ತಾಳೆಂದರೆ ಅವಳ ಪ್ರತಿ ಶಬ್ದದಲ್ಲೂ ನಾನು ವಾತ್ಸಲ್ಯದ ಸುಖವನ್ನು ಕಾಣುತ್ತೇನೆ. ಅಷ್ಟು ಮಾತ್ರವಲ್ಲ, ಜೀವನದ ಬಗ್ಗೆ ಪ್ರಪಂಚದ ಬಗ್ಗೆ ಅವಳಿಗೆ ಬಹಳ ಆಸಕ್ತಿಯಿದೆ. ಹಲವು ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವಿದೆ. ಅವಳ ದನಿಯಲ್ಲಿ ಮಾರ್ದವತೆಯಿದೆ. ಮುಖದಲ್ಲಿ ಸೌಮ್ಯತೆಯ ಕಳೆಯಿದೆ. ಅದೇನೂ ಕೃತಕವಾದುದಲ್ಲ. ಆರೇಳು ವರ್ಷದಿಂದ ನಾನವಳನ್ನು ಕಾಣುತ್ತಿದ್ದೇನೆ. ರಂಗಸ್ವಾಮಿಯಲ್ಲೂ ಅವಳು ಇದೇ ರೀತಿ ಪ್ರೇಮದಿಂದ, ವಿಶ್ವಾಸದಿಂದ ವರ್ತಿಸಿದ್ದನ್ನು ನಾನು ಕಂಡಿಲ್ಲವೆ? ಅವಳ ಮುಖದಲ್ಲಿ ಸಿಟ್ಟು, ಸಿಡುಕು, ಅತೃಪ್ತಿ, ಅಸಹನೆಯನ್ನು ನಾನೆಂದೂ ಕಂಡಿಲ್ಲ. ಕಣ್ಣೀರು ಕಂಡಿದ್ದೇನೆ. ಕಣ್ಣೀರಿಗೆ ಕಾರಣವಿರುವುದರಿಂದ. ಆ ಕಣ್ಣೀರು ಅವಳನ್ನು ಮತ್ತು ನನ್ನನ್ನು ಹತ್ತಿರದ ಬಂಧುಗಳನ್ನಾಗಿ ಮಾಡಿದೆ. ಎಲ್ಲಾ ಜೀವಿಗಳಿಗೂ ಕಣ್ಣೀರು ಸುರಿಸಬೇಕಾದ ಏನಾದರೂ ಕಾರಣ ಇದ್ದೇ ಇರುತ್ತದೆ. ಕೆಲವರಿಗೆ ಪ್ರಬಲ ಕಾರಣಗಳಿರಬಹುದು, ಕೆಲವರಿಗೆ ಕ್ಷುಲ್ಲಕ ಕಾರಣಗಳಿರಬಹುದು. ಕಾರಣಗಳಿರುವುದಂತೂ ಖಂಡಿತ. ಅಂಥದೇನೂ ಇಲ್ಲದವನು ಈ ಭೂಮಿಯ ಮೇಲಿಲ್ಲ. ನನ್ನ ಹೆಂಡತಿಯ ವಿಚಾರವಾಗಿ ನನಗೆ ಹಲವು ಬಾರಿ ಅನಿಸಿದ್ದಿದೆ, ಅವಳು ಈ ಪ್ರಪಂಚದವಳಲ್ಲ. ಆದುದರಿಂದ ನನ್ನ ಜೀವ ಈ ಪ್ರಪಂಚದವಳಾಗಿರುವವಳೊಬ್ಬಳನ್ನು ಹುಡುಕಿದರೆ ತಪ್ಪೇನು? ಇನ್ನೊಂದು ಜೀವಿಯ ಕಣ್ಣೀರನ್ನು ತೊಡೆಯುವುದು ಅತಿ ದೊಡ್ಡ ಪುಣ್ಯ ಕಾರ್ಯ. ಆ ಕೆಲಸವನ್ನು ನಾನು ಮಾಡಿದ್ದೇನೆ. ಪ್ರಪಂಚ ನಗಬಹುದು. ಇನ್ನೊಂದು ಹೆಣ್ಣಿನ ಕಣ್ಣೀರನ್ನು ತೊಡೆಯಲು ಹೋದರೆ ಪ್ರಪಂಚ ಯಾವಾಗಲೂ ನಗುತ್ತದೆ. ತನ್ನ ಹೆಂಡತಿಯನ್ನು ಕಣ್ಣೀರ ಕಡಲಲ್ಲಿ ತೇಲಾಡಿಸಿದರೂ ಅಥವಾ ಆ ಹೆಂಡತಿ ತನ್ನ ಗಂಡನನ್ನು ಚಿಂತೆಯ ಚಿತೆಯಲ್ಲಿ ಬೇಯಿಸಿದರೂ ಈ ಪ್ರಪಂಚಕ್ಕೆ ಸರಿಯೆ. ಗಂಡ ಹೆಂಡತಿ ಎಂಬ ಪದಗಳು, ಅವುಗಳ ಅರ್ಥ ಮತ್ತು ಅವುಗಳ ನಡುವಣ ಸಂಬಂಧದ ಬಗ್ಗೆ

ನಾನು ಪುನರ್ವಿಮರ್ಶೆ ಮಾಡತೊಡಗಿದ್ದೇನೆ. ಬಹಳ ಮಂದಿಯ ವಿಚಾರದಲ್ಲಿ ಇದು ಒಂದು ಸೋಗು ಅಥವಾ ನೆಪ ಮಾತ್ರವೇ ಆಗಿದೆ ಎಂದು ನನಗೆ ತಿಳಿದಿದೆ; ಉದಾಹರಣೆಗೆ ನಾನು ಮತ್ತು ನನ್ನ ಹೆಂಡತಿ.

"ರಂಗಸ್ವಾಮಿಯ ಹೆಂಡತಿಯನ್ನು ನಾನು ನನ್ನ 'ಹೆಂಡತಿ' ಅನ್ನುವಂತಿಲ್ಲ. ಹಾಗೆ ಹೇಳಬೇಕಾದ ಅಗತ್ಯವಾದರೂ ಏನು ? ಆ ಪದವಾದರೂ ಏಕೆ ಬೇಕು ? ಒಂದು ಕ್ಷಣ ಬ್ರಹ್ಮಾಂಡವೆಂದು ತೋರಿ ಮರುಕ್ಷಣ 'ಇಷ್ಟೇನ' ಅನ್ನಿಸುವ ಸುಖದಲ್ಲಿ ನನಗೆ ಆಸೆಯಿಲ್ಲ. ಅದು ಸುಖವೇ ಅಲ್ಲ ಎಂದೂ ನಾನು ಅರ್ಥ ಮಾಡಿಕೊಂಡಿದ್ದೇನೆ. ಅದು ಬರೀ ಒಂದು ಕ್ರಿಯೆ ಎಂದು ತಿಳಿದಿದ್ದೇನೆ. ಅದು ಬೇಕೆಂದರೆ ಅದನ್ನು ನನ್ನ ಹೆಂಡತಿ ಕೊಡಬಲ್ಲಳು. ಆ ಸಾಮರ್ಥ್ಯ, ಅದಕ್ಕೆ ಬೇಕಾದ ಮನಸ್ಸು ಅವಳಲ್ಲಿದೆ. ಇದು ಗಂಡ-ಹೆಂಡತಿ ಎನಿಸಿಕೊಳ್ಳದೆ ಒಟ್ಟುಗೂಡುವ, ಒಟ್ಟಿಗಿರುವ ಮೃಗಪಕ್ಷಿಗಳ ನಡುವೆ ಕೂಡ ಇರುವ ವ್ಯವಹಾರ ತಾನೆ ?"

"ವಿಮಲ ಸುಂದರಿಯೆ ?"

"ನನ್ನ ಹೆಂಡತಿಯೇ ಹೆಚ್ಚು ಸುಂದರಿ. ಆದರೆ ಆ ಬಗೆಯ ಸೌಂದರ್ಯಕ್ಕೂ, ಸುಖ ಸಂತೋಷಗಳಿಗೂ ಯಾವ ಸಂಬಂಧವೂ ಇಲ್ಲ ಎಂದು ನಾನು ತಿಳಿದಿದ್ದೇನೆ. ವಿಮಲಳಿಂದ ನನಗೆ ಸಿಗುವ ಸುಖ ಅಪೂರ್ವವಾದುದಾಗಿದೆ. ಆದ್ದರಿಂದ ನಾನು ಹೆಚ್ಚು ಹೊತ್ತನ್ನು ಅಲ್ಲೇ ಕಳೆಯುತ್ತೇನೆ. ಹೆಂಡತಿ ಎಂಬುದು ಬರೀ ಹೆಂಡತಿ, ಅದರಲ್ಲಿ ಎಲ್ಲವೂ ಇಲ್ಲ ಎಂದು ನನಗೆ ಎಂದೋ ಅರ್ಥವಾಗಿರುವ ಸಂಗತಿ. ದುಃಖಕ್ಕೆ ಅರ್ಥವಿಲ್ಲ. ಸುಖಕ್ಕೆ ಮಾತ್ರವೆ ಅರ್ಥವಿರುವುದು ಎಂಬುದು ವಿಮಲಳ ತುಟಿಗಳಲ್ಲಿ ಬರೆದಿದೆ. 'ಇನ್ನೊಬ್ಬರ ಸಾವಿನಲ್ಲಿ ನನ್ನ ಸಾವನ್ನು ಕಾಣುತ್ತೇನೆ' ಎಂದು ಯಾರೋ ಹೇಳಿದರು. ಹಾಗಾದರೆ ಇನ್ನೊಬ್ಬರ ಸುಖದಲ್ಲಿ ನನ್ನ ಸುಖವನ್ನು ಕಾಣಲಾರೆನೆ? ಆ ಸುಖಕ್ಕೆ ಯಾರು ಕಾರಣ ಎಂಬುದು ಮುಖ್ಯವಲ್ಲ. ಕಣ್ಣೀರು ಸುರಿಸುವುದು ಸುಖದ ಸಂಗತಿಯಲ್ಲ ನಿಜ. ಕಣ್ಣೀರು ತೊಡೆಯುವುದು ತೊಡಯುವ ಜೀವಕ್ಕೂ ತೊಡೆಸಿಕೊಳ್ಳುವ ಜೀವಕ್ಕೂ ಸುಖವನ್ನು ಕೊಡುತ್ತದೆ."

"ಪ್ರೇಮವೆಂದರೇನು ? ನಿನ್ನ ಪ್ರೇಮದ ಸ್ವರೂಪ ಏನು?" ನಾನು ಕುತೂಹಲ ವ್ಯಕ್ತಪಡಿಸಿದೆ.

ಒಂದು ಕ್ಷಣ ತಡೆದು ಸತೀಶ ಹೇಳಿದ;

"ಕೇಳು, ನಿರ್ಲಜ್ಜೆಯಿಂದ ಹೇಳಿಬಿಡುತ್ತೇನೆ. ನಾನು ನನ್ನ ಹೆಂಡತಿಯೊಂದಿಗೇ ಮಲಗುತ್ತೇನೆ. ಅವಳೊಂದಿಗೆ ನನಗೆ ಎಲ್ಲಾ ಪ್ರಾಪಂಚಿಕ ಸಂಬಂಧಗಳೂ ಇವೆ. ಆದರೆ ನನಗೂ ಅವಳಿಗೂ ಇಲ್ಲದಿರುವ ಒಂದೇ ಒಂದು ಸಂಬಂಧದ ಹೆಸರು 'ಪ್ರೇಮ' ಎಂದು. ನನಗೂ ವಿಮಲಳಿಗೂ ನಡುವೆ ಇರುವ ಒಂದೇ ಸಂಬಂಧದ ಹೆಸರು 'ಪ್ರೇಮ' ಎಂದು. ಈಗ ನನ್ನ ಪ್ರಶ್ನೆಗೆ ನೀನು ಉತ್ತರ ಕೊಡಬೇಕು. ಹೆಂಡತಿ ಎಂದರೆ ಏನು?"

ಅದೇ ಪ್ರಶ್ನೆಯಿತ್ತು ನನ್ನ ಮನಸ್ಸಿನಲ್ಲಿ.

ಸತೀಶನೇ ಮಾತು ಮುಂದುವರಿಸಿದ:

"ನನ್ನ ಹೆಂಡತಿ ನಿನ್ನ ಸಹೋದರಿಯಾಗಿರುವುದು ಅರ್ಥಾತ್ ನಿನ್ನ ಸಹೋದರಿ ನನ್ನ ಹೆಂಡತಿಯಾಗಿರುವುದು ತೀರಾ ಗೌಣವಾದ ವಿಚಾರ. ಎಲ್ಲಾ ಸಂಬಂಧಗಳೂ ಬದಲಾಗುತ್ತಲೇ ಇರುತ್ತವೆ.

"ರಂಗಸ್ವಾಮಿ ಅಪಘಾತದಲ್ಲಿ ಸತ್ತಾಗ ಅವನ ಮತ್ತು ವಿಮಲಳ ಸಂಬಂಧ ಎಲ್ಲುಳಿಯಿತು? ಪ್ರಾಪಂಚಿಕವಾದ ಎಲ್ಲಾ ಸಂಬಂಧಗಳು ಮರಣದಲ್ಲಿ ಕೊನೆಗೊಳ್ಳುತ್ತವೆ. ಭಾವನೆಯಲ್ಲಿರುವುದೇ ಸಂಬಂಧವೆಂದಾದರೆ ಅದು ಯಾರ ನಡುವೆಯೂ ಇರಬಹುದು. ಒಂದೇ ಹೊತ್ತಿನಲ್ಲಿ ಒಬ್ಬ ವ್ಯಕ್ತಿಗೆ ಎಷ್ಟು ಜನರ ನಡುವೆಯೂ ಇರಬಹುದು."

ನಾನು ಮೌನವಾಗಿಯೇ ಇದ್ದೆ.

ಸತೀಶ ಹೇಳಿದ:

"ಕಳೆದ ವರ್ಷ ರಂಗಸ್ವಾಮಿ ಹೇಳಿದ ಮಾತೊಂದು ನನಗೆ ನೆನಪಿಗೆ ಬರುತ್ತಿದೆ. ದುಃಖವು ನಮ್ಮನ್ನು ಹುಡುಕಿಕೊಂಡು ಬರುತ್ತದೆ. ಆದರೆ ಸುಖವು ಹಾಗೆ ಬರುವುದಿಲ್ಲ. ಬೇಕೆಂದಿದ್ದರೆ ನಾವೇ ಅದನ್ನು ಹುಡುಕಿಕೊಂಡು ಹೋಗಬೇಕು. ಅಷ್ಟೇ ನಾನು ಮಾಡಿದ್ದು."

◆ 'ರಾಮದಾಸ'

# ನಮ್ಮ ಸರಕಾರ

ಲಗ್ನ ಆಗೋಕ್ಕಿಂತ ಮೊದ್ಲ ಎಷ್ಟೋ ಸಲ ನಾನು ಮಾಡಿಕೊಳ್ಳೋ ಹೇಣ್ತಿನ್ನ ಹ್ಯಾಂಗ. ಯಾವ ರೀತಿ ಕರೀಬೇಕೂಂತ ಚಿಂತಿ ಮಾಡಿ ಮಾಡಿ ತಲಿ ಕೆಡ್ಸಿಕೊಂಡಷ್ಟು ಇನ್ನಾ ಯಾವ ವಿಷಯಾಕ್ಕೂ ಇಷ್ಟು ತಲಿ ಕೆಡ್ಸಿಕೊಳ್ಳೋ ಪ್ರಸಂಗಾನs ಬರ್ಲಿಲ್ಲಾ ಅಂದ್ರ ನಂಬ್ತಿರೋ ಇಲ್ಲೊ ನೀವು!

ನಾನೊಬ್ಬ ಸಭ್ಯ ನಾಗರಿಕ– so called ಕಲಿತವ. ಇಂಥವಾ ಯಾವ ರೀತಿ ಬರೋ ಅಕಿನ್ನ, ಅಂದ್ರ ಆಗೋ ಹೆಣ್ತಿನ್ನ ಕರಿಯೋದು?

ಎಲ್ಲರ ಹಾಗೆ ಲೇ! ಏನು? ಬಂದರ್ss ಬಾರ; ಕೇಳಿಸ್ತೈತಿನು? ಏ! ಇಕೀನ, ಅಂತ ಕರಿಯೋದು ಅಸಂಸ್ಕೃತ ಲಕ್ಷಣಾ ಅಂತ ಯಾಹೊತ್ತಿನ್ಯಾಗ ಇದು ನನ್ನ ತಲ್ಯಾಗ ಬಂತೋ ಆಗಿನಿಂದಂತೂ ಈ ವಿಷಯಾಕ್ಕೂ ಭಾಳಭಾಳ ತಲಿ ಕೆಡ್ಸಿಕೊಂಡೀನಿ ಮತ್ತು ರೀ, ಏನ್ರಿ, ಬರ್ರಿ, ಏನ್ರೀ ಈ ಪಟ್ಟಿ ಕರಿಯೋದ? ಛೇ ಛೇ ನಾನು ಹೆಳ್ತಿನಿ ಈ ಪಟ್ಟಿ ಮಾತಾಡ್ತೋದ? ಕೇಳಿದವು. ಏನು ದಾರು? ನಗಲಿಕ್ಕಲ್ಲಾತೀರಿ; ಹೇಪ್ಲ್ಯಾ ಅನ್ನದ ಬಿಟ್ಟಾರ? ಕೇಳಿದವು ಅಷ್ಟೇ ಯಾಕ? ಇಕೀ ಬಾಯಿ ರೇ ನನ್ನ ಅಳದs ಬಿಡತಾಳ. ಇನ್ನು ಹೆಣ್ತೀ ಗಂಡನು ಸೈ ಅಂತ ಅನಕೋತ ನಗದಬಿಟ್ಟಾಳ? ಊಹೂಂ ಬ್ಯಾಡಾ ಏನs? ಏನೂ ಬ್ಯಾಡಾ ರೀ ಪಟ್ಟೂದೂ ಬ್ಯಾಡಾ. ಈ ರೀ ಹಚ್ಚೋದಂದ,



ಕೊಡ್ಲೆ ನಮ್ಮ ಅಜ್ಜೀ ಮಾತು ನೆನಪಾಗ್ತದ, ಗುಂಡ್ಯಾ ಲಗ್ನ ಆದೆಂದ್ರು ಹೆಣ್ತಿನ್ನ ಹೆಸರ ಗೊಂಡ ಕರದೀಮುತ್ತ. ಹಾಂಗ ಮಾಡಿದ್ರು ಆಕೀ ಆಯುಷ್ಯಾ ಕಡಿಮಿ ಆಗ್ತದ. ಅಂದ್ರು ಹೆಸರ ಗೊಂಡು ಕರೀಬೇಕಂತ ಏನರ ಒಂದ ವ್ಯಾಳ್ಯಾ ಡಿಸಿಜನ್ ತೊಗೊಳೋಣ ಅಂದ್ರು ಅದಕೂ ಜತ್ತ ಕಲ್ಲು!

ಹೆಣ್ತಿನ್ನ ಹ್ಯಾಂಗ ಮಾತಾಡ್ಸೋದು?

ಇದೇನ ಸಮಸ್ಯಾ ಬಂತ್ರೆಪಾ ನನಗ? ಊಂದ ಅನ್ನಾ ಮೈಗೆ ಹತ್ತಸಲ್ಲಿದು. ರಾತ್ರಿ ನಿದ್ದಿ ಬರ ವಲ್ದು. ಇದೊಳ್ಳೆ ಚಿಂತಿ ಸುರು ಆತ್ರೆಪಾ. ಇಷ್ಟ ತಲಿ ಕೆಡ್ಸಿಕೊಂಡಾವಾ, ನಿಮಗಂತ ಹೆಳ್ತೀನಿ, ನಗಿ ಬರಬಹುದು– ಲಗ್ನ ಆತ್ರೆಪಾ ಇದs ಚಿಂತ್ಯಾಗ.

ಪ್ರಥಮ ರಾತ್ರಿ ಅಂದ್ರ ಲಗ್ನಾದ ಇಬ್ಬರಿಗೂ ಅದೇನು ಸಂತೋಷ, ಖುಷಿ ಆಗ್ತಿರದಂತ... ನನ್ನದೂ ಕರ್ಮ ನೋಡ್ರಿ. ಆಕಿನ್ನ ಹ್ಯಾಂಗ ಮಾತಾಡಿಸೋದು ಅನ್ನೋ ಚಿಂತ್ಯಾಗನ ಇದ್ದೆ. ಕೂತ್ರ, ನಿಂತ್ರ ಅದೆs ಗುಂಗು.

ಆವ್ರ ಮಜಾ ಹೋಗಾತು. ಒನೊ ಮಾತು ಸುರು ಆಗಿ ನನ್ನ ಬಾಯಿಂದ ನನಗ ತಿಳೀದ್ಹಂಗ ಈ ಮಾತು ಹೊರಬರಬೇಕs? "ಎಷ್ಟು ಛಂದ ಕಾಣ್ತಿ ನೀನು!"



ಆತಿಲ್ಲ, ಏನ್ರೆಪಾ ಅದೇನೋ ಅಂತಾರಲ್ಲಾ ಭಾಳ ಭಾಳ ಮಾತಾಡಿ ಭಾಳ ಹೊತ್ತಿನ ಮ್ಯಾಲೆ ಹಂಗ ಎದ್ದ ಹೋದ್ರಂತ, ಹಾಂಗ ಭಾಳ ಭಾಳ ವಿಚಾರಾ ಮಾಡಿ, ಮಾಡಿದ್ದೇನು? ಅದs ಅಲ್ಲಾ ಎಲ್ಲಾರ್ಹ್ಂಗ ಏಕವಚನದಾಗ ಮಾತಾಡ್ಸಿದ್ದು?? ನಾಯಿಬಾಲ! ಇದ್ಯಾಕ ನೆನ ಪಾತು ಈ ಅವ್ಯಾಳ್ಯಾದಾಗ ?

ಲಗ್ನ ಆದಕೊಡ್ಲೆ ಸಿನಿಮಾ ನಾಟಕಾ ನೋಡೂದು– ಅದೂ ಇಬ್ಬರs ಹೋಗೋದಂದ್ರ– ಅದೇನೋ ದೇವರ ಗುಡಿಗೆ ಹೋದ್ಹ್ಂಗ ಮಾಡಿ ಬಿಟ್ಟಾರ ಈಗಿನವರು. ಒಲ್ಲೆಂದ್ರೂ ಮನ್ಯಾಗ ಹಿರ್‍ಯಾರನ್ನೋರು ಏನರ ನೆವಾ ಮಾಡಿ ಆಗ್ಲಿ, ಜುಲುಮಿ ಮಾಡಿ ಆಗ್ಲಿ ಹೊರಗ ದಬ್ಬತಾರ್ರೆಪಾ. ಆತು, ನಾವೂ ಮನುಷ್ಯಾರ್ಗೆ ಹೊರತಲ್ಲಾ ಅಂದ ಮ್ಯಾಲೆ ಬಿಡ್ತೀರ ಹ್ಯಾಂಗ?

'ನಟಸಮ್ರಾಟ' ಅಂತ ನಾಟಕ ಬಂದಿತ್ತು. ನೋಡ್ಲಿಕ್ಕೆ ಹೋಗೂಣಂದ್ರ ತಲಿಶೂಲಿ ಅಂದ್ಲು. ಬಹುಶಃ ಇನ್ನೊಬ್ಬರು ಆಡೋ ನಾಟಕಾ ನೋಡೂ ಮನಸು ಇರಲಿಕ್ಕಿಲ್ಲಾ ಅಂತ ಅನಿಸ್ತು. ಅಥವಾ ಖರೇನ ಇಷ್ಟರಾಗ ನನ್ನ ಕಂಡ ಕೂಡ್ಲೆ ತಲಿಶೂಲಿ ಯಾಕ ಬಂದಿರಬಾರ್ದು? ಹೆಣ್ಣಿನ ಆಳ ತಿಳಿಯೂದು ಕಠಿಣರೆಪಾ.

ನಾ ಒಬ್ಬನs ನಾಟಕಕ್ಕ ಹೋಗಿಬಂದೆ. ಆ ನಾಟಕ ಭಾಳ ಛಲೋ ಇತ್ತು, ಆಡಿದವರೂ ಛಲೊ ಆಡಿದ್ರು. ಅದರಾಗಿನ ನಟಸಮ್ರಾಟ ತನ್ನ ಪತ್ನಿಯನ್ನು ಸರಕಾರ ಸರಕಾರ ಅಂತ ಕರೀತಿದ್ದಾ. ಆ ಶಬ್ದಾ ಕೇಳಿದಕೂಡ್ಲೆ ನಾನೂ ಹೀಂಗs ಯಾಕ ಕರೀಬಾರ್‍ದೂಂತ ವಿಚಾರ ಮಾಡ್ದೆ. ಮನೀಗೆ ಬಂದವನ ಅವತ್ತs ಆಗs ಸರಕಾರ ಸರಕಾರ ಅಂತ ಬಾಗಲಾ ಬಡದದ್ದs!

ಇದು ನಮ್ಮ 'ಸರಕಾರ'ದ ಪೀಠಿಕಾ ಆತ ಏನ್ರೆಪಾ. ಇನ್ನ ಇದರ ಆಡಳಿತ ಕ್ರಮಾ ಅಷ್ಟು ನೀವು ಕೇಳ್ಲಿದ್ರು ನಾ ಹೇಳಿದ್ಹ್ಂಗ ಏನಾತು? ನೀವು ತಿಳಕೊಂಡ್ಹ್ಂಗ ಏನಾತು?

ಒಂದ ಮಾತ ಮದ್ಲs ಹೇಳ್ತೇನಿ ನಿಮಗ,

ನಾನು ಬಡವಂತ ಬಡವರ ಮನಿ ಹುಡುಗಿ ನೋಡಿ ದಯಾ ಮಾಯಾ ಇರ್ತದಂತ ಲಗ್ನ ಆದ್ರs, ಬ್ಯಾಡ್ರಿ. ನಮ್ಮ ಅಜ್ಜಿ ನಾ ಸಣ್ಣವನಿದ್ದಾಗ ಅದ್ಯಾರಿಗೋ ಹೇಳ್ತಿದ್ಳು- ಬಡವರಿಗೆ ಸೊಕ್ಕು ಭಾಳ ಅಂತ. ಬರೇರೇ ಸೋಳಾ ಆಣೆ ಶಂಭರ ಪೈಸಾ ಖರೇ ನೋಡ್ರಿ; ಬರೇ ಒಬ್ಬ ಬಡವನ ಕೈ ಹಿಡಿದು ಇಷ್ಟ ಉರೀತಾಳ್ರಿ ನಮ್ಮ ಸರಕಾರ, ಬ್ಯಾಡ ಅದು. ಇಕಿ ಒಂದು ವ್ಯಾಳ್ಯಾ ದೇಶದ ಪ್ರಧಾನಿ ಆದ್ರಂತೂ ಮುಗದಹೋತು ಏನ ಉರೀತಾಳ್ರಿ ಅಬಬಾ!

ನಮ್ಮ ಸರ್ವಜ್ಞನೂ ನನ್ನ ಕೆಟೆಗರಿಯವನ ಕಾಣ್ತದ. ಅವನೂ ಇಂಥಾ ಸರಕಾರ ಜೋಡಿ ಬ್ಯಾಸತ್ತ ಈ ತ್ರಿಪದಿ ಬರದ್ನರಿ ಅನುಭವದಿಂದ.

ಹೋರುವಾ ಸತಿಯಿಂದ
ಸೋರುವಾ ಮನೆಯಿಂದ
ಪೂರೈಸದವನ ಬಾಳಿಕೆಂದ ಕೊಂದೋಯ್ತು
ಮಾರಿ ಲೇಸೆಂದ ಸರ್ವಜ್ಞ

ಜಗಳಗಂಟಿ ಹೆಣ್ತಿ ಜೋಡಿ ಬ್ಯಾಸತ್ತು direct ಅಲ್ಲದೆ indirect ಬಡಬಡಿಸ್ಯಾನ. ಪ್ರಾಸವಿಲ್ಲದ ಪದಾ ಎಷ್ಟು ತಾಸು ಹಾಡಿದರೇನು?

ಅಲ್ರೀ ನಾ ಹೇಳಿದ್ಹಂಗ ಇಕಿ ಕೇಳಬೇಕೋ ಏನು ಆಕಿ ಹೇಳಿದ್ಹಂಗನ ನಾನು ಕುಣೀಬೇಕೊ? ನಮ್ಮದು ಭಾರತಾ. ಪುರುಷಪ್ರಧಾನ ಕುಟುಂಬ ಪದ್ಧತಿ. ಇಲ್ಲೇ ಪುರುಷಂದs ಮೇಲು. ಆದ್ರ ಈ ನನ್ನ ಮನ್ಯಾಗ ಏನದರೀ ಉಲಟಾ!

ಎಲ್ಲಾನೂ ತಂದs ನಡಸ್ತಾಳ್ರಪಾ- ಆಳೋ ಪಕ್ಷದ್ಹಂಗ! ಇಕೀದs ಎಲ್ಲಾ ಅಧ್ವಾನಾ! ನಾ ಅಂದ್ರ ಇಕಿ ಕಣ್ಣಾಗ ಮನ್ನಣೆ ಇಲ್ಲ ವಿರೋಧ ಪಕ್ಷದ ಸದಸ್ಯ! ಇಕಿ ಹೇಳಿದ್ದೆಲ್ಲಾ ನನಗ ಸರಕ್ಯುಲರ್ಸ್ ಏನ್ರಪಾ. ಆಫೀಸನ್ಯಾಗೊಂದು ನಿರ್ವಾಣ ಇಲ್ಲಾ. ಪ್ಯಾಲಿಸವ್ರು ಹೇಳಿದ್ದು ಅದು ಹ್ಯಾಂಗರs ಇರ್ಲಿ, ಏನರ ಇರ್ಲಿ ಹೂಂ ಅನಕೋತ, ಆದಷ್ಟು ಮಾಡಿಕೋತ ಹೊಡೆಯೋದು ಛಕಡಿ. ಇಲ್ಲೆ ಮನ್ಯಾಗನೂ ಅದs ಅಂದ್ರ ನನಗೂ ರಗಡ ಸಿಟ್ಟ ಬರ್ತದ ಏನ್ರಪಾ.



ಆವರೇನು ಮಾಡೋದು? ಜಗಳಾಡಿದ್ರ ಅಕಿ ಮಾಡ್ತಾಳಂತ ನಾನೂ ಮಾಡಿದ್ರ ಉಳೀತೇನು? ಇನ್ನ ಅಕಿ ಎಷ್ಟ ಅಂದ್ರೂ ನನಗಿಂತ ಸಣ್ಣಾಕಿ. ನಾನು ಸ್ವಲ್ಪ ದೊಡ್ಡ ಮನಸ್ಸು ಮಾಡಬೇಕು. ಮನೀ ಹಿರ್ಯಾ ಆಗಿ ನಾ ಇನ್ನೊಬ್ಬರಿಗೆ ಮಾರ್ಗದರ್ಶಿ ಆಗದಿದ್ರ ಉಳಿತೇನ್ರಿ ಇನ್ನ? ಅದ್ರೂ ಹೇಳಿದ್ನೆಲ್ಲಾ ಉರಿಬಾರ್ದ್ರಿ; ಇಷ್ಟು ಉರೀಬಾರ್ದು. ಎಣ್ಣಿ ಇಲ್ದ. ನಾ ಏನರ ಹೇಳ್ಲಿಕ್ಕೆ ಹೋದ್ರು ಆಳೋ ಪಕ್ಷಾ ವಿರೋಧಪಕ್ಷದ ಟೀಕಾನs ಅನ್ರಿ ಅಥವಾ ಸಲಹಾನ ಅನ್ರೀ ಸರಕಾರ ಮಾಡದ್ಹಂಗ ಮಾಡ್ತಾಳ! ಅದೇನೋ ಲಗ್ನದಾಗ ಅಕ್ಕೀಕಾಳು ಅಕೀನs ಮುದ್ಲ ಹಾಕ್ಯಾಳಂತ ನನ್ನ ತಲೀಮ್ಯಾಲೆ. ಅದಕ್ಕs ಈ ಪಟ್ಟ ಅಂತ!! ಅಡ್ಡಿ ಇಲ್ಲಾ.

ತಿಂಗಳ ಮುದ್ಲ ವಾರದಾಗ ಮನೀಗೆ ಬೇಕಾಗೂ ಎಲ್ಲಾ ಕಾಳುಕಡಿ ತಂದಹಾಕಿ ಇನ್ನೇನು ಉಳೀತು ತರೋದು ಅಂತ ಇನ್ನೂ ಕೇಳಿ ಮುಗಿಸಿರೂದಿಲ್ಲಾ, ಆಗ್ಲೆ ಲೋಕಸಭಾದಾಗ ಆಹಾರಮಂತ್ರಿ ನಮ್ಮ ದೇಶದಾಗ ಆಹಾರ ಕೊರತಿ ಇಲ್ಲಾ ಅಂತ ದೊಡ್ಡ ದನಿ ಮಾಡಿ ಹೇಳಿದ್ಹಂಗ ಏನಿಲ್ಲಾ ಅಂತಾಳ.

ಈಕಿ ಬಾಯಿ ಮಾಡೂದು ನೋಡಿದ್ರ ಕೈಕೇಯಿನೂ ದಶರಥಗ ಹೀಂಗ ಮಾಡ ತಿದ್ದಳೇನೋ ಅಂತೆ ಅನಸ್ತದ. ತನಗರೆ ಒಂದ ತಿಂಗಳಿಗೆ ಮನಿಗೆ ಎಷ್ಟು ಸಾಮಾನು ಬೇಕೊಂತ ತಿಳಿಯೂದಿಲ್ಲಾ. ಬ್ಯಾಡಾ, ನಾವು ಗಂಡಸ್ರು ವಿಚಾರ ಮಾಡಿ ಸಾಕಾಗೋ ಅಷ್ಟನs ತಂದಿರ್ತೇವಿ ಅದನ್ನ ೧೫ ದಿವ್ಸದಾಗ ಭುರಭುಸ್ ಮಾಡಿ ಬಿಡೋದs? ಏನ ಹೆಣ್ಣ ಗಂಟು ಬಿತ್ತುರೆಪಾ!

ನಿನ್ನೆ ಊಟಕ್ಕ ಕೂತಾಗ, ಅಡಗಿಯೊಳಗ ಉಪ್ಪs ಇಲ್ಲಾ. ಏನೋ ಮಾಡ್ತಾಳಂತ ತಿಳಿದು ಸುಮ್ಮನ ಉಂಡೆ. ಆವರೂ ಜೀವ ಎಲ್ಲೆ ಕೇಳ್ತದ? ಅಕಿ ಊಟಕ್ಕೂತಾಗ ಉಪ್ಪು ಕಡಿಮಿ ಆಗಿಲ್ಲ ಇವತ್ತು ಎಲ್ಲಾ ಅಡಗಿಯೊಳಗ? ಅಂತ ಬಾಸ್‌ಮುಂದ ಎಸ್. ಡಿ. ಸಿ. ಮಾತಾಡೋ styleದಾಗ ಅಂದ್ರ ಬಾಸ್‌s ಪ್ರಶ್ನೆ ಬಂತು!

"ಉಪ್ಪು ತಂದಿರೇನು!"

ನಾನೂ ಎಸ್.ಡಿ.ಸಿ.ಯಿಂದ ಎಫ್.ಡಿ.ಸಿ. ಆಗಿ ಹೇಳಿದೆ: "ನೀ ಹೇಳಿದ್ಹಂಗ ನೆನಪಿಲ್ಲ ನನಗ."

ಮತ್ತೆ ಬಾಸನ ಆ್ಯಕ್ಶನ್:

"ನಾ ಯಾಕ ಹೇಳ್ಬೇಕು? ತಿಳಿಯೂದಿಲ್ಲೇನು ನಿಮಗ? ಎಲ್ಲಾ ನಾನs ಹೇಳಬೇಕೇನು? ಮತ್ತ ನೀವ್ಯಾಕ ಇರೋದು?"





ಅಲ್ಲಿಗೆ ಮುಗಿತು ನನ್ನ ರಿಹರ್ಸಲ್! ಬಾಸ್ ತುಂಬಾ ಗರಂ ಇರೋದು ಗೊತ್ತಾದ ಮ್ಯಾಲ ಮೌನಂ ನನ್ನ ಲಕ್ಷಣಂ ಅಂದುಕೊಂಡು ಮೆಲ್ಲನೆ ತಲೆ ಕೆರೆದುಕೊಳ್ಳುತ್ತ, ಅಲ್ಲಿಂದ ಪಾರೆ ಯಾದೆ.

ಎಷ್ಟೋ ದಿನ ಬೆಳಿಗ್ಗೆ ಆಫೀಸಿಗೆ ಕೂಳಿಲ್ಲದನs ಹೋಗೇನಿ ಏನ್ರೆಪಾ. "ನೀ ಹಗಲೆಲ್ಲಾ ಹಿಂಗ ಮಾಡೀದ್ರ ನಾ ಉಪಾಸ ಬಿದ್ರ ನಿನಗ ಛಂದೇನು?" ಅಂತ ನೆಗೊಶಿಯೇಶನ್ ಟೋನಿನ್ಯಾಗ ಕೇಳಿದ್ರ, ನನಗ ಆದ್ರ ಮಾಡೋಕಿ, ಇಲ್ಲಾಂದ್ರ ಇಲ್ಲಾ. ನನಗ ಟಾಯಿಮು ಹಚ್ಚಿ ಅಡಿಗೆ ಮಾಡ್ಲಿಕ್ಕೆ ಬರೊದಿಲ್ಲಾ," ಅಂದ್ಳು.

ಅಕೀವು ಈ ಮಾತು ದೊಡ್ಡವು, ಸಿಟ್ಟಿನ್ಯಾಗ ಹುಡುಗರಿಗೆ ಛಫ್ ಅಂತ ಹೊಡ್ದಂಗ ಆತ ನೋಡ್ರಿ.

"ಓಣ್ಯಾಗ ಆಜೂ ಬಾಜೂದ ಸೀತಾಬಾಯಿ, ರಾಧಾಬಾಯಿ, ಸಾವಿತ್ರಿಬಾಯಿ, ಗೋಪೂಬಾಯಿ ಅವರ ಕಡೆಯಿಂದ ಛೆಲೋ ಅನಿಸಿಕೊಳ್ಳಲಿಕ್ಕೆ

ಅವ್ರನೆಲ್ಲಾ ಮನೀಗೆ ಕರದು ಸೇರು ಎಣ್ಣೆ ಸುರುವಿ ಉಪ್ಪಿಟ್ಟು, ವಗ್ಗರಣೆ ಅವಲಕ್ಕಿ, ಹಪ್ಪಳಾ ಸಂಡಿಗಿ ಮಾಡಿ ತಿನಿಸಿ, ತಂದ ಸಾಮಾನೆಲ್ಲಾ ತೀರ್ಸಿ ನಾ ಏನು ತೀರ್‍ತ ನೀ-ಏನು ತರ್ಬೇಕು ಅನ್ನೋದನ್ನ ತಿಳ್ಕೊಂಡು ತೊಗೊಂಡಬರ್ತೀನಿ-ಕಾಮಧೇನು ಕಲ್ಪವೃಕ್ಷ ಆಗಿ!"

ಮತ್ತ "ಮನೀ ಮಂದಿ ಎಷ್ಟು ಉಣ್ತಾರ ಎಷ್ಟು ಮಾಡ್ಬೇಕು" ಅನ್ನೂದು ಇನ್ನೂ ತೀಳಿ ವಲ್ತು ನಿಂಗ; ಒಂದ ಲೆಕ್ಕಿಲ್ಲಾ. ಏನಿಲ್ಲಾ. ಮಾಡೂದು ಉಳದದ್ದು ಛೆಲ್ಲೂದು; ಇಲ್ಲಾಂದ್ರ ಮುಸುರಿ ಯಾಕೀಗೆ ಭಿಕ್ಷಾದವ್ರಿಗೆ ಹಾಕೂದು. ಇದೇನು ಮನಿ ಅಂತ ತಿಳ್ದಿಯೋ ಏನು ಮಠಾಮಾಡಿಯೊ? ಮತ್ತ ನನಗs ಆಡತಾಳ. ವ್ಹಾ" ಅಂತೆಲ್ಲಾ ಒದರಾಡಬೇಕನಸ್ತದ ತಿಳಿಸಿ ಹೇಳಬೇಕಂತ ಅನಸ್ತದ. ಆದರ ಸಭಾಪತಿ ಹಂಗ ಚಾನ್ಸs ಕೊಡೂದಿಲ್ಲಾ. ಮತ್ತ ಅನಸ್ತದ ತಿಳಿವಳಿಕೆ ಇಲ್ಲ, ಹೆಣ್ಣಿನ ಜೋಡಿ ಏನು ಸಾಧಿಸೋದು ಏನು ಬಾಯಿಗೆ ಬಾಯಿ ಹಚ್ಚೊದು?

ನಮ್ಮ ಬಸವಣ್ಣನವರು ಶಾಣ್ಯಾರ ನೋಡ್ರಿ, ಏನ ಛೆಂದ ಹೇಳ್ಯಾರ್ರಿ–

ಏನಾದರೆಯೂ ಸಾಧಿಸಬಹುದು;

ಮತ್ತೇನಾದರೆಯೂ ಸಾಧಿಸಬಹುದಯ್ಯಾ,

ತಾನಾರೆಂಬುದ ಸಾಧಿಸಬಾರದು.

ವಚನಾ ಸಾಹಿತ್ಯಾ ಎಲ್ಲಾ ನನ್ನಂಥಾ ಕಲಿ ತವ್ರಿಗೆ, ತಿಳಿದವ್ರಿಗೆ, ಇಂಥಾ 'ಸರಕಾರ'ಕ್ಕ ಏನದsರೀ? ಕ್ವಾಣನ ಮುಂದ ಕಿನ್ನರಿ ಬಾರ್‍ಸಿ ದ್ಹಂಗ

ನನಗ ಇಕಿ ಭಂಡ ಮೊಂಡಾಟ ಕಂಡ್ರ ಹೊಟ್ಯಾಗ ಕಸಿವಿಸಿ ಆಗ್ತದ್ರಿ. ಏನ ಮಾಡೂದು? ರಕ್ತ ಕುದೀತದ. ಆದ್ರ, ಏನ ಮಾಡ್ಲಿ? Head of the family ಆದ ಮ್ಯಾಲೆ ನಾ ತಾಳಿಕೊಳ್ಳದಿದ್ರ ಇನ್ಯಾರು ತಾಳಿಕೊಳ್ಳೋದು ಹೇಳ್ರಿ?

ಅಲ್ರೀ, ಒಂದಕ್ಕರ ನನ್ನ-ಮಾತಿಗೆ ಮನ್ನಿಣೆ ಬರ್ಬೇಕು? ಹೋಗಲಿ, ನನಗ ಈ ಮಕ್ಕಳ ಮುಂದರ ಸ್ವಲ್ಪ ಮರ್‍ಯಾದಿ ಕೊಡಬೇಕು? ಅಲ್ಲಾ ಆ ಸಣ್ಣ ಹುಡುಗರ ಮುಂದರs ನನ್ನ ಮರ್‍ಯಾದಿ ತಗದ್ರ, ಬಾಯಿಗೆ ಬಂದ್ಹಂಗ ಆಡಿದ್ರ ನಾಳೆ ಅವು ನನ್ನ ಕೇಳ್ಯಾವೇನ್ರಿ? ಅವು ಹ್ಯಾಂಗ ಮರ್‍ಯಾದಿ ಕೊಟ್ಯಾವ ಹೇಳ್ರಿ? ಗಂಡ ಬೇಕು, ಗಂಡನ ವಿಚಾರ ಬ್ಯಾಡಂದ್ರ ಹ್ಯಾಂಗ್ರಿ? ಅಲ್ಲಾ, ಸರಕಾರ ನಡೆಸಲಿಕ್ಕೆ ವಿರೋಧ ಪಕ್ಷ ಬೇಕs ಬೇಕು; ಆದ್ರ ಅದರ ವಿಚಾರ ಬ್ಯಾಡಾ ಅಂದ್ರ?

ಹೊಟ್ಟೆ ತುಂಬ ಉಂಡ್ರ "ಹಾ ಎಷ್ಟರ ದಿಂದ ಉಣ್ಣರಿ, ಮದ್ಲs ಹೊಟ್ಟಿ ಬರೋಬರಿ ಇಲ್ಲಾ ನಿಮ್ಮದು. ಮ್ಯಾಲೆ ಹವಾನೂ ಒಂದ ನಮೂನಿ ಬಿಟ್ಟದ; ನನಗೇನು? ನಾ ಏನು ನಮ್ಮಪ್ಪನ ಮನೀದ ಬ್ಯಾರೆ ಹಾಕೂದಿಲ್ಲ? ನಾಳೆ ನೀವು ಮಲಗಿದ್ರ ತಲಿ ಒತ್ತು, ಕಾಲು ಒತ್ತು ಅಂದ್ರ ನಾ ಏನ ಬರಾಕೆಲ್ಲಾ, ಮದ್ಲ ಹೇಳರ್ತೀನಿ," ಅಂತ ಸುರುಮಾಡಿದ್ಲು. ಹೂಂ ಆಗ್ಲಿ ಅಂತಾಳಂತ ಕಡಿಮಿ ಮಾಡಿದ್ರ ಅದಕೂ ಸುರುವs! "ಯಾಕ್ರಿ ಯಾ ಕಾಮತನ ಅಂಗಡಿ ಆತು? ಈ ಅಡಿಗೆ ಉಳದದ್ದು ಯಾರ ತಲೀಗೆ ಕಟ್ಟಲಿ?



ಯಾವಾಗ ನೋಡಿದ್ರೂ ನಾ ನೋಡೋ ಮುಂದನಕಾ ಇಕಿ ಮಾರಿ ಗಂಟs ಇರ್ತದ. ಏನೋ ಸ್ವಲ್ಪ ನಗಸೋಣಾಂತ ನಕ್ಕೋತ ಮಾತಾಡಿದ್ರ ಪರಿವಾರನಿಯೋಜನದ ಕ್ಯಾಲೆಂ-ಡರ್ ತೋರಿಸ್ತಾಳ.

ಇಷ್ಟಕ್ಕs ಮುಗೀತು ಅಂತಿರೇನು ನಮ್ಮ ಸರಕಾರದ ಆಡಳಿತ ಕ್ರಮಾ? ಊಹೂಂ, ಪ್ಯಾಟಿ ಧಾರಣಿ ದಿನಾದಿನಾ ಏರೋಮುಂದ ಬರೋ ಪಗಾರ ಸಾಲ್ದಂಗ ಆದಾಗ ಅವರಿವರ ಕಡೆ ಸಾಲಾ ಮಾಡಿ ಮನಿ ನಡಸೋದು ನಮ್ಮಂಥಾ ಬಡ ನೌಕರರ ನಿತ್ಯ ಹಣೆಬರಹ ಆಗೇದ. ಇಂಥಾದ್ರಾಗ ಯಾವಾಗರ ಅಂದ್ರ ಆರ ತಿಂಗಳ ಮ್ಯಾಲೆ ಸರಕಾರ ನಮಗೊಂದು ಡಿ. ಎ. ಜಾಹೀರ ಮಾಡಿತಂದ್ರ ಅಂದರಿಂದೇನೂ ನಮಗ ಸಂತೋಷ ಆಗೂದಿಲ್ಲಾ. ಆದ್ರೂ ಏನೋ ಬಂದ ಸಮಾಧಾನ ಹಚಿಗೊಳ್ಳೋಣ ಅಂದ್ರ ಅಷ್ಟರಾಗ ನಮ್ಮ ಸರಕಾರ "ದಿನಾ ಉಡೋ ಸೀರಿ ತೋಗೊಬೇಕ್ರಿ" ಅಂತ ಆಕಾಶ ವಾಣಿ ಕಾರ್ಯಕ್ರಮದ ಮಧ್ಯಮಧ್ಯ ಇದೊಂದು ವಿಶೇಷ ಪ್ರಕಟಣೆ ಅಂತ ಹೇಳೂ ದಾಗ ಹೇಳೂದಲ್ಲs ಆ ಡಿ. ಎ. ಇಕಿ ಸೀರಿಗೆ ಹೋಗ್ತದ. ಯಾವ್ದರ ಡಿಫೆನ್ಸ್ ಬಂದ್ರ "ಇಟ್ಟು ಉಡೋ ಸೀರಿ" ಆಗಬೇಕು. ಬೋನಸ್ ಬರ್ತದಂತ ಉಳದವರಿಗೇನೊ ಖುಶಿ ಆಗ್ತಿರ ಬಹುದು. ನನ್ನ ಪಾಲಿಗಂತೂ ಊಹೂಂ ಕೇಳ ಬ್ಯಾಡ್ರಿ. ಬೋನಸ್ ಯಾಕ ಕೊಡ್ತಾರೋ ಅಂತೀನಿ ಅದು ಬರೋಮೊದ್ಲs ಇಕೀದು ಪ್ಲಾನು ಸಿದ್ಧ ಇರ್ತsದ ಬಂಗಾರದ ಯಾವ ದರ ಒಂದು ಆಭರಣ ಆಗ್ಬೇಕು ಇಲ್ಲಾಂದ್ರ ಬೆಳ್ಳೀದರೆ ಏನರೆ ಆಗ್ಬೇಕು. ಎರಡು ವರ್ಷದ ಲಾಗಾಯ್ತು ಎರಡು ಹೊಸ ಅಂಡರವೇರು ಎರಡು ಹೊಸಾ ಬನೀನು ಕೊಳ್ಳಬೇಕಂತ ಅಂತೀನಿ ಅನ್ನೋದs ಆಗೇದ ಹೊತ್ತಾಗಿ ...man praposes, God disposes ಎಷ್ಟ ಖರೇ!

ಇಕಿ ಸಿಟ್ಟಂಕಾ ಕೇಳೂದs ಬ್ಯಾಡಾ. ಅದು ಬಂತಂದ್ರ ಮಕ್ಕಳಮ್ಯಾಲೆ ಹಾಸಿ ಬೈಯಲಿಕ್ಕೆ ಸುರುಮಾಡ್ತಾಳ. ಮನ್ಯಾಗ ಕೈಗೆ ಸಿಕ್ಕ ಭಾಂಡಿ ತಾಟು ಒಂದೂ ಉಳಿಯೂದಿಲ್ಲಾ. ಇಂಥಾ ವ್ಯಾಳ್ಯಾದಾಗ ನಾನು ಲೋಕಸಭಾಗ ವಿಧಾನ ಸಭಾದಾಗ ವಿರೋಧಿ ಪಕ್ಷದ ಸದಸ್ಯರು ಯಾವದೋ ಕಾರಣಕ್ಕಾಗಿ ಸಭಾತ್ಯಾಗ ಮಾಡೋಹಂಗ ಮಾಡ್ತೀನಿ ಅಷ್ಟೂ ಸ್ವತಂತ್ರ ಇಲ್ಲೇನ್ರಿ ನಾನು?

ಮತ್ತೆನ್ರಪಾ ಅಂದ್ರ, ನಮ್ಮ ಬಾಸ್ ಮ್ಯಾಲಿಂದ ಮ್ಯಾಲೆ ಟೂರ್ ಹೋಗೋ ಹಂಗ ಇಕೀನೂ ತೌರಮನೀಗೆ ಹೋಗೂದು, ಮತ್ತ ಹೆಡ್ ಆಫೀಸಿನವ್ರು ವರ್ಷಕ್ಕೊಮ್ಮೆ ಇನ್ಸ್‌ಪೆಕ್ಷನ್ನಿಗೆ ಬರೋಹಂಗ ಅತ್ತೀ ಮಾವಾ ಈ ಮನೀಗೆ ಬರೂದೂ ಎಲ್ಲಾ ನಡದs ಅದ.

ಒಟ್ಟಿನ ಮ್ಯಾಲ ಏನ್ರಪಾ ಅಂದ್ರ, ಅದೇನೋ ಅಂತಾರಲ್ಲಾ ಕುದುರಿ ಮೇಯ್ದs ಸತ್ತಿತಂತ. ಕತ್ತಿ ಹೊತ್ತುಹೊತ್ತು ಬಯ್ಸಿಕೊಂಡs ಸತ್ತಿತಂತ. ಹಾಂಗ ನನ್ನದೂ ಕತ್ತೀ ಜನ್ಮ ಆಗೇದ್ರಿ. ನಮ್ಮ 'ಸರಕಾರ'ದ ಕೈಯಾಗ. ಆಗ್ಲಿ ನಾ ಸಂಭಾಳಸಾ—ಇನ್ಯಾರ ಸಂಭಾಸಬೇಕ ಹೇಳ್ರಿ, ಏನಂದ್ರೂ ನಮ್ಮ ಸರಕಾರನs ಅಲ್ಲ?

ಕವಿ failure ಆಗಿ ವಿಮರ್ಶಕ ಆಗ್ತಾನಂತ ಸಂಸಾರದಾಗ failure ಆಗಿ ವೇದಾಂತಿ ಆಗ್ತಾನ ಕಾಣ್ತದ. ನಾನು ನಿತ್ಯ ಪ್ರಾರ್ಥನಾ ಮಾಡೂದು ದೇವರ ಮುಂದ ಏನಂತೀರಿ?

"ನೀನೊಲಿದರೆ ಕೊರಡು ಕೊನರುವು ದಯ್ಯಾ...?"



ಮೂಲ : ಚಕ್ಕಲಂ ವಿಜಯಲಕ್ಷ್ಮಿ
ಕನ್ನಡಕ್ಕೆ : ಕಂಬಳಿ ಆದವಾನಿ



ಆಕೆ ಯಾರು?

ಊರಿನ ನಡು ಮಧ್ಯೆ, ಗಜಿಬಿಜಿ ರಸ್ತೆಯಲ್ಲಿ, ಜನಸಮುದ್ರದ ಒಡ್ಡಿನಲ್ಲಿ – ಅದೇ ಆ ರಸ್ತೆಯ ಪಕ್ಕದ ಮರದ ಕೆಳಗೆ...

ಆಕೆ ಯಾರು?

ಚಪ್ಪರಿಸುತ್ತಿದೆ. ತನ್ನ ಹಸಿವಿಗಾಗಿ ತನ್ನ ಅವಸರಕ್ಕಾಗಿ ಎದುರಿನವರನ್ನು ನೋಯಿಸುವಷ್ಟು ವಯಸ್ಸಾಗದಿದ್ದುದಕ್ಕಾಗಿ ತನ್ನ ಪುಟ್ಟ ಕೈಗಳಿಂದ ತಲೆ ಜುಟ್ಟನ್ನು ಕಿತ್ತುಕೊಳ್ಳುತ್ತಿದ್ದಾನೆ. ತಾನೇ ಅಳುತ್ತಿದ್ದಾನೆ! ತಾನೇ ಬಿಕ್ಕುತ್ತಿದ್ದಾನೆ.

ಆಕೆಗೇನಾಯ್ತು ತಿಳಿಯಲೇ ಇಲ್ಲ. ಮಗನನ್ನು ಗಮನಿಸುತ್ತಿಲ್ಲ. ಕದಲುತ್ತಿಲ್ಲ. ಸೆರಗನ್ನಾದರೂ ಸರಿಮಾಡಿಕೊಳ್ಳುತ್ತಿಲ್ಲ. ಕಣ್ಣ ರೆಪ್ಪೆಗಳ ಬಾಗಿಲುಗಳನ್ನು ಪೂರ್ತಿಯಾಗಿ ತೆರೆದಿಟ್ಟಿದ್ದಾಳೆ. ನೋಟವನ್ನು ಶೂನ್ಯದತ್ತ ನೆಟ್ಟಿದ್ದಾಳೆ. ಸಂಪೂರ್ಣ ಮೌನವ್ರತ ಹಿಡಿದಿದ್ದಾಳೆ.

ಮಗು ಹಸಿವಿನಿಂದ ಅತ್ತು ಬೇಸತ್ತಿದೆ. ಹಾಲು ಸಾಲದೇ ಹೋದರೂ ತಾಯಿಯ ಅಪ್ಪುಗೆಯಿಂದ ಅರ್ಧ ಹಸಿವನ್ನು ನೀಗಿಸಿಕೊಳ್ಳುವ ಯತ್ನದಲ್ಲಿದ್ದ ಮಗು ಕೊನೆಗೆ ಕುಪಿತಗೊಂಡಿತ್ತು. ಪುಟ್ಟ ಪುಟ್ಟ ಕೈಗಳಿಂದ ತಾಯಿಯನ್ನು ಹೊಡೆದೆಬ್ಬಿಸಲು ಆರಂಭಿಸಿತು.

ತಾಯಿ ಮಗುವಿನೆಡೆ ನೋಡುತ್ತಲೇ ಇಲ್ಲ. ಈಗ ಮಗು ತಾಯಿಯ ಮೇಲೆರಗಲು ಹೋದ. ತಾಯಿಯ ಸಹಕಾರವಿಲ್ಲದೇ ಹಿಡಿತ ಸಿಗಲಾರದೇ ಕೆಳಗೆ ಬಿದ್ದುಬಿಟ್ಟ. ಕೈ ಶರೀರದ ಕೆಳಗೆ ಮುಗುಚಿಕೊಂಡು ಮತ್ತೆ ಹುಡುಗ ಕಿರುಚತೊಡಗಿದ. ತಾಯಿಗೇನಾಗಿದೆ? ಅಲುಗಾಡುತ್ತಿಲ್ಲವೇಕೆ? ಮಾತನಾಡುತ್ತಿಲ್ಲವೇಕೆ? ಯಾವಾಗಲೂ ಇಷ್ಟೇನಾ? ಇದುವರೆಗೆ ಅಲುಗಾಡುತ್ತಿದ್ದಳಾ? ಮಾತನಾಡುತ್ತಿದ್ದಳಾ? ಮಗು ಅಷ್ಟು ಗಟ್ಟಿಯಾಗಿ ಅಳುತ್ತಿದ್ದರೂ ಕರುಣೆ ತೋರಿಸುವವರೇ ಇಲ್ಲ.

ಮಾನವೀಯತೆಯ ಭಾಷೆ ಬಿಗಿದ, ಕೇಳುವ ಜನ ಆ ರಸ್ತೆಯ ಮೇಲಿರುವ ಆ ಮಾರದ ಪಕ್ಕದಲ್ಲೇ ನೂರಾರು ಸಾವಿರಾರು ಸಂಖ್ಯೆಯಲ್ಲಿ ಹೋಗುತ್ತಲೇ ಇದ್ದಾರೆ. ಕೆಲವರು ಒಂದರೆಕ್ಷಣ ಅಳುವ ಮಗುವಿನತ್ತ ನೋಡುತ್ತಲೆ ಇದ್ದಾರೆ.

ಆಕೆಯ ಹಸಿವನ್ನು, ಆಕೆಯನ್ನು, ಹಸಿದವನೊಬ್ಬ ಬಹಳ ಸಮಯದಿಂದ ರಸ್ತೆಯ ಆ ಕಡೆ ನಿಂತುಕೊಂಡು ಗಮನಿಸುತ್ತಲೇ ಇದ್ದಾನೆ. ಆದರೆ ಈಗ ಆತನಿಗೇನೋ ಅನುಮಾನವುಂಟಾಯಿತು. ಅದಕ್ಕೆ ತಕ್ಕಂತೆಯೇ ಅಳುತ್ತಿರುವ ಮಗು, ಅದಕ್ಕೆ ಕದಗದ ಆಕೆಯ ನಿಶ್ಚಲತ್ವ, ಮಗು ತಾಯಿಯ ದೇಹದ ಮೇಲೆ ಹತ್ತಲು ಹೋಗಿ ಮತ್ತೆ ಬೀಳುವುದು ಆದರೂ ಆಕೆ ಕೊರಡಿನಂತೇಕೆ ಕುಳಿತಿದ್ದಾಳೆ?

ಆತ ಬೆಚ್ಚಿ ಬಿದ್ದ. ಆದರೂ ಸಾವರಿಸಿಕೊಂಡ.

ಆತನಲ್ಲಿ ಚೇತನ ಮೂಡಿತು. ಕಾಲುಗಳಿಗೆ ಚಲನೆ ಬಂದಿತು.

ನೂತನೋತ್ಸಾಹದಿಂದ ರಸ್ತೆಯ ಆ ಕಡೆ ನಡೆದ. ಆತ ಊಹಿಸಿದ್ದು, ಅಲ್ಲ ಅಲ್ಲ ಆ ನಿಸಿದ್ದು ನಿಜ. ಆಕೆ ಸತ್ತಿದ್ದಾಳೆ. ರಸ್ತೆಯ ಪಕ್ಕದಲ್ಲಿ ಬೇವಾರ್ಸಿ ಹೆಣವಾಗಿದ್ದಾಳೆ. ಹಸುಗೂಸೊಂದನ್ನು ಹಸಿವೆಯಿಂದ ಒದ್ದಾಡಲು ಬಿಟ್ಟು. ಆತ ಅತ್ತಿತ್ತ ಕಣ್ಣಾಡಿಸಿದ. ತಮ್ಮ ಪಾಡಿಗೆ ಜನ ಹೋಗುತ್ತಿದ್ದಾರೆ. ಇವನನ್ನಾಗಲಿ ಹೆಣವನ್ನಾಗಲಿ ಯಾರೂ ಗಮನಿಸುತ್ತಿಲ್ಲ. ಗಮನಿಸಿದರೂ ಏನಾಯಿತೆಂದು ವಿಚಾರಿಸುತ್ತಿಲ್ಲ. ಮನುಷ್ಯರೆಷ್ಟು ಒಳ್ಳೆಯವರು! ಯಾವುದನ್ನೂ ಅಷ್ಟಾಗಿ ಹಚ್ಚಿಕೊಳ್ಳುವುದಿಲ್ಲ. ಅವರು ಹಚ್ಚಿಕೊಳ್ಳಬೇಕಾದ್ದನ್ನೂ ಹಚ್ಚಿಕೊಳ್ಳುವುದಿಲ್ಲ.

ಆತ ಆಕೆಯನ್ನು ನೆಲದ ಮೇಲೆ ಮಲಗಿಸಿ ಕಣ್ಣುಗಳನ್ನು ಮುಚ್ಚಲು ಪ್ರಯತ್ನಿಸಿದ. ಅವು ಮುಚ್ಚಿಕೊಳ್ಳಲಿಲ್ಲ. ಕಾಲುಗಳ ಬಳಿ ಸೀರೆಯನ್ನು ಸರಿಪಡಿಸಿದ. ಆಕೆಯ ತೂತು ಬಿದ್ದ ಸೆರಗನ್ನೇ ಎಳೆದು ಮುಖದ ತುಂಬಾ ಹೊದಿಸಿದ. ಮತ್ತೆ ಏನೆಂದುಕೊಂಡನೋ ಮುಖ ಮಾತ್ರ ಕಾಣಿಸುವಂತೆ ತೆರೆದಿಟ್ಟ.

ಮಗುವನ್ನು ನೋಡಿದ. ಹೊಟ್ಟೆಯ ಕೆಳಗೆ ಸಿಕ್ಕಿಕೊಂಡ ಮಗುವಿನ ಕೈ ಹಾಗೆಯೇ ಇದೆ. ಅತ್ತು ಅತ್ತೂ ಸುಸ್ತಾಗಿ ಮಲಗಿತ್ತು. ಮಗುವನ್ನು ಎಬ್ಬಿಸಿದ. ಅಷ್ಟುಹೊತ್ತು ಅತ್ತು ಗೋಳಾಡಿಸಿದ ಬೇವಾರ್ಸಿ ಮಗು ಅಳು ನಿಲ್ಲಿಸಿದ್ದಕ್ಕೆ ಆತನಿಗೆ ಸಿಟ್ಟು ಬಂದಿತು. ಗಟ್ಟಿಯಾಗಿ ತೊಡೆ ಚಿವುಟಿದ. ನೋವನ್ನು ತಾಳಲಾರದೇ ಮಗು ಅಳತೊಡಗಿತು. ಆತ ಒಳಗೊಳಗೇ ನಕ್ಕ. ಅನಾಥ ಶವ! ಅದೂ ವಯಸ್ಸಿನಲ್ಲಿರುವ

ಹೆಣ್ಣಿನ ಶವ! ಪಕ್ಕದಲ್ಲಿ ಹಸಿವು ಕೆರಳುವಂತೆ ಅಳುತ್ತಿರುವ ಮಗು!

ಯಾವ ಹೃದಯವನ್ನಾದರೂ ಹಿಂಡಿಬಿಡುವ ದೃಶ್ಯ.

ಮಾನವೀಯತೆಯನ್ನು ಜಾಗೃತಗೊಳಿಸುವ ದೃಶ್ಯ.

ಪಾಪ ಆತ ಯಾರೋ? ತನ್ನ ಕೆಲಸ ಬಿಟ್ಟು ಅನಾಥ ಶವಕ್ಕೆ ಸಂಸ್ಕಾರ ಮಾಡೋಣ ಎಂದು ನಡು ಬೀದಿ ನಿಂತಿದ್ದಾನೆ, ಭಾರತೀಯ ಮಹಾ ಪ್ರಜೆಯ ಪ್ರತೀಕನಂತೆ. ತಲಾ ಒಂದು ಕೈ ನೀಡುವುದು ಧರ್ಮ, ಪುಣ್ಯದ ಕೆಲಸವೂ... ಬರ ಹೋಗುವವರು ನೋಡುತ್ತಿದ್ದಾರೆ. ನೋಡಿ ನಿಲ್ಲುತ್ತಿದ್ದಾರೆ. ನಿಂತು ಆಲೋಚಿಸುತ್ತಿದ್ದಾರೆ. ಕಣ್ಣೀರು ಸುರಿಸುತ್ತಿದ್ದಾರೆ. ಕೈಗಳನ್ನು ಜೇಬಿಗೆ ಇಳಿಬಿಡುತ್ತಿದ್ದಾರೆ. ಪುಡಿಗಾಸುಗಳನ್ನು ಎಸೆಯುತ್ತಿದ್ದಾರೆ. ಸ್ವರ್ಗದಲ್ಲಿ ತಮ್ಮ ಪುಣ್ಯದ ಅಕೌಂಟ್ ಬೆಳೆಸಿಕೊಳ್ಳುತ್ತಿದ್ದಾರೆ.

ಪವಿತ್ರ ಭಾರತದೇಶದಲ್ಲಿ ಶವಸಂಸ್ಕಾರ ಶಾಸ್ತ್ರೋಕ್ತವಾಗಿ ನಡೆಯಲೇಬೇಕಲ್ಲವೆ? ಇಲ್ಲಿನ ಪ್ರತಿಯೊಬ್ಬ ಭಿಕಾರಿ ಬೀದಿ [illegible]. ಬದುಕಿರುವಾಗ ಯಾರೂ ಹಚ್ಚಿಕೊಳ್ಳುವುದಿಲ್ಲ. ಅದು ಅವರವರ ಪುರಾಕೃತಪಾಪಫಲ. ಅದಕ್ಕೆ ಯಾರು ತಾನೇ ಏನು ಮಾಡಬಲ್ಲರು? ಯಾರು ಬಾಧ್ಯತೆ ವಹಿಸಬಲ್ಲರು. ಮನುಷ್ಯರಿಗೆ ಕರುಣೆ ದಯೆ ಇಲ್ಲ ಎಂದರೆ ಯಾರು ಒಪ್ಪುತ್ತಾರೆ? ಆತನ ಮುಂದೆ ರಾಶಿ ಬಿದ್ದ ನಾಣ್ಯಗಳನ್ನು ನೋಡಿ.

ಸಮಯ ಬಹಳ ಕಳೆಯಿತು. ಜನರ ಓಡಾಟ ಕಡಿಮೆಯಾಗತೊಡಗಿತು. ಮಗು ಮತ್ತೆ ಅಳಲಾರದೆ ಬಿದ್ದುಬಿಟ್ಟಿತು. ಆ ಶವದ ಮೇಲೆ ಸಂಪಾದಿಸಿದ ಹಣದಿಂದ ಮಗುವಿಗೆ ಒಂದು ಕಪ್ ಹಾಲು ಕುಡಿಸುವಷ್ಟು ಕೆಟ್ಟ ಕೆಲಸವನ್ನು ಆತ ಮಾಡಲಾರದೆ ಹೋದ.

ಆಕೆಯ ಶವದತ್ತ ಒಮ್ಮೆ ನೋಡಿದ.

ಆ ಮಗುವಿನತ್ತ ಕರುಣೆಯ ನೋಟ ಬೀರಿದ.

ಆತನಲ್ಲೂ ಕೃತಜ್ಞತೆ ಕರುಣೆಗಳು ಇವೆ ಮತ್ತೆ!

ಆ ಗುಂಪಿನಲ್ಲೇ ಬಹಳ ಸಮಯದಿಂದ ಕಾಣಿಸುತ್ತಿದ್ದ ಒಬ್ಬ ಮಧ್ಯ ವಯಸ್ಕನನ್ನು ಹತ್ತಿರ ಕರೆದು ಹೇಳಿದ,

"ನೀವು ಸ್ವಲ್ಪ ಹೊತ್ತು ಇಲ್ಲೇ ನೋಡ್ತಾ ಇರ್ತೀರಾ? ನಾನು ಹೋಗಿ ದಹನಕ್ಕೆ ಬೇಕಾದ ಏರ್ಪಾಡುಗಳನ್ನು ಮಾಡಿ ಬರುತ್ತೇನೆ."

"ಹಾಗೇ ಆಗಲಿ." ಅಂದ ಆ ಮಧ್ಯ ವಯಸ್ಕ. ಹಾಗೇ ನೋಡುತ್ತಿದ್ದರೆ ಮಧ್ಯ ವಯಸ್ಕನಿಗೂ ಏನೋ ಯೋಚನೆ ಬಂದಂತಿದೆ.

ಮುಂದಿನ ವ್ಯವಸ್ಥೆಗೆಂದು ಹಣವನ್ನೆಲ್ಲಾ ಬಳಿದು ಜೇಬುಗಳಲ್ಲಿ ತುಂಬಿಕೊಂಡು ಆತ ಎದ್ದು ನಿಂತ.

ಆತನಿಗೆ ಪಕ್ಕದಲ್ಲೇ ಬಿದ್ದಿರುವ ಮಗುವೂ ಶವದಂತೆ ಕಾಣಿಸಿತು. ಹೊಸ ಯೋಚನೆ ಬಂತಾದರೂ ಅತಿಕಷ್ಟದಿಂದ ಮನಸ್ಸು ನಿಗ್ರಹಿಸಿಕೊಂಡು ಅಲ್ಲಿಂದ ಹೊರಟು ಬಿಟ್ಟ.

ಮಾರನೆಯ ದಿವಸ ಬೆಳಿಗ್ಗೆ ಮುನಿಸಿಪಾಲಿಟಿಯವರು ಕಸದ ಲಾರಿಯಲ್ಲಿ ಆಕೆಯ ಶವವನ್ನು ಹಾಕಿಕೊಂಡು ಹೋಗುವವರೆಗೂ ಮುಂದಿನ ಏರ್ಪಾಡುಗಳಿಗೆಂದು ಹೋದವನ ಏರ್ಪಾಡುಗಳು ಮುಗಿದಿರಲೇ ಇಲ್ಲ.



### ಕುರಿಗಳು ಸಾರ್!

**ಕುರಿಮಂದೆ ಹೊರಟಾಗ ನೀವು ದಾರಿಯಲ್ಲೊಂದು ಕಟ್ಟಿಗೆಯನ್ನೋ ಬೊಡ್ಡೆಯನ್ನೋ ಅಡ್ಡಲಾಗಿ ಹಾಕಿ. ಮುಂದಿರುವ ಕುರಿ ಅದನ್ನು ಜಿಗಿದು ಹೋಗುತ್ತದೆ. ಹಿಂದಿನ ಕುರಿಯೂ ಹಾಗೇ. ಮೂರನೆಯದರಿಂದ ನೂರನೆಯದರ ವರೆಗೂ... ಅಷ್ಟರಲ್ಲಿ ನೀವು ಆ ಬೊಡ್ಡೆಯನ್ನು ಸರಿಸಿದ್ದೀರಿ ಎಂದಿಟ್ಟುಕೊಳ್ಳಿ- ಆದರೂ ಆ ಕುರಿಗಳು ಜಿಗಿಯುತ್ತಲೇ ನಡೆದಿವೆ; ಯಾಕೆ? ಅದಕ್ಕೆ ಕಾರಣ ಮಾತ್ರ ಗೊತ್ತಿಲ್ಲ. ಮುಂದಿನ ಕುರಿ ಜಿಗಿದು ಹೋಯಿತಲ್ಲ ಮತ್ತೆ-ಅದಕ್ಕೆ... —ನಾಗೇಶ ಜಿ. ವೈದ್ಯ**

# ರಂಗಭೂಮಿಯಲ್ಲಿಷ್ಟು ದಿನ

ಶಂ. ಬಾ. ಮುನಗೋಳಿ

೧೯೩೨-೩೩ರಲ್ಲಿ ದೇಶದಲ್ಲಿ ರಾಷ್ಟ್ರೀಯ ಆಂದೋಲನವು ಅತ್ಯುಗ್ರವಾಗಿತ್ತು. ೧೯೩೦ ರಲ್ಲಿ ಆಗ ವಾಯಿಸರಾಯರಾಗಿದ್ದ ಲಾರ್ಡ್ ಇರ್ವಿನ್‌ರು ಮಹಾತ್ಮಾ ಗಾಂಧಿ ಅವರು ಹೂಡಿದ್ದ ಉಪ್ಪಿನ ಸತ್ಯಾಗ್ರಹದ ಕಾರ್ಯಕ್ರಮ



ದಲ್ಲಿ ಭಾಗವಹಿಸಿದ್ದ ಲಕ್ಷಾವಧಿ ಸತ್ಯಾಗ್ರಹಿಗಳನ್ನು ಬಂಧಿಸಿ ಸೆರೆಮನೆಗಳಿಗೆ ಕಳಿಸಿದ್ದರೂ ಆ ನಂತರ ಇರ್ವಿನ್-ಗಾಂಧಿ ಒಪ್ಪಂದದ ಮೇರೆಗೆ ಸತ್ಯಾಗ್ರಹಿಗಳೆಲ್ಲರೂ ಬಂಧಮುಕ್ತರಾಗಿ ಹೊರಬಂದರು. ಲಾರ್ಡ್ ಇರ್ವಿನ್‌ರು ಹೋಗಿ ಲಾರ್ಡ್ ವಿಲಿಂಗ್ಡನ್ನರು ವಾಯಿಸ್‌ರಾಯರಾಗಿ ಬಂದ ನಂತರ ಮತ್ತೆ ಆಂದೋಲನ ಮತ್ತೆ ಬಂಧನ ಸತ್ರಗಳು ದೇಶದ ತುಂಬೆಲ್ಲ ನಡೆದವು. ರಾಷ್ಟ್ರೀಯ ಮುಖಂಡರೆಲ್ಲರೂ ಬಂಧಿಸಲ್ಪಟ್ಟ ನಂತರ ಇನ್ನೂ ಹೊರಗುಳಿದವರೆಲ್ಲರೂ ಕಾಂಗ್ರೆಸ್ಸಿಗರೇ ಎಂದು ಹೇಳಿ ಸೆರೆಮನೆ ತುಂಬಿದರು. ಕಾಂಗ್ರೆಸ್ ಸಂಸ್ಥೆ ಮತ್ತು ಅದರೊಡನೆ ಸಂಬಂಧವಿದ್ದ ಹಿಂದುಸ್ತಾನೀ ಸೇವಾದಲ ಮೊದಲಾದ ಸಂಸ್ಥೆಗಳೂ ಅಕ್ರಮವೆಂದು ಸಾರಲ್ಪಟ್ಟು ಆ ಸಂಸ್ಥೆಗಳ ಆಸ್ತಿಪಾಸ್ತಿಗಳನ್ನು ಸರಕಾರವು ಮುಟ್ಟುಗೋಲು ಹಾಕಿ ವಶಪಡಿಸಿಕೊಂಡಿತು. ಆಗ ಪ್ರತಿಯೊಬ್ಬ ಭಾರತೀಯನೂ ಕಾಂಗ್ರೆಸ್ಸಿಗ ಪ್ರತಿಯೊಂದು ಮನೆಯೂ ಕಾಂಗ್ರೆಸ್ ಕಾರ್ಯಾಲಯ ಎಂಬ ಆಂದೋಲನ ಪ್ರಾರಂಭವಾಯಿತು.

ನಾನು ಆಗ ಹುಬ್ಬಳ್ಳಿಯ ಅರ್ಬನ್ ಕೋ-ಆಪರೇಟಿವ್ ಬ್ಯಾಂಕಿನಲ್ಲಿ ಉಮೇದುವಾರನಾಗಿ ಕೆಲಸಕ್ಕಿದ್ದೆ. ಒಂದು ದಿನ ರಾತ್ರಿ ನನ್ನ

ಮಿತ್ರರಾದ ದಿ. ಕುರ್ತಕೋಟಿ ದತ್ತಪ್ಪ ಮತ್ತು ದಿ. ಬ. ಗು. ಸರಾಫ ಇವರು ಬಂದು ನಮ್ಮ ಮನೆಯನ್ನು ಕಾಂಗ್ರೆಸ್ ಕಾರ್ಯಾಲಯ ಎಂದು ಸಾರಬೇಕೆಂದು ಸೂಚಿಸಿ ನನ್ನ ಮನಪೊಲಿಸಿದರು. ನಮ್ಮ ಮನೆಯವರೆಲ್ಲರೂ ನಮ್ಮೂರಿಗೆ ಹೋಗಿದ್ದರಿಂದ ನಾನು ಮನೆಯ ಎಲ್ಲ ಸಾಮಾನು ಗಳನ್ನು ಕುರ್ತಕೋಟಿ ಅವರ ನೆರವಿನಿಂದ ಚೀಲ ಗಳಲ್ಲಿ ತುಂಬಿ ಮರುದಿನ ರಾತ್ರಿ ಎಂಟು ಚೀಲ ಪಾತ್ರೆ ಪಡಗಗಳು, ಎರಡು ಪೆಟ್ಟಿಗೆಗಳು. ನಾಲ್ಕು ಹಾಸುಗೆ ಸುರುಳಿಗಳನ್ನು ರೈಲಿನಿಂದ ಗೋಕಾಕಕ್ಕೆ ರವಾನಿಸಿದೆ. ಆ ಬಗ್ಗೆ ರೇಲ್ವೆ ರಶೀದಿಯನ್ನು ಗೋಕಾಕದಲ್ಲಿದ್ದ ನನ್ನ ಅಣ್ಣನ ಕಡೆಗೆ ಕಳುಹಿಸಿದೆ. ಮರುದಿನ ನಮ್ಮ ಹೊಸಗೀಲಿ ಹಾಕಿದ ಮನೆಯ ಚೌಕಟ್ಟಿನ ಮೇಲೆ 'ಕಾಂಗ್ರೆಸ್ ಕಾರ್ಯಾಲಯ' ಎಂಬ ಬೋರ್ಡು ನೇತಾಡು ತ್ತಿತ್ತು.

ಹುಬ್ಬಳ್ಳಿಯಲ್ಲಿ ಆಗ ಚಂದಾವರಕರ ಎಂಬ ಪೋಲೀಸ್ ಸಬ್ ಇನ್‌ಸ್ಪೆಕ್ಟರರಿದ್ದರು. ಅವರು ಡಾ. ಹರ್ಡೀಕರ ಅವರೊಡನೆ ಅತ್ಯಂತ ಸ್ನೇಹ ಯುತ ನಿಕಟ ಸಂಬಂಧವನ್ನಿಟ್ಟುಕೊಂಡಿದ್ದರು.

ನಾನು ಅರ್ಬನ್ ಬ್ಯಾಂಕಿನಲ್ಲಿ ಉಮೇದು ವಾರನಿದ್ದಾಗ ವಿಠ್ಠಲರಾವ್ ವಾಳ್ವೇಕರರು ಬ್ಯಾಂಕಿನ ಮ್ಯಾನೇಜರರಾಗಿದ್ದರು. ಅವರು ಬ್ಯಾಂಕಿನ ಕೆಲಸದ ಜೊತೆಗೆ ನನಗೆ ಪತ್ರಿಕೋ- ದ್ಯಮದ ಪರಿಚಯ ಮಾಡಿಕೊಡುತ್ತ ನನ್ನನ್ನು ಬಾಂಬೇ ಕ್ರಾನಿಕಲ್ ಪತ್ರಿಕೆಯ ಹುಬ್ಬಳ್ಳಿಯ ಪ್ರತಿನಿಧಿಯನ್ನಾಗಿ ನೇಮಿಸುವ ಏರ್ಪಾಟು ಮಾಡಿದ್ದರು. ಅವರಂತೆ ನಾನು ದಿನಾಲು ಆ ಪತ್ರಿಕೆಗೆ ವರದಿಯನ್ನು ಬರೆದು ಶ್ರೀ ವಿಠ್ಠಲ ರಾಯರಿಗೆ ತೋರಿಸಿ ಕಳಿಸುತ್ತಿದ್ದೆ.

ನಮ್ಮ ಮನೆಗೆ ಬೋರ್ಡು ಹಚ್ಚಿದ ನಂತರ ಮುಂದೆರಡು ದಿನಗಳ ಮೇಲೆ ಚಂದಾ ವರಕರ ಅವರು ವಿಠ್ಠಲರಾಯರ ಬಳಿ ಬಂದು ನನ್ನ ವಿರುದ್ಧ ಗುಪ್ತ ರಿಪೋರ್ಟು ಹೋಗಿದೆ ಯೆಂದೂ ಅದ್ದರಿಂದ ಕೂಡಲೇ ನನ್ನನ್ನು ಹುಬ್ಬಳ್ಳಿಯಿಂದ ಹೊರಕ್ಕೆ ಕಳುಹಿಸಬೇಕೆಂದೂ ಸೂಚಿಸಿದರು. ವಿಠ್ಠಲರಾಯರು ಈ ಬಗ್ಗೆ ದಿ. ಗುರುನಾಥಪ್ಪ ಹುಬಳೀಕರ, ದಿ. ಕೆ. ಗುರು ರಾವ್ ದಿ. ಮೋಡಕ ಇವರೊಡನೆ ವಿಚಾರವಿ ನಿಮಯ ಮಾಡಿ ಕೆಲ ದಿನಗಳ ವರೆಗೆ ನಾನು ಹುಬ್ಬಳ್ಳಿಯನ್ನು ಬಿಡಬೇಕೆಂದು ನಿರ್ಧರಿಸಿದರು,

ಅದೇ ಕಾಲಕ್ಕೆ ಮಂಗಳೂರಿನ ಶ್ರೀ ಅಂಬಾ ಪ್ರಾಸಾದಿಕ ನಾಟಕ ಮಂಡಳಿಯು ಪ್ರಪ್ರಥಮ ವಾಗಿ ಉತ್ತರ ಕರ್ನಾಟಕವನ್ನು ಪ್ರವೇಶಿಸಿ ಹುಬ್ಬಳ್ಳಿಯ ಮಲ್ಲಿಕಾರ್ಜುನ ನಾಟಕ ಗೃಹದಲ್ಲಿ ತನ್ನ ನಾಟಕಗಳನ್ನು ಪ್ರದರ್ಶಿಸುತ್ತಿತ್ತು. ಈ ನಾಟಕ ಮಂಡಳಿಯ ಒಡೆಯರು ಎಂ. ರಂಗ ನಾಥ ಭಟ್ಟ ತಾಮ್ಹಣಕರ ಅವರು. ದಕ್ಷಿಣ ಕನ್ನಡ ಮತ್ತು ಮೈಸೂರು ಪ್ರಾಂತದಲ್ಲಿ ಸುವಿ ಖ್ಯಾತರು. ಆ ಭಾಗದಲ್ಲಿಯೇ ಅದು ದೊಡ್ಡ ನಾಟಕ ಮಂಡಳಿ. ಅದರಲ್ಲಿ ಹತ್ತು ಕುಟುಂಬ ಗಳಿಂದ ಕೂಡಿದ ನೂರಿಪ್ಪತ್ತು ಜನ ನಟರಿದ್ದರು. ೩೦-೪೦ ನಾಟಕಗಳನ್ನು ಆ ಮಂಡಳಿ ಆಡಿತ್ತು. ಅವುಗಳಲ್ಲಿ ತೀರ ಜನಪ್ರಿಯ ನಾಟಕ ಗಳೆಂದರೆ ರಾಯರ ಸೊಸೆ, ಆಜನ್ಮ ಕುಮಾರಿ, ತುಳಸೀದಾಸ, ಲಾಲಸಾ, ಕೃಷ್ಣ ಸಂಧಾನ. ವಿಕ್ರಮ ಶಶಿಕಲಾ, ನಿರುಪಮಾ. ಕೃಷ್ಣಲೀಲಾ, ಸದಾರಮೆ ಇವೇ ಮೊದಲಾದವು. 'ರಾಯರ ಸೊಸೆ'ಯಂತೂ ಜಯಭೇರಿ ಹೊಡೆದಿತ್ತು. ಶ್ರೇಷ್ಠಮಟ್ಟದ ಮರಾಠಿ ನಾಟಕಗಳಿಗಿಂತ ಈ ನಾಟಕವು ಹೆಚ್ಚು ಲೋಕಪ್ರಿಯವಾಗಿತ್ತು. ರಂಗನಾಥ ಭಟ್ಟರು ಹೊಟೆಲ್ ರಾಜನೆಂದು ಆಗ ಸುವಿಖ್ಯಾತರಾದ ದಿ. ಕಡೇಕಾರ ಗುರು ರಾಯರ ಆತ್ಮೀಯ ಸ್ನೇಹಿತರು. ಅವರ ಪ್ರೋತ್ಸಾಹದಿಂದಲೇ ರಂಗನಾಥ ಭಟ್ಟರು ಹುಬ್ಬಳ್ಳಿಗೆ ಬಂದದ್ದು.

ರಾಯರ ಸೊಸೆ ನಾಟಕವು ಸುಪ್ರಸಿದ್ಧ ಮರಾಠಿ ನಾಟಕವಾದ 'ಪಂತಾಂಚಿ ಸೂನ' ಎಂಬ ನಾಟಕದ ಕನ್ನಡದ ಅನುವಾದವಾಗಿತ್ತು. ಈ ನಾಟಕದ ಲೇಖಕರು ಗಣೇಶ ಶಾಸ್ತ್ರಿ ಘಾಟಕ. ಅವರ ಹತ್ತೆಂಟು ನಾಟಕಗಳು ಮಹಾರಾಷ್ಟ್ರದ ರಂಗಭೂಮಿಯ ಮೇಲೆ ಅತ್ಯಂತ ಜನಪ್ರಿಯವಾಗಿದ್ದವು. ಹುಬ್ಬಳ್ಳಿಯಲ್ಲಿ ರಾಯರ ಸೊಸೆಯು ಜನಪ್ರಿಯವಾದುದನ್ನು

ಕಂಡು ನಗರದ ಮರಾಠಿ ಅಭಿಮಾನಿಗಳು ಶಾಸ್ತ್ರಿಗಳಿಗೆ ಪತ್ರ ಬರೆದು "ನಿಮ್ಮ ನಾಟಕವನ್ನು ಇಲ್ಲಿ ಒಂದು ಕನ್ನಡ ಕಂಪನಿಯವರು ಆಡುತ್ತಿದ್ದಾರೆ. ನೀವು ಅವರಿಗೆ ಆಡಲು ಅನುಮತಿ ಕೊಟ್ಟಿರುವಿರೋ ಹೇಗೆ? ಕೊಟ್ಟಿರದಿದ್ದರೆ ಕೂಡಲೆ ನೀವು ಇಲ್ಲಿಗೆ ಬನ್ನಿರಿ," ಎಂದು ತಿಳಿಸಿದ್ದರಿಂದ ಶಾಸ್ತ್ರಿಗಳು ಹುಬ್ಬಳ್ಳಿಗೆ ಬಂದು ಇಲ್ಲಿಯ ಕಾಂಗ್ರೆಸ್ ಮುಖಂಡರೂ ಸುಪ್ರಸಿದ್ಧ ವಕೀಲರೂ ಆಗಿದ್ದ ವಿಶ್ವನಾಥರಾವ ಜೋಶಿ ಅವರಲ್ಲಿ ತಂಗಿದರು.

ರಾಯರ ಸೊಸೆ ನಾಟಕವನ್ನು ಬಂದು ಮಾಡಿಸಿ ಕಂಪನಿಯಿಂದ ಹಾನಿ ತುಂಬಿಸಿಕೊಳ್ಳಬೇಕೆಂಬ ವಿಚಾರ ನಡೆದಾಗ ಈ ಸುದ್ದಿ ಗುರುರಾಯರಿಗೆ ತಿಳಿದ ಕೂಡಲೆ ರಂಗನಾಥಭಟ್ಟರೊಡನೆ ಶಾಸ್ತ್ರಿಗಳ ಕಡೆಗೆ ಹೋಗಿ ಅಂದಿನ ನಾಟಕಕ್ಕೆ ಆಗಮಿಸಬೇಕೆಂದು ಆಮಂತ್ರಣ ಕೊಟ್ಟರು.

ಸ್ವಭಾವತಃ ಸಜ್ಜನರೂ ಸುಹೃದಯಿಗಳೂ ಆಗಿದ್ದ ಶಾಸ್ತ್ರಿಗಳು ಅಂದು ರಾತ್ರಿ 'ರಾಯರ ಸೊಸೆ' ನಾಟಕ ನೋಡಲು ಹೋದರು. ನಾಟಕದ ಮಧ್ಯಂತರದಲ್ಲಿ ಶಾಸ್ತ್ರಿಗಳನ್ನು ವೇದಿಕೆಗೆ ಕರೆದೊಯ್ದು ರಂಗನಾಥ ಭಟ್ಟರು ಅವರಿಗೆ ಮಾಲೆ ಹಾಕಿ ಒಂದು ಹಮ್ಮಿಣಿಯನ್ನು ಅರ್ಪಿಸಿದರು. ಇದರಿಂದ ತುಂಬ ಸಂತೃಪ್ತರಾದ ಶಾಸ್ತ್ರಿಗಳು 'ರಾಯರ ಸೊಸೆ' ಮೂಲ ಮರಾಠಿಗಿಂತಲೂ ಹೆಚ್ಚು ಪರಿಣಾಮಕಾರಿಯಾಗಿ ಪ್ರಯೋಗಗೊಂಡಿದೆಯೆಂದು ಹೇಳಿ-ತಾವಿಲ್ಲಿ ಬಂದಿದ್ದ ಉದ್ದೇಶ ಬೇರೆಯಾಗಿತ್ತೆಂದೂ ಹೇಳಿದರಲ್ಲದೆ ತಾವು ಬರೆದ ಇತರ ನಾಟಕಗಳನ್ನು ಕನ್ನಡದಲ್ಲಿ ಆಡಲು ಕಂಪನಿಗೆ ಅನುಮತಿ ನೀಡಿರುವುದಾಗಿಯೂ ಸಾರಿದರು.

ಹುಬ್ಬಳ್ಳಿಯಲ್ಲಿಯ ತನ್ನ ಪ್ರಯೋಗಗಳನ್ನು ಯಶಸ್ವೀ ರೀತಿಯಿಂದ ಮುಗಿಸಿಕೊಂಡು ಈ ಕಂಪನಿ ಗದಗಿಗೆ ತೆರಳಿತು.

ಈ ಮೊದಲೇ ರಂಗನಾಥ ಭಟ್ಟರು ಥಿಯೇಟರ್ ಒಡೆಯರಾದ ಗುರುನಾಥಪ್ಪ ಹುಬಳೀಕರ, ಗುರುರಾವ, ವಾಳ್ವೇಕರರೊಡನೆ ಕುಳಿತಾಗ ಉತ್ತರ ಕರ್ನಾಟಕವು ತಮಗೆ ತೀರ ಅಪರಿಚಿತ ಪ್ರದೇಶ. ಆದ್ದರಿಂದ ಈ ಭಾಗದ ಪರಿಚಯವಿರುವ ಒಬ್ಬರ ನೆರವನ್ನು ತಮಗೆ ಒದಗಿಸಿ ಕೊಡಿ ಎಂದು ಕೇಳಿದ್ದರಂತೆ.

ಚಂದಾವರಕರರು ನನ್ನ ವಿಷಯವಾಗಿ ಹೇಳಿದ್ದ ಸೂಚನೆ ಇದಕ್ಕೆ ಅನುಕೂಲವಿದ್ದುದರಿಂದ ಈ ಮೂವರು ನನ್ನ ಹಿತಚಿಂತಕರು ನನ್ನನ್ನು ಅಂಬಾಪ್ರಸಾದಿಕ ಕಂಪನಿಗೆ ವ್ಯವಸ್ಥಾಪಕನನ್ನಾಗಿ ನಿಯಮಿಸಬೇಕೆಂದು ನಿರ್ಧರಿಸಿದರು. ಗುರುರಾಯರು ನನ್ನನ್ನು ಕರೆದುಕೊಂಡು ಗದಿಗಿಗೆ ಹೋಗಿದರು. ರಂಗನಾಥ ಭಟ್ಟರು ಹುಬ್ಬಳ್ಳಿಯಲ್ಲಿದ್ದಾಗಲೇ ನಾನು ಬರೆದಿದ್ದ 'ವೀರಶ್ರೀ' ಮತ್ತು 'ಆತ್ಮಯಜ್ಞ' ಎಂಬ ನಾಟಕಗಳನ್ನು ಅವರಿಗೆ ಓದಿ ತೋರಿಸಿದ್ದೆ. ಭಟ್ಟರು ನನ್ನನ್ನು ತಮ್ಮ ಕಂಪನಿಯ ವ್ಯವಸ್ಥಾಪಕ











"ವಾಹ್... ಏನ್ ಚಂದಾಗಿ ಅಲಂಕಾರ ಮಾಡೀರಲ್ರಿ...ಸೆಕ್ರೆಟರಿ..."

ನೆಂದು ಅವರು ಹಾರ್ದಿಕವಾಗಿ ಬರಮಾಡಿ ಕೊಂಡು ನನಗೆ ನಾನು ಕೈಕೊಳ್ಳಬೇಕಾದ ಕೆಲಸಗಳ ರೂಪರೇಷೆಗಳನ್ನು ತಿಳಿಸಿಕೊಡ ತೊಡಗಿದರು.

ಬಾರಕೂರ ಶಾಮಣ್ಣ ಎಂಬವರು ಆಗ ಮ್ಯಾನೇಜರರಾಗಿದ್ದರು. ಒಬ್ಬರು ಕ್ಯಾಂಪ್ ಮ್ಯಾನೇಜರ್ ಎಂದೂ ಒಬ್ಬರು ಅಡ್ವಾನ್ಸ್ ಮ್ಯಾನೇಜರ್ ಎಂದೂ ಕೆಲಸ ಮಾಡಬೇಕೆಂದು ನಿರ್ಧರಿಸಲಾಯಿತು.

ಆ ಕಾಲದಲ್ಲಿ ಈಗಿನಂತೆ ಪ್ರತಿದಿನವೂ ನಾಟಕ ಪ್ರಯೋಗವಿರುತ್ತಿರಲಿಲ್ಲ. ಶನಿವಾರ ಸೋಮವಾರ ಬುಧವಾರ ಈ ಮೂರು ದಿನಗ ಳಲ್ಲಿ ಮಾತ್ರ ಪ್ರಯೋಗವಿರುತ್ತಿತ್ತು. ಅತಿ ಯಾಗಿ ಜನಪ್ರಿಯವಾಗಿದ್ದ ನಾಟಕದ ಪ್ರಯೋಗ ವನ್ನು ರವಿವಾರ ಹಗಲು ನಾಲ್ಕು ಗಂಟೆಗೆ ಇಡಲಾಗುತ್ತಿತ್ತು. ಅಜನ್ಯಕುಮಾರಿ ಮತ್ತು ಚಂದ್ರಗ್ರಹಣ ಇವುಗಳನ್ನು ಬರೆದು ರಂಗ ಭೂಮಿಗೆ ತಂದವರು ಚಿಕ್ಕೋಡಿ ಶಿವಲಿಂಗ ಶಾಸ್ತ್ರಿಗಳು ಕೃಷ್ಣಸಂಧಾನವನ್ನು ಬರೆ ದವರು ಮಂಗಳೂರಿನ ಹಂಡೆ ಶ್ರೀಪತಿ ದಾಸರು ಕಾಳಿಯಾ ಮರ್ದನದ ಕರ್ತೃ ಮೈಸೂರಿನ ಆಸ್ಥಾನ ವಿದ್ವಾನ್ ಬಸವಪ್ಪಶಾಸ್ತ್ರಿ ಗಳು ಇವಲ್ಲದೆ ವಿಕ್ರಮ ಶಶಿಕಲಾ, ನಿರುಪಮಾ, ಸದಾರಮೆ, ಲಂಕಾದಹನ, ಚೌಚೌ, ಸೌಭದ್ರ, ಸಂಪೂರ್ಣ ರಾಮಾಯಣ ಇವೇ ಮೊದಲಾದ ೨೪ ನಾಟಕಗಳನ್ನು ಪ್ರದರ್ಶಿಸಲಾಗುತ್ತಿತ್ತು.

ಶ್ರೀ ಅಂಬಾಪ್ರಾಸಾದಿಕ ನಾಟಕ ಮಂಡಳಿ ಯಲ್ಲಿ ಖ್ಯಾತ ಸಿನೇಮಾ ಕಲಾವಿದೆ ಪಂಢರೀ ಬಾಯಿ, ಪಿ. ಕಾಳಿಂಗರಾವ್, ಬಸರೂರು ಮಹಾ ಬಲ. ಬಾರ್ಕೂರು ರಾಮಕೃಷ್ಣ ಹಾವೇರಿಯ ಸೋನೂಬಾಯಿ ದೊಡ್ಮನಿ, ತೀರ್ಥಹಳ್ಳಿಯ ಟಿ. ಜಿ. ಶಾಮರಾವ್, ಕಾರ್ನಾಡ್ ಮುಕುಂದ ರಾವ್, ಲಕ್ಷ್ಮಣ ಸೊಂಡೂರು ಮುಂತಾದವ ರಿದ್ದರು. ಒಡೆಯರಾದ ರಂಗನಾಥ ಭಟ್ಟರಿಗೆ ನೂರು ಸುವರ್ಣ ಪದಕಗಳು ಮೈಸೂರು ದರ್ಬಾರದಿಂದ ಬಿರುದು ಬಾವಲಿಗಳು ದೊರೆತು ಆ ಕಾಲದ ನಟವರ್ಗದಲ್ಲಿ ಅವರು ಅಗ್ರ ಗಣ್ಯರಾಗಿದ್ದರು. ಸೋನೂಬಾಯಿಗೆ ರಾಯರ ಸೊಸೆ ನಾಟಕದಲ್ಲಿ ಚುದ್ರಾ ಎಂಬ ನರ್ತಕಿಯ ಪಾತ್ರಮಾಡುತ್ತಿದ್ದರು. ರಾಮದುರ್ಗ ವೆಂಕಟ ರಾಯರಿಂದ ಶಾಸ್ತ್ರೀಯ ಸಂಗೀತದ ಶಿಕ್ಷಣ ಪಡೆಯುತ್ತಿದ್ದರು. ಕಾಳಿಂಗರಾಯರಿಗೂ ವೆಂಕಟರಾಯರಿಂದಲೇ ಸಂಗೀತದೀಕ್ಷೆ (ವೆಂಕಟ ರಾಯರು ಸವಾಯಿ ಗಂಧರ್ವರಲ್ಲಿ ಸಂಗೀತ ಕಲಿತವರು.)

ಒಬ್ಬಿಬ್ಬರನ್ನು ಬಿಟ್ಟು ಎಲ್ಲ ನಟವರ್ಗ ದವರು ೨೦ರಿಂದ ೩೦ ವರ್ಷ ವಯಸ್ಸಿನ ವರು. ನಾಲ್ಕಾರು ಬಾಲಕರೂ ಇದ್ದರು. ಇವರ ಶಿಕ್ಷಣಕ್ಕಾಗಿ ಓರ್ವ ಸಂಗೀತ ಶಿಕ್ಷಕನನ್ನು ನೇಮಿಸಲಾಗಿತ್ತು. ರಂಗಸಜ್ಜಿಕೆಗೆ ಒಬ್ಬ ವ್ಯವ ಸ್ಥಾಪಕ ಅವನಿಗೆ ಸಹಾಯಕರಾಗಿ ಹತ್ತೆಂಟು ಜನ, ಡ್ರೆಸ್ ಮ್ಯಾನೇಜರ್ ಒಬ್ಬ ಅವನಿಗೆ ಇಬ್ಬರು ಸಹಾಯಕರು, ಗ್ರೀನ್ ರೂಮು ಮ್ಯಾನೇಜರ್ ಒಬ್ಬ. ಅವನಿಗಿಬ್ಬರು ಸಹಾಯ ಕರು. ಬೋರ್ಡಿಂಗ್ ಮ್ಯಾನೇಜರ್, ಮಾರ್ಕೆಟ್ ಮ್ಯಾನೇಜರ್, ಲೆಕ್ಕ ಪತ್ರದ ಪ್ರಮುಖ ಅವರಿಗೆ ಇಬ್ಬರು ಕಾರಕೂನ ಸಹಾಯಕರು, ಅಡಿಗೆಯವ ರಿಬ್ಬರು ಅವರಿಗೆ ನಾಲ್ಕು ಜನ ಸಹಾಯಕರು. ಇವರೆಲ್ಲರ ಉಸ್ತುವಾರಿ ನೋಡಿಕೊಳ್ಳುವುದು ಕ್ಯಾಂಪ್ ಮ್ಯಾನೇಜರನ ಕರ್ತವ್ಯವಾಗಿತ್ತು. ಅಡ್ವಾನ್ಸ್ ಮ್ಯಾನೇಜರನು ಮುಂದಿನ ಕ್ಯಾಂಪು ನಿರ್ಧಾರವಾದ ಕೂಡಲೇ ಅಲ್ಲಿಗೆ ಹೋಗಿ ಥಿಯೇ ಟರ್ ಗೊತ್ತುಪಡಿಸುವುದು ಕಂಪನಿಯ ಕರ್ಮ ಚಾರಿಗಳಿಗಾಗಿ ಬೋರ್ಡಿಂಗ್ ಮನೆ ಗೊತ್ತು ಪಡಿಸುವದು, ಮಾಲಕರಿಗೆ ವ್ಯವಸ್ಥಾಪಕರಿಗೆ ಮತ್ತು ಕುಟುಂಬಸ್ಥ ನಟವರ್ಗದವರಿಗೆ ಪ್ರತ್ಯೇಕ ಬಿಡಾರಗಳನ್ನು ಬಾಡಿಗೆಯಿಂದ ಹಿಡಿ ಯುವದು; ಮುದ್ರಣಾಲಯ. ಕಿರಾಣಿ ಅಂಗಡಿ, ನಾಪಿತರು, ಪ್ರಚಾರಕರು ಇವರನ್ನು ಗೊತ್ತುಮಾಡುವದು, ಸರಕಾರದಿಂದ ನಾಟಕ ಪ್ರಯೋಗ ಮತ್ತು ಪ್ರಚಾರಕ್ಕಾಗಿ ವಾದ್ಯ ಗಳ ಪರವಾನಿಗೆ ಪಡೆಯುವದು ಮನರಂಜನಾ ಕರದ ಟಿಕೇಟುಗಳ ವ್ಯವಸ್ಥೆ ಇವೇ ಮೊದಲಾದ ಏರ್ಪಾಟು ಮಾಡಬೇಕಾಗುತ್ತಿತ್ತು.

ಒಂದು ಪ್ರಯೋಗದ ಸಂದರ್ಭದಲ್ಲಿ ರಂಗನಾಥ ಭಟ್ಟರು ನನಗೆ ವೇದಿಕೆಯ ಮೇಲೆ ಹೋಗಿ ಮುಂದಿನ ಪ್ರಯೋಗದ ಪ್ರಕಟಣೆ ಮಾಡಬೇಕೆಂದು ಆಜ್ಞಾಪಿಸಿದರು. ನಾಟಕ ಮುಕ್ತಾಯವಾಗಲಿಕ್ಕೆ ಇನ್ನೊಂದು ಪ್ರವೇಶ ಉಳಿದಾಗ ನಾನು ವೇದಿಕೆಯಲ್ಲಿ ಪ್ರವೇಶಿಸಿದ್ದೆ ತಡ ನನ್ನ ಮೈ ಜುಮ್ಮೆಂದಿತು. ಎದುರಿಗೆ ನೋಡಿದರೆ ಬರೀ ಸಾವಿರಾರು ಕಣ್ಣುಗಳು, ಸಾವಿರಾರು ತಲೆಗಳು ಕಂಡವು. ನನ್ನ ಬಾಯಿ ಒಣಗಿತು. ಕೈಕಾಲು ನಡುಗತೊಡಗಿದವು. ನಾನು ಕಕ್ಕಾಬಿಕ್ಕಿಯಾಗಿ ಕ–ಕ–ಪ–ಪ ಮಾಡಹತ್ತಿದ್ದರಿಂದ ಪ್ರೇಕ್ಷಕವೃಂದ ಚಪ್ಪಾಳೆ ತಟ್ಟಿ ಹೋ ಎಂದು ನಗತೊಡಗಿತು. ನಾನು ಬಾಯಿ ತೆರೆಯದೆ ಹಾಗೇ ಒಳಗೆ ಓಡಿದೆ.

ಈ ಸುದ್ದಿ ಮರುದಿನ ರಂಗನಾಥ ಭಟ್ಟರಿಗೆ ಮುಟ್ಟಿದಾಗ ಅವರು ನನ್ನನ್ನು ತರಾಟೆಗೆ ತೆಗೆದುಕೊಳ್ಳಬಹುದೆಂದು ನಾನು ಯೋಚಿಸಿದ್ದೆ. ಆದರೆ ಅವರು ಹಾಗೆ ಮಾಡದೆ "ರಂಗ ಭೀತಿ ಹೊಸಬರಿಗೆ ಆಗಿಯೇ ಆಗುವುದು. ಆ ಭೀತಿಯನ್ನು ತೊಲಗಿಸಲಿಕ್ಕೆ ಒಂದು ಉಪಾಯವೆಂದರೆ ಸಂಭಾಷಣೆಗಳಿಲ್ಲದ ಪಾತ್ರವಹಿಸಿ ರೂಢಿ ಮಾಡಿಕೊಳ್ಳುವುದು. ಆದ್ದರಿಂದ ಮುಂದಿನ ನಾಟಕದಲ್ಲಿ ನೀವು ಒಂದು ಮೂಕ ಪಾತ್ರ ವಹಿಸಿರಿ" ಎಂದು ಸಲಹೆ ಕೊಟ್ಟರು. ಮುಂದಿನ ಪ್ರಯೋಗ ಕೃಷ್ಣ ಸಂಧಾನ. ಶ್ರೀಕೃಷ್ಣನು ಮಹಾಭಾರತ ಯುದ್ಧವನ್ನು ತಪ್ಪಿಸುವುದಕ್ಕಾಗಿ ಕೌರವರ ಓಲಗಕ್ಕೆ ಬರುವ ಪ್ರಸಂಗ ಅದು. ನುರಿತ ನಟವರ್ಗದವರು ಶ್ರೀಕೃಷ್ಣ, ದುರ್ಯೋಧನ, ವಿದುರ, ಕರ್ಣ ಇವರ ಪಾತ್ರಗಳನ್ನು ವಹಿಸಿದ್ದರು. ಎರಡೇ ಮಾತುಗಳುಳ್ಳ ದುಶ್ಶಾಸನನ ಪಾತ್ರವನ್ನು ನನಗೊಪ್ಪಿಸಿದ್ದರು. ರಂಗಸಜ್ಜಿಕೆಯಲ್ಲಿ ಅತ್ಯಂತ ನಿಪುಣ ಕಲಾವಿದರಾದ ಡಿ. ಬಿ. ರಾಮಕೃಷ್ಣ ಅವರು ನನ್ನ ಮೈಗೆ ಗಾಢದ ಅಂಗಿಯನ್ನು ತೊಡಿಸಿದರು. ಪೀತಾಂಬರವನ್ನು ಉಡಿಸಿದರು. ಮುತ್ತಿನ ಹಾರ, ಕರ್ಣಕುಂಡಲ, ಭುಜಕೀರ್ತಿಗಳನ್ನು, ನಡುಪಟ್ಟಿಯನ್ನೂ ಕಟ್ಟಿದರು. ಮುಖಕ್ಕೆ ಬಣ್ಣ ಬಳಿದು ಕಲ್ಲಿ ಮೀಸೆಗಳನ್ನೂ ತಲೆಗೆ ಚೂಪಾದ ಮೇಲೆ ಕಿರೀಟವನ್ನು ಹಾಕಿ ಕೈಯಲ್ಲಿ ಗದೆ ಕೊಟ್ಟು ರಂಗಭೂಮಿಯ ಮೇಲೆ ನೂಕಿದರು. ದುರ್ಯೋಧನನು "ಬಾ ರಾಜಕುಮಾರ, ಈ ಆಸನವನ್ನಲಂಕರಿಸು," ಎಂದು ನಾನು ಕೂಡಬೇಕಾಗಿದ್ದ ಆಸನದತ್ತ ಕೈ ಮಾಡಿ ಕರೆದ. ನಾನು ದರ್ಪದಿಂದ ಹೆಜ್ಜೆ ಹಾಕುತ್ತ ಕೈಯೊಳಗಿನ ಗದೆಯನ್ನು ಮೇಲಿಗೇರಿಸಿ ಹೋಗಿ ನನ್ನ ಆಸನದಲ್ಲಿ ಕುಳಿತೆ. ಕೊನೆಯ ಪ್ರವೇಶದಲ್ಲಿ ದುರ್ಯೋಧನನ ಓಲಗಕ್ಕೆ ಬಂದಾಗ ಶ್ರೀಕೃಷ್ಣ ದುರ್ಯೋಧನರ ಸಂವಾದ ನಡೆದು ಕೊನೆಗೆ ದುರ್ಯೋಧನನು ತನ್ನ ಉಚ್ಚಾಸನದಿಂದ ಕೆಳಗೆ ಜಿಗಿಯುತ್ತ "ದುಶ್ಶಾಸನಾ ಹಿಡಿ. ಈ ಗೊಲ್ಲರ ಕುನ್ನಿಯನ್ನು" ಎಂದು ಅರ್ಭಟಿಸಿದಾಗ ನನ್ನ ಬದಿಗೆ ಕುಳಿತಿದ್ದ ಕರ್ಣ ಪಾತ್ರಧಾರಿಯಾದ ಕನಕದ ಮುಕುಂದರಾಯರು ನನಗೆ ಚುಚ್ಚಿದರು. ಕೂಡಲೆ ನಾನು ಎದ್ದು ನಿಂತು ರಂಗಮಂಟಪದ ತುಂಬೆಲ್ಲ "ಎಲ್ಲಿ? ಆ ಕಳ್ಳ ಕೃಷ್ಣನೆಲ್ಲಿ?" ಎಂದು ಕಿರುಚುತ್ತ ರಂಗಮಂಟಪವನ್ನೆಲ್ಲ ಸುತ್ತುತ್ತಿದ್ದಾಗ ಎಲ್ಲೆಲ್ಲಿಯೂ ಶ್ರೀಕೃಷ್ಣನ ಪ್ರತಿರೂಪವೇ ಕಾಣಿಸುವಲ್ಲಿಗೆ ನಾಟಕ ಮುಕ್ತಾಯಗೊಂಡಿತು.

ಅದೇ ನನ್ನ ಪ್ರಪ್ರಥಮ ಪಾತ್ರ.

(ಮುಂದುವರಿಯುವುದು)



# ಅರಿವಳಿಕೆಗಳ ಅರಿವು

ಡಾ. ಸಿ. ಅಶ್ವತ್ಥ

ಶಸ್ತ್ರಚಿಕಿತ್ಸೆಯಾಗಬೇಕಾದರೆ ಅರಿವಳಿಸುವುದು ಅತ್ಯವಶ್ಯಕ. ಅರಿವಳಿಕೆಯನ್ನು ಮುಖ್ಯವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು.

೧. ಸಮಗ್ರ ಅರಿವಳಿಕೆ (ಜನರಲ್ ಅನಸ್ಥೀಸಿಯಾ)

೨. ಸ್ಥಳೀಯ ಅರಿವಳಿಕೆ (ರೀಜನಲ್/ಲೋಕಲ್ ಅನಸ್ಥೀಸಿಯಾ.

ಸಮಗ್ರ – ಅರಿವಳಿಕೆಯನ್ನು ನೀಡಿದಾಗ ರೋಗಿಯು ಸಂಪೂರ್ಣ ಪ್ರಜ್ಞಾಶೂನ್ಯನಾಗಿರುವುದೇ ಅಲ್ಲದೆ ಕೆಲವೊಮ್ಮೆ ಶ್ವಾಸ ನಿಯಂತ್ರಣವೂ ಅರಿವಳಿಕೆ ತಜ್ಞರ ಕೈಯಲ್ಲಿರುತ್ತದೆ. ಸಮಗ್ರ ಅರಿವಳಿಕೆಯ ಔಷಧಗಳು ಮನುಷ್ಯನ ಮೆದುಳನ್ನು ತಲುಪಿ ಅರಿವಿನ ಕೇಂದ್ರವನ್ನು ಮುಸುಕುಗೊಳಿಸುತ್ತದೆ.

ಕೆಲವು ಔಷಧಗಳನ್ನು (ಪೆಂಟೊಥಾಲ್ ಇಂಟಾಪೋಲ್, ಪೆಂಥಿಡಿನ್ ಮಾರ್ಫಿನ್ ಕೆಟಮಿನ ಡ್ರೊಪೆರಿಡಾಲ್, ಡೈಜಿಪಾಮ್ ಇತ್ಯಾದಿ) (ಮಲಿನ ರಕ್ತನಾಳಗಳಲ್ಲಿ ಚುಚ್ಚಿದರೆ ಇಂಟ್ರಾವೀನಸ್ ಇಂಜೆಕ್ಷನ್) ಇವು ರಕ್ತದ ಮೂಲಕ ಹೃದಯವನ್ನು ತಲುಪುತ್ತವೆ. ನಂತರ ಮೆದುಳನ್ನು ತಲಪಿ ಪ್ರಜ್ಞೆ ಅಳಿಯುತ್ತದೆ.

ಕೆಲವು ಔಷಧಿಗಳನ್ನು ನೈಟ್ರಸ್ ಆಕ್ಸೈಡ್ ಅನಿಲ,ಈಥರ್, ಕ್ಲೋರೋಫಾರ್ಮ್ ಹ್ಯಾಲೋಥೇನ್ ಮುಂತಾದ ಆವಿಯಾಗಬಲ್ಲ ದ್ರವಗಳು ಇತ್ಯಾದಿ ಮೂಸಿಸಿದರೆ (ಇನ್‌ಹೇಲೇಶನ್) ಉಸುರಿನ ಮೂಲಕ ಶ್ವಾಸಕೋಶ ಅಲ್ಲಿಂದ ರಕ್ತದ ಮೂಲಕ ಹೃದಯ ಹಾಗೂ ಮೆದುಳನ್ನು ತಲುಪಿ ಪ್ರಜ್ಞಾಶೂನ್ಯವಾಗಿಸುತ್ತವೆ.

ಕೆಲವು ಔಷಧಗಳು (ಮಾದಕ ಪದಾರ್ಥಗಳು, ಗಾರ್ಡಿನಲ್ ಮಾತ್ರೆಗಳು, ಲಾರ್ಗಾಕ್ಟಿಲ್ ಮುಂತಾದ ಬಹೂಪಯೋಗಿ ನಿದ್ರಾಕಾರಕ ಔಷಧಗಳು ಇತ್ಯಾದಿ) ಎಲ್ಲೆ ಮೀರಿ ಬಾಯಿಂದ ಸೇವಿಸಿದಾಗ ಅವು ಹೊಟ್ಟೆಯಲ್ಲಿ ರಕ್ತಗತವಾಗಿ ಅಂತಿಮವಾಗಿ ಮೆದುಳನ್ನು ತಲಪುತ್ತವೆ. ಕೆಲವು ಕೀಟ ನಾಶಕಗಳು ಸ್ಪರ್ಶ ಮಾತ್ರದಿಂದಲೇ ರಕ್ತಗತವಾಗಿ ಮೆದುಳನ್ನು ತಲಪಿ ಪ್ರಜ್ಞಾಶೂನ್ಯವಾಗುತ್ತವೆ. ಈ ವಿಧಾನಗಳು ನಿರ್ದಿಷ್ಟ ರೂಪ ರೇಖೆಗಳನ್ನು ಹೊಂದಿಲ್ಲದಿರುವದು ಮತ್ತು ಅರಿವಳಿಕೆ ತಜ್ಞರ ನಿಯಂತ್ರಣದಲ್ಲಿಟ್ಟುಕೊಳ್ಳುವುದಕ್ಕೆ ಆಗುವುದಿಲ್ಲವಾದುದರಿಂದ ಶಸ್ತ್ರಚಿಕಿತ್ಸೆಗೆ ಬಳಸಿಕೊಳ್ಳುತ್ತಿಲ್ಲ. ಮೊದಲು ಹೇಳಿದ ಎರಡು ವಿಧಾನಗಳು ಶಸ್ತ್ರಚಿಕಿತ್ಸೆಗೆ ಬಳಸಲ್ಪಡುತ್ತೇವೆ.

ಮಲಿನ ರಕ್ತದ ಮೂಲಕ ನೀಡುವ ಅರಿವಳಿಕೆ ಸಣ್ಣ ಶಸ್ತ್ರಚಿಕಿತ್ಸೆಗೆ ಬಹಳ ಪ್ರಯೋಜನಕಾರಿಯಾಗಿದೆ. ಉಸಿರಿನ ಮೂಲಕ ನೀಡುವ ಔಷಧಗಳು ದೀರ್ಘ ಕಾಲದ ದೊಡ್ಡ ಶಸ್ತ್ರಚಿಕಿತ್ಸೆಗೆ ಅತ್ಯವಶ್ಯಕ. ಇವುಗಳಲ್ಲಿ ಮೊದಲು ನೀಡುತ್ತಿದ್ದ ಕ್ಲೋರೋಫಾರ್ಮ್ ಬಹಳ ಪ್ರಖ್ಯಾತಿಯನ್ನು ಪಡೆದಿತ್ತು.

ಕ್ಲೋರೋಫಾರ್ಮಿನ ಬಗ್ಗೆ ಅಧ್ಯಯನ ತಯಾರಿಕೆ ಹಾಗೂ ಪ್ರಯೋಗಗಳಲ್ಲಿ ಪ್ರಪಂಚಕ್ಕೆ ಭಾರತದ ಕೊಡುಗೆ ಅತ್ಯಮೂಲ್ಯ. ೧೮೮೩ರಲ್ಲಿ ಸ್ಕಾಟ್‌ಲೆಂಡಿನಲ್ಲಿ ಜನಿಸಿದ ಡಾ. ಡೇವಿಡ್ ವಾಲ್ಡಿ ಯವರು ೧೮೫೩ರಲ್ಲಿ ಕಲ್ಕತ್ತೆಗೆ ಬಂದು ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್ ಸಂಸ್ಥೆಯ ಸದಸ್ಯರಾಗಿ ಕ್ಲೋರೋಫಾರ್ಮನ್ನು ಭಾರತದಲ್ಲಿ ತಯಾರಿಸಿ ವಿಶ್ವಮಾನ್ಯತೆ ಗಳಿಸಿಕೊಟ್ಟರು. ಭಾರತವನ್ನು ತಮ್ಮ ಕಾರ್ಯಕ್ಷೇತ್ರ ಅರ್ಥಾತ್ ತಪೋಭೂಮಿಯನ್ನಾಗಿ ಮಾಡಿಕೊಂಡಿದ್ದು ೩೬ ವರ್ಷಗಳ ದೀರ್ಘ ಸೇವೆಯ ನಂತರ ೧೮೮೯ರಲ್ಲಿ ಕಲ್ಕತ್ತ ನಗರದಲ್ಲಿ ಪ್ರಾಣತ್ಯಾಗ ಮಾಡಿದರು.

ಕ್ಲೋರೋಫಾರ್ಮಿನ ಉಪಯುಕ್ತತೆ ಹಾಗೂ ದುಷ್ಪರಿಣಾಮಗಳ ಬಗ್ಗೆ ವಾದವಿವಾದಗಳು ವಿಶ್ವದಾದ್ಯಂತ ನಡೆಯುತ್ತಿದ್ದಾಗ ಭಾರತದಲ್ಲಿ ಹೈದರಾಬಾದಿನ ನಿಜಾಮರ ಆದೇಶದಂತೆ ಮೊದಲ ಹೈದರಾಬಾದ ಕ್ಲೋರೋಫಾರ್ಮ್ ಕಮಿಷನ್ ಡಾ. ಲಾರಿಯವರ ನೇತೃತ್ವದಲ್ಲಿ ೧೮೮೮ರಲ್ಲಿ ನೇಮಿಸಲಾಯಿತು. ಅವರು ೧೪೧ ಪ್ರಾಣಿಗಳ ಮೇಲೆ ಕ್ಲೋರೋಫಾರ್ಮ್ ಪ್ರಯೋಗಿಸಿ ತಮ್ಮ ವರದಿಯನ್ನು ಸಲ್ಲಿಸಿದರು. ವಿಶ್ವದ ವೈದ್ಯಕೀಯ ಕ್ಷೇತ್ರದ ಘನತೆವೆತ್ತ ಪತ್ರಿಕೆ 'ಲ್ಯಾನ್ಸೆಟ್' ಈ ವರದಿಯನ್ನು ಖಂಡಿಸಿತು. ಇವರ ಕೋರಿಕೆಯಂತೆ ಹೈದರಾ-ಬಾದ ನಿಜಾಮರ ಸರ್ಕಾರವು ಒಂದು ಸಾವಿರ ಪೌಂಡುಗಳ ಗೌರವನಿಧಿಯನ್ನು ನೀಡಿ 'ಲಾನ್ಸೆಟ್'ನ ಪ್ರತಿನಿಧಿಯಾಗಿ ಡಾ. ಬ್ರಂಲ್ ರವರನ್ನು ಹೈದರಾಬಾದಿಗೆ ಕರೆಸಿಕೊಂಡು ಎರಡನೆಯ ಹೈದರಾಬಾದ ಕ್ಲೋರೋಫಾರ್ಮ್ ಕಮಿಷನ್ ನೇಮಿಸಲಾಯಿತು. ಇದು ೪೩೦ ಪ್ರಾಣಿಗಳ ಮೇಲೂ ಮತ್ತು ೫೪ ಜನರಿಗೆ ಅಫ್‌ಜಲ್‌ಗಂಜ್ ಆಸ್ಪತ್ರೆಯಲ್ಲಿ ಪ್ರಯೋಗ ಗಳನ್ನು ಮಾಡಿ ತನ್ನ ವರದಿಯನ್ನು ಸಲ್ಲಿಸಿತು. ಹೀಗೆ ಕ್ಲೋರೋಫಾರ್ಮಿನ ಪ್ರಯೋಗಗಳಲ್ಲಿ ಹಾಗೂ ಅರಿವಳಿಕೆಯಲ್ಲಿ ವಿಶ್ವಕ್ಕೆ ಭಾರತವು ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದೆ.

ಕ್ಲೋರೋಫಾರ್ಮಿನಲ್ಲಿಯ ಔಷಧೀಯ ಗುಣದ ಜೊತೆಗೆ ಅಪಾಯಕಾರಿ ವಿಷಯುದ ಅಂಶ ವಿರುವದರಿಂದ ಅದರ ಸ್ಥಾನವನ್ನು ಈಥರ್ ಆಕ್ರಮಿಸಿದೆ. ಹತ್ತಾರು ವರ್ಷಗಳ ಮೊದಲೇ ಕ್ಲೋರೋಫಾರ್ಮನ್ನು ಸಂಪೂರ್ಣವಾಗಿ ನಿಲ್ಲಿಸಿದ್ದರೂ ಇಂದು ಅನೇಕರು "ಕ್ಲೋರೋಫಾರ್ಮ್ ಕೊಡ್ತಿರಾ ಡಾಕ್ಟ್ರೆ?" ಎಂದು ಕೇಳುವುದೇ ಅದರ ಪ್ರಖ್ಯಾತಿಯ ವೈಶಿಷ್ಟ್ಯ.

ಆಮ್ಲಜನಕ (ಆಕ್ಸಿಜನ್) ಮತ್ತು ನೈಟ್ರಸ್ ಆಕ್ಸೈಡ್ ವಾಯುಗಳ ನಿಗದಿತ ಪ್ರಮಾಣದಲ್ಲಿ ಈಥರ್ ಇರುವ ಶೀಸೆಯ ಮೂಲಕ ಹಾದು ಹೋಗುವಾಗ ತಮ್ಮೊಡನೆ ಈಥರ್ ಕಣಗಳನ್ನು ಬೆರೆಸಿಕೊಂಡು ರೋಗಿಯ ಶ್ವಾಸಕೋಶ ನಂತರ ಮೆದುಳನ್ನು ತಲಪಿ ಪ್ರಜ್ಞಾಶೂನ್ಯರನ್ನಾಗಿ ಸುತ್ತವೆ. ಶಸ್ತ್ರಚಿಕಿತ್ಸೆಯಾದ ಕೂಡಲೇ ಇವು ಗಳನ್ನು ನಿಲ್ಲಿಸಲಾಗುವುದು. ಕೆಲವು ನಿಮಿಷಗಳಲ್ಲೇ ಈ ಔಷಧಗಳು ಉಸಿರಿನ ಮೂಲಕ ಹೊರಗಡೆ ಬಂದು ಪ್ರಜ್ಞೆ ಮರಳಿ ಬರುವಂತಾಗುತ್ತದೆ. ಇವುಗಳನ್ನು ಅಳತೆಗೆ ತಕ್ಕಂತೆ ಯಶಸ್ವಿ ಯಾಗಲು ನೀಡಲು ಉಪಯೋಗಿಸುವ ಆಧುನಿಕ ಸಾಧನ ಬಾಯ್ಸ್ಲ್ ಉಪಕರಣ. ಈ ಉಪಕರಣ ವಿಲ್ಲದ ಸಣ್ಣ ಆಸ್ಪತ್ರೆಗಳಲ್ಲಿ ರೋಗಿಯ ಮುಖದ ಮೇಲೆ ಬಟ್ಟೆಯ ಪದರಗಳ ಸಾಧನವಾದ ಷಿಮಲ್ ಬುಶ್‌ಮಾಸ್ಕ್ ಇರಿಸಿ ಅದರ ಮೇಲೆ ಈಥರ್ ದ್ರವವನ್ನು ತೊಟ್ಟು ತೊಟ್ಟಾಗಿ ಸುರಿದರೆ (ಓಪನ್ ಡ್ರಾಫ್ಟ್ ಮೆಥೆಡ್ ಸಂಪೂರ್ಣವಾಗಿ ಅರಿವಳಿಕೆಯಾಗುತ್ತದೆ. ಇವು ಗಳನ್ನು ಅರಿವಳಿಕೆ ತಜ್ಞರು ಬಳಸಿದಾಗ ಮಾತ್ರ ಪೂರ್ಣ ಯಶಸ್ವಿಯಾಗುತ್ತದೆಂದು ಹೇಳಬಹುದು.

ಸುಮಾರು ಅರ್ಧ ಗಂಟೆಯ ಅವಧಿಯ ಶಸ್ತ್ರಚಿಕಿತ್ಸೆಗೆ ರೋಗಿಯ ಮೂಗು ಬಾಯಿಯ ಸುತ್ತ ಮುಖವಾಡ ಇರಿಸಿ ಬಾಯ್ಸ್ಲ್ ಉಪ ಕರಣದಿಂದ ಬರುವ ಅರಿವಳಿಕೆ ಔಷಧಗಳನ್ನು ಕೊಡಲಾಗುವದು. ದೀರ್ಘ ಕಾಲದ ಕತ್ತು ಮುಖದ ಮೇಲಿನ ಮತ್ತು ಉಸಿರಾಟ ನಿಲ್ಲಿಸಬೇಕಾದ ಶಸ್ತ್ರಚಿಕಿತ್ಸೆಗಳಿಗೆ ಬಾಯ್ಸ್ಲ್ ಉಪಕರಣದಿಂದ ದುಂಡಗಿನ ರಬ್ಬರ್ ಕೊಳವೆ

ಎಂಡೋಟ್ರಕಿಯಲ್ ಟ್ಯೂಬ್ ಮೂಲಕ ಶ್ವಾಸನಾಳದೊಳಗಡೆ ಅರಿವಳಿಕೆ ಔಷಧಗಳನ್ನು ಒಯ್ಯಲಾಗುವದು.

ಹಿಂದಿನ ಕಾಲದಲ್ಲಿ ಸಮಗ್ರ ಅರಿವಳಿಕೆಯನ್ನು ನೀಡಿ ಶಸ್ತ್ರಚಿಕಿತ್ಸೆಯ ನಂತರ ಪ್ರಜ್ಞೆ ಹಿಂದಿರುಗಿ ಬರದಿರುವ ಘಟನೆಗಳು ನಡೆದಿವೆಯೆಂದು ದಾಖಲೆಗಳು ತಿಳಿಸುತ್ತವೆ.

ಸಮಗ್ರ ಅರಿವಳಿಕೆಯ ಮದ್ದುಗಳನ್ನು ಕರವಸ್ತ್ರದಲ್ಲಿ ಸುರಿದುಕೊಂಡು ವಸ್ತ್ರವನ್ನು ಮೂಸಿಸಿ ಅಥವಾ ಮಾದಕ ವಸ್ತುಗಳನ್ನು ಆಹಾರ ಪದಾರ್ಥಗಳಲ್ಲಿ ಸೇರಿಸಿ ಅದನ್ನು ದೇವರ ಪ್ರಸಾದವೆಂಬೋ ತಿಂಡಿಯೆಂದೊ ತಿನ್ನಿಸುವುದರ ಮೂಲಕ ಪ್ರಜ್ಞಾಶೂನ್ಯರನ್ನಾಗಿಸಿ ಅವರಲ್ಲಿರುವ ಒಡವೆ, ಹಣ ಮುಂತಾದವುಗಳನ್ನು ದೋಚಿಕೊಂಡು ಹೋಗುವದನ್ನು ಪತ್ರಿಕೆಗಳಲ್ಲಿ ಓದಿದ್ದೇವೆ. ಇದು ಅರಿವಳಿಕೆ ಔಷಧಗಳ ದುರುಪಯೋಗದ ಒಂದು ನಿದರ್ಶನ.

ಸ್ಥಳೀಯ ಅರಿವಳಿಕೆಯನ್ನು ನೀಡಿದಾಗ ದೇಹದ ಸ್ವಲ್ಪ ಭಾಗವು ಅರಿವಿಲ್ಲದೆ ಮರದಂತಾಗಿ ಆ ಭಾಗವನ್ನು ಕತ್ತರಿಸಿದರೂ ತಿಳಿಯದೆ ರೋಗಿಯು ನಗುನಗುತ್ತಾ ಮಾತನಾಡುತ್ತಿರುವದು ವೈದ್ಯಲೋಕದ ವಿಸ್ಮಯವೆನ್ನಬಹುದು.

೧೮೮೪ರಲ್ಲಿ ಕೊಲ್ಲರ್ ವೈದ್ಯಕೀಯ ಶಾಸ್ತ್ರಕ್ಕೆ ಅರ್ಪಿಸಿದ ಕೋಕೇನ್ ಎಂಬ ದ್ರವವನ್ನು ನ್ಯೂಯಾರ್ಕ್ ನಗರದಲ್ಲಿ ಅದೇ ವರ್ಷ ಹಾಲ್ಸ್ಟೆಡ್ ಮಾನವರ ನರಗಳ ಬಳಿ ಕೊಟ್ಟು ಅರಿವಳಿಸಿದರು. ಅಂದಿನಿಂದಲೂ ಕೊಕೇನ್ ಮತ್ತು ಸ್ಥಳೀಯ ಅರಿವಳಿಕೆ ಪ್ರಗತಿಪಥದತ್ತ ಸಾಗತೊಡಗಿತು. ೧೯೪೮ರಲ್ಲಿ ಗಾರ್ಡ್ಸ್ಲೈಲೋಕೇನ್ 'ಲಿಗ್ನೋಕೇನ್' ಉಪಯೋಗಿಸಿ ಅದು ಕೊಕೇನ್‌ಗಿಂತಲೂ ಹೆಚ್ಚು ಪ್ರಯೋಜನಕಾರಿಯೆಂದು ಸಾಬೀತುಪಡಿಸಿದನು. ಕೊಕೇನ್ ಪ್ರಖ್ಯಾತಿ ಎಷ್ಟೆಂದರೆ ಇಂದಿಗೂ ಅನೇಕರು "ಕೋಕೆನ್ ಇಂಜೆಕ್ಷನ್ ಕೊಡ್ತಿರಾ ಡಾಕ್ಟ್ರೆ?" ಎಂದು ಕೇಳುತ್ತಾರೆ.

ದೇಹದ ಯಾವುದಾದರೂ ಭಾಗದಲ್ಲಿ ಅದರಲ್ಲೂ ಗುದದ್ವಾರದಲ್ಲಿ ನೋವಾದರೆ ಸ್ಥಳೀಯ ಅರಿವಳಿಕೆಯ ಔಷಧಗಳನ್ನೊಳಗೊಂಡ ಮುಲಾಮನ್ನು ಸವರಿದರೆ ಅನೇಕ ಗಂಟೆಗಳ ಕಾಲ ನೋವಿರುವುದಿಲ್ಲ.

ಕೀವು ಗಡ್ಡೆಗಳಾದರೆ ಅರಿವಳಿಕೆ ಔಷಧಗಳನ್ನು ಸಿಂಪಡಿಸಿ ನೋವಿಲ್ಲದ ಶಸ್ತ್ರಚಿಕಿತ್ಸೆ ನಡೆಸಬಹುದು.

ಚೇಳು ಮುಂತಾದ ಕ್ರಿಮಿಕೀಟಗಳು ಕಚ್ಚಿದರೆ ಅತೀವ ಬಾಧೆಯಿರುತ್ತದೆ. ಆ ಸ್ಥಳದಲ್ಲಿ ಲಿಗ್ನೊಕೇನ್ ಚುಚ್ಚಿದರೆ ನೋವು ಮಾಯವಾಗುತ್ತದೆ.

ಕೈಕಾಲುಗಳ ಶಸ್ತ್ರಚಿಕಿತ್ಸೆಗೆ ರಕ್ತನಾಳದ ಮೂಲಕ ಸ್ಥಳೀಯ ಅರಿವಳಿಕೆ ಚುಚ್ಚಬಹುದು. ಇಂಟ್ರಾವಿನಸ್ ರೀಜನಲ್ ಅನಸ್ತೀಸಿಯಾ ಅಥವಾ ಪ್ರಮುಖ ನರಗಳ ಬಳಿ ಔಷಧ ಚುಚ್ಚಿ ನರ್ವ್ ಬ್ಲಾಕ್ ಶಸ್ತ್ರಚಿಕಿತ್ಸೆ ನಡೆಸಬಹುದು.

ಹೊಕ್ಕಳಿನ ತಳಭಾಗ ಹಾಗೂ ಕಾಲುಗಳ ಶಸ್ತ್ರಚಿಕಿತ್ಸೆಗೆ ಕ್ಷೇತ್ರ ಅರಿವಳಿಕೆ, ಸ್ಪೈನಲ್ ಅಥವಾ ಎಪಿಡ್ಯೂರಲ್ ಬೆನ್ನಿನಲ್ಲಿ ಚುಚ್ಚುಮದ್ದು ಕೊಟ್ಟು ಸುಮಾರು ಒಂದರಿಂದ ೬ ಗಂಟೆಗಳ ಕಾಲ ಆ ಭಾಗದಲ್ಲಿ ಸ್ಪರ್ಶಶಕ್ತಿಯನ್ನು ಹರಣಗೊಳಿಸಬಹುದು. ಇದೇ ರೀತಿ ನೋವಿಲ್ಲದ ಪ್ರಸವವನ್ನು ನಡೆಸಬಹುದು.

ದೀರ್ಘಕಾಲದ ನೋವುಗಳಿಗೆ ಕ್ಯಾನ್ಸರ್ ನೋವುಗಳಿಗೆ ಸ್ಥಳೀಯ ಅರಿವಳಿಕೆ ಮದ್ದುಗಳನ್ನು ಚುಚ್ಚಿದರೆ ಕೆಲವು ದಿನಗಳು ನೋವಿನಿಂದ ವಿಮುಕ್ತರಾಗಬಹುದು. ಕೀಲು ನೋವುಗಳಿಗೆ ಕೊಡುವ ಚುಚ್ಚುಮದ್ದಿನಿಂದ ತಿಂಗಳಾನುಗಟ್ಟಲೆ ನೋವಿನಿಂದ ಪಾರಾಗಬಹುದು.

ಸಮಗ್ರ ಅರಿವಳಿಕೆ ಸ್ಥಳೀಯ ಅರಿವಳಿಕೆಗಳಲ್ಲದೆ ಕೆಲವು ಖಾಯಿಲೆಗಳನ್ನು ಗುಣಪಡಿಸುವುದಕ್ಕೂ ಉಪಯೋಗಿಸಲಾಗುತ್ತಿದೆ ಎಂದು ಹೇಳಿಕೊಳ್ಳುತ್ತಿರುವ ಒಂದು ಪ್ರಯೋಗ ಅಕ್ಯುಪಂಕ್ಚರ್. ✦



# ಪ್ರಾಚೀನ ಭೂಪಟಗಳು

ವಿಜಯ

೧೯೨೩ರಲ್ಲಿ ಮುಸ್ತಫಾ ಕೆಮಾಲ ಪಾಷಾ ತುರ್ಕಸ್ತಾನದಲ್ಲಿ ಸೈನಿಕ ಕ್ರಾಂತಿ ಮಾಡಿದ. ಅಲ್ಲಿಯ ಸುಲ್ತಾನನನ್ನು ಪದಚ್ಯುತಗೊಳಿಸಿ, ಆ ದೇಶವನ್ನು ಗಣರಾಜ್ಯವೆಂದು ಘೋಷಿಸಿದ. ಸುಗ್ರೀವಾಜ್ಞೆ ಹೊರಡಿಸಿ, ಒಂದೇ ತಿಂಗಳಲ್ಲಿ ಘೋಷಾ, ರುಮಾಲು ಮುಂತಾದ ಅಲ್ಲಿಯ ಕಂದಾಚಾರಗಳನ್ನು ನಿರ್ಮೂಲ ಮಾಡಿ ಕೆಲವು ಸುಧಾರಣೆಗಳನ್ನು ಮಾಡಿದ. ಆದ್ದರಿಂದ ಅವನನ್ನು ಆಧುನಿಕ ತುರ್ಕಸ್ತಾನದ ಪಿತಾಮಹನೆಂದು ಗೌರವಿಸುತ್ತಾರೆ. ಅವನ ಆಡಳಿತದಲ್ಲಿ ನಡೆದ ಘಟನೆಯಿದು:

೧೯೨೯ರಲ್ಲಿ ತುರ್ಕಸ್ತಾನದ ಹಳೆಯ ರಾಜಧಾನಿ ಇಸ್ತಾಂಬೂಲಿನ ಟಾಪ್ ಕಾಫಿ ಅರಮನೆಯ ಅಂತಃಪುರಗಳಲ್ಲಿ ನೂರಾರು ವರ್ಷಗಳಿಂದ ಮುಸುಕಿದ್ದ ಧೂಳನ್ನು ತೆಗೆದು ಸ್ವಚ್ಛ ಮಾಡುತ್ತಿದ್ದಾಗ ಜಿಂಕೆ ಚರ್ಮದ ಭೂಪಟವೊಂದು ಸಿಕ್ಕಿತು. ಅದರಲ್ಲಿ ಸ್ಪೇನ್, ಆಫ್ರಿಕ ಮತ್ತು ದಕ್ಷಿಣ ಅಮೇರಿಕಗಳ ಚಿತ್ರಗಳಿದ್ದವು. ಅದು, ಒಮ್ಮೆ ಕಡಲ್ಗಳ್ಳನಾಗಿದ್ದು, ನಂತರ ತುರ್ಕಸ್ತಾನದ ನೌಕಾದಳದ ಆಡ್ಮಿರಲ್ ಆಗಿದ್ದ ಪಿರಿರೈಸ್ ೧೫೧೩ರಲ್ಲಿ ರಚಿಸಿದ್ದು. ಇನ್ನೂ ಹಳೆಯ ಪಟಗಳಿಂದ ಅದನ್ನು ತಯಾರಿಸಿದೆ ಎಂದೂ, ಅದು ದೊಡ್ಡ ಭೂಪಟವೊಂದರ ಭಾಗ ಮಾತ್ರ ಎಂದೂ ಪಿರಿರೈಸ್ ಟಿಪ್ಪಣಿ ಬರೆದಿದ್ದ. ಅದರಲ್ಲಿ ಕೊಲಂಬಸನ ಹೆಸರನ್ನು ಅವನು ಪ್ರಸ್ತಾಪಿಸಿದ್ದರಿಂದ ಆ ಪಟ ಜಗತ್ತಿನ ಗಮನ ಸೆಳೆಯಿತು. ಅಮೇರಿಕ, ತುರ್ಕಸ್ತಾನದ ಸರಕಾರದೊಂದಿಗೆ ಸಮಾಲೋಚಿಸಿ ಆ ಪಟದ ಉಳಿದ ಭಾಗಗಳಿಗಾಗಿ ತುರ್ಕಸ್ತಾನದ ಟಾಪ್‌ಕಾಪಿ ಅರಮನೆಯನ್ನು ಹುಡುಕಿಸಿತು. ಅದಾವುದೂ ಸಿಗದಿದ್ದುದರಿಂದ ಆ ವಿಷಯ ಅಲ್ಲಿಗೇ ತಣ್ಣಗಾಯಿತು. ಆದರೆ ಕೆಲವೇ ದಶಕಗಳ ನಂತರ ಆ ಜಿಂಕೆಯ ಚರ್ಮದ ತುಂಡು ಪ್ರಪಂಚವನ್ನು ದಿಗ್ಭ್ರಮೆಗೊಳಿಸಿ ಮತ್ತೊಮ್ಮೆ ಜಗತ್ಪ್ರಸಿದ್ಧವಾಗುವುದಿತ್ತು.

ಈಚೆಗೆ ತುರ್ಕಸ್ತಾನದ ಕ್ಯಾಪ್ಟನ್ ಒಬ್ಬ ಅಮೇರಿಕಕ್ಕೆ ಭೇಟಿಯಿತ್ತಾಗ ಇದೇ ನಕ್ಷೆಯ ಇನ್ನೊಂದು ಪ್ರತಿಯನ್ನು ವಾಷಿಂಗ್‌ಟನ್ನಿನಲ್ಲಿರುವ ಅಮೇರಿಕದ ನೌಕಾದಳದ ಹೈಡ್ರೋಗ್ರಫಿ ಕಚೇರಿಗೆ ಕಾಣಿಕೆ ನೀಡಿದ. ಅದು ಹಾಗೇ ಕ್ಯಾಪ್ಟನ್ ಆರ್ಲಿಂಗ್‌ಟನ್ ಮ್ಯಾಲರಿಯ ಮೇಜಿಗೆ ಬಂತು. ಮ್ಯಾಲರಿ ಪುರಾತತ್ವ ಶಾಸ್ತ್ರಜ್ಞ. ಆತ ಪುರಾತನ ಭೂಪಟಗಳ ಅಭ್ಯಾಸ ನಡೆಸಿದ್ದ. ಆತನಿಗೆ ದೊರೆತಿದ್ದ 'ಗ್ರೀನ್‌ಲ್ಯಾಂಡ್' ಮತ್ತು ಸ್ಕ್ಯಾಂಡಿನೇವಿಯದ ಹಳೆಯ ನಕ್ಷೆಗಳಿಂದ ೮-೧೦ನೆಯ ಶತಮಾನಗಳಲ್ಲಿದ್ದ, ಸ್ಕ್ಯಾಂಡಿನೇವಿಯದ ವೈಕಿಂಗ್ ಎಂಬ ಕಡಲ್ಗಳ್ಳರು ಕೊಲಂಬಸನಿಗಿಂತ ಮುಂಚೆಯೇ ಅಮೇರಿಕವನ್ನು ಕಂಡುಹಿಡಿದಿದ್ದರೆಂದು ಸಿದ್ಧವಾಗಿತ್ತು. ಪಿರಿರೈಸ್‌ನ ಪಟವನ್ನು ನೋಡಿದಾಗ ಮ್ಯಾಲರಿಗೆ ಆಘಾತವಾಯಿತು.

೧೪೫೩ರಲ್ಲಿ ತುರ್ಕರು ಕಾನ್‌ಸ್ಟಾಂಟಿನೋಪಲ್ಲನ್ನು ಕ್ರಿಶ್ಚಿಯನ್ನರಿಂದ ವಶಪಡಿಸಿಕೊಂಡು ಅದಕ್ಕೆ ಇಸ್ತಾಂಬುಲ್ ಎಂದು ಹೆಸರಿಟ್ಟರು. ಮತಾಂಧರಾದ ಅವರು ಅಲ್ಲಿಯ ಭಾರೀ ಗ್ರಂಥಾಲಯಕ್ಕೆ ಬೆಂಕಿಯಿಟ್ಟರು. ಶತಮಾನಗಳಿಂದ ಕಾಪಾಡಿಕೊಂಡು ಬಂದಿದ್ದ ಅಮೂಲ್ಯವಾದ ಪುರಾತನ ಗ್ರಂಥಗಳೆಲ್ಲ ಅಗ್ನಿಗೆ ಆಹುತಿಯಾದವು. ಅಂದಿನ ವರೆಗೂ ಕಾನ್‌ಸ್ಟಾಂಟಿ



**ಫಿಲಿಪ್ ಬ್ರ್ಯಾಷೆಯ ಅಂಟಾರ್ಕ್‌ಟಿಕ ಖಂಡದ ಭೂಪಟ.**

ನೋಪಲ್ ವಿದ್ವಾಂಸರ ನೆಲೆವೀಡಾಗಿತ್ತು. ಅವರ ಪತನವಾದಾಗ ಆ ವಿದ್ವಾಂಸರೆಲ್ಲ ತಲೆ ತಪ್ಪಿಸಿಕೊಂಡು ದಿಕ್ಕಾಪಾಲಾಗಿ ಓಡಿದರು. ಹೋಗುವಾಗ ಸಾಧ್ಯವಾದಷ್ಟು ಗ್ರಂಥಗಳನ್ನು ಹೊತ್ತುಕೊಂಡು ಹೋದರು. ಯೂರೋಪಿನ ತುಂಬ ಹರಡಿದ ಇವರಿಂದ ಜ್ಞಾನಪ್ರಸಾರ ವಾಯಿತು. ಅವರಲ್ಲಿ ಉಳಿದುಕೊಂಡ ಪುರಾತನ ಸಾಹಿತ್ಯದಲ್ಲಿ ತನ್ನ ನಕ್ಷೆಗೆ ಮೂಲವೆಂದು ಪಿರಿರೈಸ್ ಪ್ರಸ್ತಾಪಿಸಿದ ಪ್ರಾಚೀನ ನಕ್ಷೆಗಳೂ ಸೇರಿದ್ದಿರಬೇಕು. ಇವುಗಳಿಂದ ೧೫೧೩ರಲ್ಲಿ ಪ್ರತಿ ಮಾಡಿದ ಪಿರಿರೈಸ್‌ನ ಭೂಪಟದಲ್ಲಿ ಅಂಟಾರ್ಕ್‌ಟಿಕ ಖಂಡವಿತ್ತು!

ಇವರಲ್ಲಿ ಆಶ್ಚರ್ಯಪಡಲು ಹಲವಾರು ಕಾರಣಗಳಿವೆ. ಮೊದಲನೆಯದೆಂದರೆ ೬,೦೦೦ ವರ್ಷಗಳಿಂದ ಅಂಟಾರ್ಕ್‌ಟಿಕ ಖಂಡವು ಎರಡು ಮೈಲು ದಪ್ಪದ ಹಿಮರಾಶಿಯ ಅಡಿಯಲ್ಲಿ ಹೂತುಹೋಗಿದೆ. ೧೯ನೆಯ ಶತಮಾನದ ವರೆಗೂ (೧೮೧೮) ಅದರ ಅಸ್ತಿತ್ವವೇ ಗೊತ್ತಿದ್ದಿಲ್ಲ. ಎರಡನೆಯ ವಿಷಯವೆಂದರೆ ಆಧುನಿಕ ಕಾಲದಲ್ಲಿ ಸರ್ವೇ ಮಾಡುವ ಥಿಯೋಡೋಲೈಟ್ ಮುಂತಾದ ಉಪಕರಣಗಳು ಜನಿಸಿದ್ದೇ ೧೮ನೇ ಶತಮಾನದಲ್ಲಿ. ರೇಖಾಂಶವನ್ನಳೆಯುವ ಸಾಧನ ಹುಟ್ಟಿದ್ದು ೧೭೮೦ರಲ್ಲಿ. ನಕ್ಷೆ ಬರೆಯಲು ಇವಿಷ್ಟಿದ್ದರೆ ಸಾಲದು. ಗೋಳಾಕೃತಿಯನ್ನು ಸಮತಳದ ಮೇಲೆ ವರ್ಗಾಯಿಸುವ ಸ್ಫಿರಾಯಿಡಲ್ ಪ್ರೊಜೆಕ್ಷನ್ ತಿಳಿದಿರಬೇಕು. ಅಲ್ಲದೆ ಅಕ್ಷಾಂಶ–ರೇಖಾಂಶಗಳ ಸ್ಪಷ್ಟ ಜ್ಞಾನ ಇರಬೇಕು. ಪ್ರಪಂಚದ ಬಗ್ಗೆ ಸಾಕಷ್ಟು ಮಾಹಿತಿ ಇರಬೇಕು. ಇವೆಲ್ಲವುಗಳ ಕೊರತೆಯಿಂದಾಗಿ, ತನ್ನ ನಕ್ಷೆಗಳಿಗಾಗಿಯೇ ಪ್ರಸಿದ್ಧನಾದ ಟಾಲೆಮಿಯ ಕಾಲದಿಂದ ಹಿಡಿದು ನಿನ್ನೆ ಮೊನ್ನೆಯವರೆಗೂ ನಕ್ಷೆಗಳು ತುಂಬ ಅಸಡ್ಡಾಳಾಗಿ, ತಪ್ಪು–ತಪ್ಪಾಗಿ ಇರುತ್ತಿದ್ದವು. ಆದರೆ ಪಿರಿರೈಸ್‌ನ ಪಟದಲ್ಲಿ ತೋರಿಸಿದ ಸ್ಪೇನ್, ಆಫ್ರಿಕ ಮತ್ತು ದಕ್ಷಿಣ ಅಮೇರಿಕಗಳ ನಕ್ಷೆ ಆಧುನಿಕ ನಕ್ಷೆಯಷ್ಟೆ

ನಿಖರವಾಗಿತ್ತು. ನಾರ್ವೆ-ಸ್ವೀಡನ್-ಬ್ರಿಟನ್‌ಗಳು ೧೯೪೯ರಲ್ಲಿ ಅಂಟಾರ್ಕ್‌ಟಿಕ್ ಯಾತ್ರೆ ನಡೆಸಿದಾಗ ಅತ್ಯಂತ ಆಧುನಿಕ ಯಂತ್ರಗಳ ಸಹಾಯದಿಂದ ಎರಡು ಮೈಲು ದಪ್ಪದ ಹಿಮಾಚ್ಛಾದನೆಯ ಮೂಲಕ ಶಬ್ದ ತರಂಗಗಳನ್ನು ಪ್ರತಿಫಲಿಸಿ ಅಂಟಾರ್ಕ್‌ಟಿಕದ ಮೇಲ್ಮೈ ಸ್ವರೂಪವನ್ನು ತಿಳಿಯಲಾಯಿತು. ಪಿರಿರೈಸ್‌ನ ಅಂಟಾರ್ಕ್‌ಟಿಕ ಭೂಪಟ ಇದನ್ನೇ ಹೋಲುತ್ತಿತ್ತು. ಇದರಿಂದ ಎರಡು ವಿಷಯಗಳು ಸ್ಪಷ್ಟವಾಗುತ್ತವೆ: ಈ ಭೂಪಟದ ಮೂಲ ಆವೃತ್ತಿ ೬,೦೦೦ ವರ್ಷಗಳ ಹಿಂದೆ ರಚಿಸಲ್ಪಟ್ಟಿರಬೇಕು. ಇದು ಹಳೆಯ ಕಾಲದ ಇತರ ಭೂಪಟಗಳಂತೆ ಅವಾಸ್ತವ್ಯವಾಗಿರದೆ ಅತ್ಯಂತ ಆಧುನಿಕವಾಗಿರುವುದರಿಂದ ಆ ಮೂಲ ಕೃತಿಯನ್ನು ರಚಿಸಿದವರಿಗೆ ನಕ್ಷಾಶಾಸ್ತ್ರವಲ್ಲದೆ ಮೇಲೆ ಹೇಳಿದ ವಿಜ್ಞಾನಶಾಖೆಗಳು ಚೆನ್ನಾಗಿ ತಿಳಿದಿರಬೇಕು. ಆನೆಯ ಮುಖದಂತಿರುವ ದಕ್ಷಿಣ ಅಮೇರಿಕದ ಆಕೃತಿಯು ಸರಿಯಾಗಿದ್ದರೂ ಅದರ ಸೊಂಡಿಲು ಸ್ವಲ್ಪ ಜಗ್ಗಿದಂತಿರುವುದು ಈ ಅನುಮಾನವನ್ನು ದೃಢಪಡಿಸುತ್ತದೆ. ಸ್ಫೆರಾಯಿಡಲ್ ಪ್ರೊಜೆಕ್ಷನ್ನಿನಲ್ಲಿ ಹೀಗೆ ಉದ್ದವಾಗುತ್ತದೆ. ಈಜಿಪ್ಟಿನ ಸೈಯೀನ್ ಪಟ್ಟಣದ ಮೂಲಕ ಹೋಗುವ ಮೆರಿಡಿಯನ್ ರೇಖೆಯನ್ನು ಕೇಂದ್ರವಾಗಿ ಇಟ್ಟುಕೊಂಡು ಈ ನಕ್ಷೆಯನ್ನು ರಚಿಸಲಾಗಿತ್ತು.

ಪ್ರೊ. ಚಾರ್ಲ್ಸ್ ಹ್ಯಾಪ್‌ಗುಡ್ ಒಬ್ಬ ಚರಿತ್ರಕಾರ, ಪುರಾತತ್ವ ಶಾಸ್ತ್ರಜ್ಞ ಹಾಗೂ ನಕ್ಷೆಗಾರ. ಅವರು ಈ ವಿಷಯವನ್ನು ಕುರಿತು ಸಂಶೋಧನೆ ಮಾಡಿದಾಗ ಇನ್ನೂ ಸಾಕಷ್ಟು ಆಶ್ಚರ್ಯಕರ ವಿಷಯಗಳು ಬೆಳಕಿಗೆ ಬಂದವು. ಇವು ಪ್ರಾಚೀನ ಸಾಗರಾಧಿಪತಿಗಳ ನಕ್ಷೆಗಳು (Maps of Ancient Sea Kings) ಎನ್ನುವ ಇವರ ಗ್ರಂಥಗಳಲ್ಲಿ ಬಂದಿವೆ.

೧೭೩೭ರಲ್ಲಿ ಫಿಲಿಪ್ ಬ್ಯಾಷೆಯೆಂಬ ಫ್ರೆಂಚ್ ವಿದ್ವಾಂಸನ ನಕ್ಷೆಯಲ್ಲಿ ಅಂಟಾರ್ಕ್‌ಟಿಕ ಒಂದು ಖಂಡವಲ್ಲ. ಅದರಲ್ಲಿ ಎರಡು ದ್ವೀಪಗಳಿವೆ ಎಂದು ತೋರಿಸಿದೆ. ಇದು ೧೯೬೮ರ ಅಂತಾರಾಷ್ಟ್ರೀಯ ಭೂಭೌತಶಾಸ್ತ್ರೀಯ ವರ್ಷದ ವರೆಗೆ ನಮಗೆ ತಿಳಿದಿರಲಿಲ್ಲ. ೧೫೩೨ರ ಓರಾನ್ ಫಿನ್ನೆಯ ಭೂಪಟದಲ್ಲಿ ಅಂಟಾರ್ಕ್‌ಟಿಕದಲ್ಲಿ ನದಿಗಳನ್ನೂ ತೋರಿಸಿದೆ. ಇಬ್ನ್ ಬೆನ್ ಜರಾನ್ ಭೂಪಟವು ಭೂಮಧ್ಯ ಸಮುದ್ರದ ತೀರಗಳನ್ನು ಸರಿಯಾಗಿ ತೋರಿಸಿರುವುದಲ್ಲದೆ ಈಗ ನೀರಿನೊಳಗೆ ಇರುವ ಅನೇಕ ದ್ವೀಪಗಳನ್ನೂ ತೋರಿಸಿದೆ. ಕಳೆದ ಹಿಮಯುಗದಲ್ಲಿ ಸಮುದ್ರದ ಮಟ್ಟ ಕಡಿಮೆಯಾದಾಗ ಇವು ಮೇಲೆ ಇದ್ದವು. ೧೫೫೯ರ ಹಾಜೀ ಅಹಮದನ ಭೂಪಟದಲ್ಲಿ ಬೆರಿಂಗ್ ಜಲಸಂಧಿಯೇ ಇಲ್ಲ. ಸೈಬೀರಿಯ ಮತ್ತು ಅಲಾಸ್ಕಗಳು ಸೇರಿವೆ. ಇದೂ ಕಳೆದ ಹಿಮಯುಗದ ಕಾಲದ್ದಿರಬೇಕು. ೧೫೦೨ರ ಜೇಮ್ಸ್ ರಾಜನ ಪ್ರಪಂಚ ಭೂಪಟದಲ್ಲಿ ಸಹಾರಾ ಮರುಭೂಮಿ ಫಲವತ್ತಾಗಿರುವುದನ್ನು ಚಿತ್ರಿಸಿದೆ. ಅದರಲ್ಲಿ ಊರುಗಳು, ನದಿಗಳು, ದೊಡ್ಡ ಸರೋವರಗಳು ಇತ್ಯಾದಿಗಳನ್ನು ತೋರಿಸಲಾಗಿದೆ.

ಟಾಲೆಮಿ ದೊಡ್ಡ ವಿದ್ವಾಂಸ. ಈತ ಆಧುನಿಕ ನಕ್ಷಾಶಾಸ್ತ್ರದ ಪಿತಾಮಹ. ಅಲೆಕ್ಸಾಂಡ್ರಿಯಾದ ಖ್ಯಾತ ಗ್ರಂಥಾಲಯದ ಪಾಲಕನಾಗಿದ್ದ. ಇಂತಹ ವ್ಯಕ್ತಿಯ ಬಳಿ ನಿಖರವಾದ ಪಟಗಳು ಇದ್ದಿರಲಿಕ್ಕೇಬೇಕು. ಅವನ್ನು ಬಿಟ್ಟು ತಪ್ಪಾದ ಪಟಗಳನ್ನು ಪ್ರಕಟಿಸಿ ೧೬-೧೭ನೆ ಶತಮಾನಗಳ ಕಾಲ ಪ್ರಪಂಚವನ್ನು ದಾರಿ ತಪ್ಪಿಸಿ ಅಜ್ಞಾನದಲ್ಲಿಡಲು ಕಾರಣವೇನು ? ಅವನ ಬಳಿಯಿದ್ದ ಅನೇಕ ಪಟಗಳಲ್ಲಿ ಸರಿಯಾದವು ಯಾವವು ಎಂದು ತಿಳಿಯದೆ ಬಹುಶಃ ಅವೇ ತಪ್ಪಿರಬೇಕು ಎಂದು ಟಾಲೆಮಿ ಭಾವಿಸಿರಬೇಕು.

ಇದರಿಂದ ನಾಗರಿಕತೆಯ ವಿಕಾಸದ ಗತಿಯು ಪಾಶ್ಚಾತ್ಯರು ತಿಳಿಸುವಂತೆ ಸರಳ ರೇಖೆಯಾಗಿರದೆ ಅದೊಂದು ಚಕ್ರವೆಂದು ತಿಳಿಯಬಹುದು. ಭಾರತೀಯ ಸಂಸ್ಕೃತಿ ಹೇಳುವುದು ಇದನ್ನೇ. ನಾಗರಿಕತೆ ಕ್ರಿಸ್ತ ಪೂರ್ವ ೬.೦೦೦ ವರ್ಷಗಳ ಹಿಂದೆ ಹುಟ್ಟಿತು ಎನ್ನುವ ವಾದಕ್ಕೆ ಈ ಪ್ರಾಚೀನದ ಭೂಪಟಗಳು ಪರಿಹಾಸ್ಯ ಮಾಡಿ ನಗುತ್ತಿರುವಂತಿದೆ.

# ಕೃತಿಗೆ ಕನ್ನಡಿ

ಒಂದು ಕೃತಿಗೆ ಮುನ್ನುಡಿ ಅವಶ್ಯಕವೇ ಇಲ್ಲವೇ – ಅವಶ್ಯಕವಾದಲ್ಲಿ ಆ ಮುನ್ನುಡಿ ಹೇಗಿರಬೇಕು ಎಂಬ ಪ್ರಶ್ನೆ ಸಹಜವಾಗಿಯೇ ಮೊದಲು ಏಳುತ್ತದೆ. "ಕೃತಿಯ ಬಗ್ಗೆ ಉದ್ದವಾದ ವಿವರಣೆಯನ್ನೀಯುವ ಮುನ್ನುಡಿ ಅನಗತ್ಯ. ಕೃತಿ ತನ್ನ ಯೋಗ್ಯತೆಯ ಮೇಲೆಯೇ ನಿಲ್ಲಬೇಕು" ಎನ್ನುವುದು ಒಂದು ಅಭಿಪ್ರಾಯ. ಕೆಲವು ಕೃತಿಗಳ ಮುನ್ನುಡಿಗಳನ್ನೋದಿದಾಗ ಈ ಮಾತು ಸರಿ ಎನಿಸಿದರೂ ಮತ್ತೆ ಕೆಲವು ಉತ್ಕೃಷ್ಟ ಮುನ್ನುಡಿಗಳನ್ನೋದಿದಾಗ ಈ ಅಭಿಪ್ರಾಯವನ್ನು ಬದಲಾಯಿಸಬೇಕಾಗುತ್ತದೆ. ಜಾರ್ಜ್ ಬರ್ನಾರ್ಡ್ ಷಾ ತಮ್ಮ ಕೃತಿಗಳಿಗೆ ಬರೆಯುತ್ತಿದ್ದ ಮುನ್ನುಡಿಗಳ ಸಂಗ್ರಹ The Prefaces of Bernard Shaw ಒಂದು ಪ್ರಸಿದ್ಧ ಕೃತಿಯಾಗಿದೆ (ಮುನ್ನುಡಿಗಳ ಸಂಗ್ರಹ ಕನ್ನಡದಲ್ಲಿ ಅಪರೂಪ. ಆದರೂ ಮಾಸ್ತಿಯವರ 'ಪೂಜನ', ಪರಮೇಶ್ವರ ಭಟ್ಟರ 'ಮುನ್ನುಡಿಗಳು', ಸಿಪಿಕೆಯವರ 'ಮುನ್ನುಡಿ ಮಾಲೆ' ಹೀಗೆ ಕೆಲವು ಸಂಗ್ರಹಗಳು ಇವೆ.) ಬರ್ನಾರ್ಡ್ ಷಾರವರು ತಮ್ಮ ಮುನ್ನುಡಿಗಳಲ್ಲಿ ಸಾಮಾಜಿಕ, ರಾಜಕೀಯ, ವೈಜ್ಞಾನಿಕ ತತ್ವಗಳನ್ನು ಚರ್ಚಿಸಿದ್ದಾರೆ. ಪ್ರತಿ ನಾಟಕಕ್ಕೂ ಉದ್ದವಾದ ಮುನ್ನುಡಿಯನ್ನು ಬರೆಯುವುದು ಷಾ ಅವರ ಪದ್ಧತಿ. ಒಂದೊಂದು ನಾಟಕವೂ ಒಂದೊಂದು ತತ್ವದ ಪ್ರತಿಪಾದನೆ ಮಾಡುವುದು ಅಥವಾ ಸಮಾಜದ ಒಂದು ಸಮಸ್ಯೆಯನ್ನು ಪರಿಹರಿಸುವ ಮಾರ್ಗವನ್ನು ತೋರುವುದು. ಹಲವು ವೇಳೆ ಮುನ್ನುಡಿ ಇಲ್ಲದೆ ನಾಟಕದ ಉದ್ದೇಶ ಸರಿಯಾಗಿ ಅರ್ಥವಾಗಿಲ್ಲ ಎಂಬುದು ಅವರ ಮೇಲಿರುವ ಆಕ್ಷೇಪಣೆ. ವಿಮರ್ಶಕರು ನಾಟಕವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಹೋದುದರಿಂದ ತಮ್ಮ ಒಂದು ನಾಟಕಕ್ಕೆ ಆಮೇಲೆ ಮುನ್ನುಡಿಯನ್ನು ಬರೆಯಬೇಕಾಯಿತೆಂದು ಷಾ ಹೇಳಿದ್ದಾರೆ.

ಸಾಮಾನ್ಯವಾಗಿ ಮುನ್ನುಡಿಯಲ್ಲಿ ಕೃತಿರಚನೆಗೆ ಪ್ರೇರೇಪಣೆ, ಸಂದರ್ಭ, ಉಪಯುಕ್ತತೆ ಇವುಗಳನ್ನು ಕುರಿತ ವಿವರಗಳಿರುವುದುಂಟು. ಚಾರಿತ್ರಿಕ ಕೃತಿಗಳಾದರೆ ಕಾಲ, ದೇಶಗಳ ವರ್ಣನೆಗಳನ್ನೊಳಗೊಂಡಿರಬಹುದು. ವಿಸ್ತಾರವಾದ ಮುನ್ನುಡಿಗಳನ್ನು ಬರೆಯುವುದು ಕೆಲವರ ಅಭ್ಯಾಸವಾದರೆ ಮತ್ತೆ ಕೆಲವರು ಸುಮ್ಮನೆ ಮುದ್ರಿಸಿದವರಿಗೆ, ಮುಖಪುಟ ಚಿತ್ರಿಸಿದವರಿಗೆ, ಪ್ರಕಟಿಸಿದವರಿಗೆ ವಂದನೆಗಳನ್ನು ಹೇಳಿ ಮುಗಿಸುತ್ತಾರೆ. ಸಾಮಾನ್ಯವಾಗಿ ಪ್ರಸ್ತಾವನೆಯನ್ನೋದದೆ ಗ್ರಂಥವನ್ನೋದಲು ಪ್ರಾರಂಭಿಸುವ ವಾಚಕರ ಸ್ವಭಾವವನ್ನರಿತೇ ಇರಬೇಕು, ಶ್ರೀ ಡಿ.ವಿ.ಜಿ. ಅವರು ತಮ್ಮ 'ಜೀವನ ಧರ್ಮಯೋಗ'ದ ಮುನ್ನುಡಿಯನ್ನು ಹೀಗೆ ಪ್ರಾರಂಭಿಸುತ್ತಾರೆ: "ವಾಚಕರು ಕೃಪೆ ಮಾಡಿ ಮೊದಲು ಈ ಮುನ್ನುಡಿಯನ್ನು ಲಾಲಿಸಿದ್ದಾದರೆ ಅವರಿಂದ ನನಗೆ ಅವಶ್ಯವಿರುವ ಸಹಾನುಭೂತಿ ತಕ್ಕಷ್ಟು ಧಾರಾಳವಾಗಿ ದೊರೆತೀತೆಂದು ನಂಬಿಕೊಂಡಿದ್ದೇನೆ."

ಮುನ್ನುಡಿಗಳಲ್ಲಿ ಲೇಖಕರೇ ಬರೆಯುವ 'ಅರಿಕೆ' 'ನಿವೇದನೆ' ಇತ್ಯಾದಿಗಳು ಒಂದು ಗುಂಪಾದರೆ, ಹಿರಿಯರಿಂದ, ಆತ್ಮೀಯರಿಂದ ಬರೆಸುವ 'ಆಶೀರ್ವಾದ', 'ನಾಲ್ಕು ಮಾತು' ಇವುಗಳದ್ದು ಒಂದು. ಬೇರೆಯವರಿಂದ ಬರೆ

# ಈ ಮುನ್ನುಡಿ

ಸರೋಜಾ ನಾರಾಯಣರಾವ್

ಸುವ ಮುನ್ನುಡಿಗಳು ಕೃತಿಯನ್ನು ಎತ್ತಿ ಹಿಡಿಯುವಂತಿರಬೇಕು ಎನ್ನುವುದು ಬಹುಶಃ ಬರಹಗಾರರೆಲ್ಲರ ಉದ್ದೇಶ. "ನನ್ನ ಪುಸ್ತಕಕ್ಕೆ ಒಂದು ಮುನ್ನುಡಿಯನ್ನು ಬರೆದು ಕೊಡಿ" ಎಂದು ಕೇಳಿದರೆ ಯಾರಿಗೂ 'ಇಲ್ಲ' ಎಂದು ಹೇಳುವುದು ಕಷ್ಟ. ಕೃತಿಯನ್ನು ತೆಗೆದು ಓದಿ ನೋಡಿದಾಗ, 'ಇದಕ್ಕೆ ಮುನ್ನುಡಿಯನ್ನು ಬರೆದು ಕೊಡಲು ಯಾಕಾದರೂ ಒಪ್ಪಿಕೊಂಡೆನೋ' ಎನ್ನಿಸಬಹುದು. ಕೃತಿ ಹೇಗೇ ಇದ್ದರೂ ಲೇಖಕರು ಹೊಗಳಿಕೆಯ ಮಾತನ್ನೇ ಬಯಸುತ್ತಾರೆ ಎಂದು ಎಲ್ಲರಿಗೂ ಗೊತ್ತು. ಕೆಲವರು ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ನಾಲ್ಕು ಮಾತನ್ನು ಬರೆದುಕೊಟ್ಟು ಕೈ ತೊಳೆದುಕೊಳ್ಳುತ್ತಾರೆ. ಕೆಲವರು ಸಂಕೋಚಕ್ಕೋ ಅಥವಾ ಪ್ರೋತ್ಸಾಹ ನೀಡುವ ಸಲುವಾಗಿಯೋ ಕೃತಿ ಹೇಗೇ ಇದ್ದರೂ ಹೊಗಳಿಕೆಯ ಮಾತುಗಳನ್ನೇ ಬರೆದುಬಿಡುತ್ತಾರೆ. ಮತ್ತೆ ಕೆಲವರು ಕೃತಿಗೆ ಸಂಬಂಧವೇ ಇಲ್ಲದಂತಹ, ತಮ್ಮದೇ ಒಂದು ಪ್ರಬಂಧವನ್ನು ಬರೆದುಕೊಡುತ್ತಾರೆ.

ಮುನ್ನುಡಿಯನ್ನು ಕುರಿತ ಈ ಬರಹಕ್ಕೆ ಇಷ್ಟು ಮುನ್ನುಡಿಯಾಯಿತು. ಈಗ ಕೆಲವು 'ಮುನ್ನುಡಿ'ಗಳನ್ನೇ ಪರಿಶೀಲಿಸೋಣ.

ಕೃತಿ– ತ. ಸು. ಶಾಮರಾಯರ ವಚನ ರಾಮಾಯಣ. ಗ್ರಂಥಕರ್ತರು ಇವರ ಮುನ್ನುಡಿಯನ್ನು 'ಗ್ರಂಥಕರ್ತನ ಬಿನ್ನಹ'ವೆಂದು ಕರೆದಿದ್ದಾರೆ. "ಶ್ರೀ ರಾಮಾಯಣದ ಪಾರಾಯಣ ನನ್ನ ವಂಶದಲ್ಲಿ ಪರಂಪರೆಯಾಗಿ ಹರಿದು ಬಂದಿರುವ ಒಂದು ಸತ್ಸಂಪ್ರದಾಯ. ನನ್ನ ಅಜ್ಜ ವೆಂಕಣ್ಣಯ್ಯನವರು ಬಹು ದೊಡ್ಡ ರಾಮಭಕ್ತರೆಂದು ಪ್ರಸಿದ್ಧರಾಗಿದ್ದವರು. ತಾಲ್ಲೋಕು ಕಛೇರಿಯಲ್ಲಿ ಗುಮಾಸ್ತಗಿರಿ ಮಾಡುತ್ತಿದ್ದ ಅವರನ್ನು ಒಮ್ಮೆ ಒಬ್ಬ ಪರಂಗಿ ಸಾಹೇಬ ದಪ್ತರದ ಬಟ್ಟೆ ಮಾಸಿತ್ತೆಂದು ಹೇಳಿ ಬರ್ತರಫ್ ಮಾಡಿದನಂತೆ. ಅವರ ಹಿತೈಷಿಗಳು ಸಾಹೇಬರನ್ನು ಕಂಡು ಕ್ಷಮೆ ಕೇಳುವಂತೆ ವೆಂಕಣ್ಣಯ್ಯನವರಿಗೆ ವಿವೇಕ ಹೇಳಿದರಂತೆ. ಆದರೆ ವೆಂಕಣ್ಣಯ್ಯ ಅದಕ್ಕೆ ಕಿವಿಗೊಡದೆ ನೇರವಾಗಿ ಮನೆಗೆ ಹೋಗಿ ತಮ್ಮ ಪಾರಾಯಣದ ಗಂಟನ್ನು ಕಂಕುಳಲ್ಲಿಟ್ಟುಕೊಂಡು, ಹತ್ತಿರದಲ್ಲಿದ್ದ ಒಂದು ಬೆಟ್ಟದ ಮೇಲಕ್ಕೆ ಹೊರಟುಹೋದರು. ಅಲ್ಲೊಂದು ಹನುಮಂತರಾಯನ ಗುಡಿ. ಇದಿರಿನಲ್ಲೇ ಒಂದು ಪುಷ್ಕರಿಣಿ. ವೆಂಕಣ್ಣಯ್ಯ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ಒದ್ದೆ ಬಟ್ಟೆಯಲ್ಲಿ ರಾಮಾಯಣ ಪಾರಾಯಣಕ್ಕೆ ಕುಳಿತರು. ಅಲ್ಲಿದ್ದ ನೂರಾರು ಕೋತಿಗಳೇ ಅವರ ಶ್ರೋತೃಗಳು. ಅವು ಪಾರಾಯಣ ಪ್ರಾರಂಭವಾಗುತ್ತಲೇ ಒಂದೊಂದಾಗಿ ಬಂದು ಅಲ್ಲಿ ನೆರೆದು ಪಾರಾಯಣ ಮುಗಿಯುತ್ತಲೇ ಹೊರಟು ಹೋಗುತ್ತಿದ್ದುವು. ಅವು ಹೊತ್ತು ತಂದು ಅಲ್ಲಿ ಚೆಲ್ಲಿ ಹೋಗುತ್ತಿದ್ದ ಅಡವಿಯ ಹಣ್ಣು ಹಂಪಲುಗಳೇ ವೆಂಕಣ್ಣಯ್ಯನವರ ಆಹಾರ. ಹೀಗೆ ಹತ್ತು ದಿನಗಳು ನಡೆದು ಅಖಂಡ ರಾಮಾಯಣ ಪಾರಾಯಣ ಮುಗಿಯಿತು. ಹನ್ನೊಂದನೆಯ ದಿನ ಬೆಳಿಗ್ಗೆ ವೆಂಕಣ್ಣಯ್ಯ ಎಂದಿನಂತೆ ಕೊಳದಲ್ಲಿ ಮಿಂದು ಹನುಮಂತರಾಯನ ಪೂಜೆಯನ್ನು ಮುಗಿಸಿ ಪಾರಾಯಣದ ಕಟ್ಟನ್ನು ಕೈಗೆ ತೆಗೆದುಕೊಳ್ಳುತ್ತಿದ್ದಂತೆಯೇ ತಾಲ್ಲೋಕು ಕಛೇರಿಯ

ಬಿಲ್ಲೆ ಜವಾನ ಅಲ್ಲಿ ಕಾಣಿಸಿಕೊಂಡ. ಅವನು ವೆಂಕಣ್ಣಯ್ಯನವರಿಗೆ ಅಡ್ಡ ಬಿದ್ದು ಕಾಗದ ವೊಂದನ್ನು ಅವರ ಮುಂದೆ ಇಟ್ಟ. ಅವರು ಅದನ್ನು ಬಿಚ್ಚಿ ಓದಿದರು. ಪರಂಗಿ ಅಧಿಕಾರಿ ತನ್ನ ಅಚಾತುರ್ಯಕ್ಕಾಗಿ ಕ್ಷಮೆಯನ್ನು ಯಾಚಿಸಿ ಅವರಿಗೆ ಬಡತಿ ಕೊಟ್ಟು ಶೇಕದಾರರಾಗಿ 'ಮುಕರೂರು' ಮಾಡಿದ್ದ. ವೆಂಕಣಯ್ಯನವರ ಕಣ್ಣು ಹನಿಯಾಯಿತು. 'ಶ್ರೀರಾಮಾ, ನೀನು ದಯಾಮಯ' ಎಂದು ಹೇಳಿಕೊಂಡು. 'ನಾನು ಇಲ್ಲಿ ಇರುವುದು ನಿನಗೆ ಹೇಗೆ ಗೊತ್ತಾಯಿತಪ್ಪಾ' ಎಂದು ಜವಾನನನ್ನು ಕೇಳಿದರು. ಕುರಿ ಕಾಯುವವನು ಸುದ್ದಿ ಕೊಟ್ಟುದಾಗಿ ಅವನು ತಿಳಿಸಿದ. ವೆಂಕಣ್ಣಯ್ಯನವರ ಬದ್ಧಿ, ಭಾವುಕರಾದ ಮುಗ್ಧ ಜನರ ಕಣ್ಣಿನಲ್ಲಿ ಭಗವಂತನ ಅನುಗ್ರಹ ವಾಗಿ ಕಾಣಿಸಿತ್ತು. ಅವರ ಆಯುಸ್ಸು ಮುಗಿದು ಬಂದಾಗ ಅವರ ಹಿರಿಯ ಮಗ ಹತ್ತು ವರ್ಷದ ಹುಡುಗನಿಗೆ ದೇವರ ಮುಂದಿರುವ ಗಂಟನ್ನು ತರ ಹೇಳಿದರು. ಸುತ್ತಲಿದ್ದ ಜನ 'ಶೇಕದಾರಿ ಮಾಡಿದವರು ಕಸ್ತೂರಿ ಕಟ್ಟಿದ ಬಟ್ಟೆಯಂತೆ ಅಲ್ಪ ಸ್ವಲ್ಪ ಉಳಿಸಿರಬೇಕು' ಎಂದುಕೊಂಡರು. ತಂದೆ ಗಂಟನ್ನು ಬಿಚ್ಚಿಸಿ ರಾಮಾಯಣವನ್ನು ಕೈಗೆ ತೆಗೆದುಕೊಂಡು, 'ಸುಬ್ಬಣ್ಣಾ ಇದೇ ನನ್ನ ಆಸ್ತಿಯೆಲ್ಲಾ. ನಮ್ಮಪ್ಪ ನನಗೆ ಕೊಟ್ಟುದು ಇದನ್ನೇ. ನಾನು ನಿನಗೆ ಕೊಟ್ಟು ಹೋಗುತ್ತಿದ್ದೇನೆ, ಇದನ್ನು ಉಳಿಸಿಕೋ. ನೀನೂ ಉಳಿಯುತ್ತಿ,' ಎಂದು ಹೇಳಿ ಕಣ್ಮುಚ್ಚಿದರು. ಸುಬ್ಬಣ್ಣನವರು ತಂದೆಯ ಮಾತಿನಂತೆ ನಡೆದು ಸಂತೃಪ್ತ ಜೀವನ ನಡೆಸಿದರು. ಬಡತನದ ಆ ಕುಟುಂಬದಲ್ಲಿ ಮಧ್ಯಾಹ್ನಕ್ಕೆ ಗತಿಯೇನು ಎಂಬ ಪ್ರಶ್ನೆ ಗೃಹಿಣಿಯ ತುಟಿಯಲ್ಲಿ ಕಾಣಿಸಿಕೊಳ್ಳುತ್ತಿದ್ದಂತೆಯೇ ಸುಬ್ಬಣ್ಣನವರು 'ರಾಮ ಇದ್ದಾನೆ' ಎನ್ನುತ್ತಿದ್ದರು. ಆ ಮಾತು ಸತ್ಯವಾಗುತ್ತಿತ್ತು. ಇಷ್ಟಾದರೂ ಕಾರ್ಪಣ್ಯಕ್ಕೂ ಸುಬ್ಬಣ್ಣನಿಗೂ ಬಹಳ ದೂರ. ಆತ ಛತ್ರದ ಸುಬ್ಬಣ್ಣ ಎಂದೇ ಪ್ರಸಿದ್ಧರಾಗಿದ್ದರು. ಸುಬ್ಬಣ್ಣನ ಮಗ ವೆಂಕಣ್ಣಯ್ಯ. ಅವರೂ ಅವರ ತಮ್ಮ ರಾಮಸ್ವಾಮಿಯೂ ರಾಮಾಯಣ ಪಾರಾಯಣವನ್ನು ದಿನಚರಿಯಾಗಿ ಇಟ್ಟುಕೊಂಡು ಬಂದರು. ಈಗ ಸುಮಾರು ಇಪ್ಪತ್ತೈದು ವರ್ಷಗಳ ಕೆಳಗೆ ವೆಂಕಣ್ಣಯ್ಯನವರು ದಿವಂಗತರಾದಾಗ ಅವರ ಆಸ್ತಿಯಲ್ಲಿ ರಾಮಾಯಣ ನನ್ನ ಭಾಗಕ್ಕೆ ಸಿಕ್ಕಿತು..."

ಕೃತಿ ರಚನೆಗೆ ಪ್ರೇರಣೆ. ಹಿನ್ನೆಲೆಗಳನ್ನು ವಿವರಿಸುತ್ತ ಲೇಖಕರು ಒಂದು ಸುಂದರವಾದ ಕತೆಯನ್ನೇ ಹೇಳಿದ್ದಾರೆ.

ಕೆಲವು ಗ್ರಂಥಗಳಿಗೆ ಮೂರು ನಾಲ್ಕು ಮುನ್ನುಡಿಗಳಿರುವುದುಂಟು, ಬರಹಗಾರರ ಅರಿಕೆ, ಪ್ರಕಾಶಕರ ಮಾತು, ಹಿರಿಯರು ಬರೆಯುವ 'ಮುನ್ನುಡಿ'ಯೇ ಆದ ಮುನ್ನುಡಿ, ಇತ್ಯಾದಿ. ಕೃತಿ ಸತ್ವಪೂರ್ಣವಾದುದಲ್ಲದೆ ಹೋದರೆ ಎಂತಹ ಅಮೋಘವಾದ ಮುನ್ನುಡಿಯೂ ಅದರ ಯೋಗ್ಯತೆಯನ್ನು ಹೆಚ್ಚಿಸಲಾರದು. ಕೃತಿ ಉತ್ತಮವಾಗಿದ್ದು ಮುನ್ನುಡಿಯೂ ಘನವಾದುದಾಗಿದ್ದರೆ ಅಂದವಾದ ಮನೆಯ ಮುಂದೆ ಸುಂದರವಾದ ತೋಟವಿದ್ದಂತೆ. ಎ. ಆರ್. ಕೃಷ್ಣಶಾಸ್ತ್ರಿಗಳ ಕೃತಿ 'ಬಂಕಿಮಚಂದ್ರ'. ಇದಕ್ಕೆ ಮೂರು ಮುನ್ನುಡಿಗಳಿವೆ. ಮೊದಲನೆಯದು ಕುವೆಂಪು ಅವರು ಬರೆದ 'ಮುನ್ನುಡಿ.' ಒಟ್ಟು ಸಾಹಿತ್ಯ ವಿಮರ್ಶೆಯ ಅಧ್ಯಯನವನ್ನು ಕುರಿತ ವಿದ್ವತ್ಪೂರ್ಣ ವ್ಯಾಖ್ಯಾನ. ಕೃಷ್ಣಶಾಸ್ತ್ರಿಗಳ ಪರಿಚಯ ಮತ್ತು ಗ್ರಂಥವು ಒಳಗೊಂಡ ವಸ್ತುವನ್ನು ಕುರಿತ ಮಾತುಗಳಿವೆ. ಇದು ಬಹು ಅಚ್ಚುಕಟ್ಟಾದ 'ಮುನ್ನುಡಿ ಎಂದರೆ ಹೀಗಿರಬೇಕು' ಅನಿಸುವಂತಹ ಒಂದು ಆದರ್ಶ ಮುನ್ನುಡಿಯಾಗಿದೆ. ಎರಡನೆಯದು ಗ್ರಂಥ ಕರ್ತನ ಬಿನ್ನಹ. ಇಲ್ಲಿ ಲೇಖಕರು ಬಂಕಿಮನ ಸಾಹಿತ್ಯಕ್ಕೆ ತಮ್ಮ ಪ್ರವೇಶವಾದುದು ಹೇಗೆ ಎಂದು ತಿಳಿಸುತ್ತಾರೆ. ಅವರು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಎರಡು ರೂಪಾಯಿ (ಅದೂ ಎರಡೂ ಗಟ್ಟಿ ಬೆಳ್ಳಿ ರೂಪಾಯಿಗಳು) ವಿದ್ಯಾರ್ಥಿ ವೇತನ ದೊರೆಯಿತಂತೆ. ಅದನ್ನು ಹೇಗೆ ಖರ್ಚು ಮಾಡಬೇಕೆಂದು ತುಂಬಾ ಯೋಚಿಸಿ ಕೊನೆಗೆ ಆಗಿನ ಕಾಲಕ್ಕೆ ಒಂದು ದೊಡ್ಡ ಪಾಪ ಎನಿಸಿಕೊಂಡಿದ್ದ ಗ್ರಾಜು

ಯೇಟ್ಸ್ ಟ್ರೇಡಿಂಗ್ ಅಸೋಶಿಯೇಶನ್‌ಗೆ ಹೋಗಿ ಗಾತ್ರದಲ್ಲೂ ಆಕಾರದಲ್ಲೂ ದೊಡ್ಡದಾಗಿದ್ದ 'ಆನಂದ ಮಠ' ಪುಸ್ತಕವನ್ನು ಕೊಂಡರಂತೆ. ಎ. ಆರ್. ಕೃ. ಅವರಿಗೆ ಬಂಕಿಮನ ಸಾಹಿತ್ಯಕ್ಕೆ ಪ್ರವೇಶವಾದುದು ಹೀಗೆ. ಆದರೆ ಆಗ ಅದು ಬಂಕಿಮನ ಗ್ರಂಥವೆಂದು ಸಹ ಅವರಿಗೆ ಗೊತ್ತಿರಲಿಲ್ಲವಂತೆ. ಅವರ ಮಟ್ಟಿಗೆ ಅದು ವೆಂಕಟಾಚಾರ್ಯರ ನಾವೆಲ್ಲು! ಗ್ರಂಥ ರಚನೆಗೆ ಪ್ರೇರಣೆ, ವಿಷಯ ಸಂಗ್ರಹದ ಕೆಲವು ಹಂತಗಳು ಇವುಗಳನ್ನು ಕುರಿತು, ಸಂಗ್ರಹವಾದ ಆದರೆ ಅಗತ್ಯವಾದ ಮಾಹಿತಿಗಳನ್ನು ತಿಳಿಸಿದ್ದಾರೆ. ಇನ್ನು ಮೂರನೆಯದು 'ಕವಿ ಕಾಣಿಕೆ'. ಬಂಕಿಮಚಂದ್ರನು ಸ್ವರ್ಗಸ್ಥನಾದ ಮೇಲೆ ರವೀಂದ್ರನಾಥ ಠಾಕೂರರು ಬರೆದ ಬಂಕಿಮಚಂದ್ರ ಲೇಖನದಿಂದ ಉದ್ಧರಿಸಲಾಗಿದೆ. ಇದರ ಕೆಲವು ಭಾಗವನ್ನು ಕುವೆಂಪು ಅವರು ತಮ್ಮ ಮುನ್ನುಡಿಯಲ್ಲೂ ಅಳವಡಿಸಿಕೊಂಡಿದ್ದಾರೆ. 'ಬಂಕಿಮನಿಗಿಂತ ಮುಂಚೆ ಬಂಗಾಳಿ ಭಾಷೆಯನ್ನು ಯಾರೂ ಸಡ್ಡೆ ಮಾಡುತ್ತಿರಲಿಲ್ಲ. ಸಂಸ್ಕೃತ ಪಂಡಿತರಿಗೆ ಅದು ಗ್ರಾಮ್ಯ. ಇಂಗ್ಲೀಷ್ ತಿಳಿದವರಿಗೆ ಬರ್ಬರ. ಬಂಗಾಳಿ ಭಾಷೆಯು ಹೆಸರುವಾಸಿಯಾಗಬಹುದೆಂಬುದು ಅವರು ಕನಸಿನಲ್ಲಿಯೂ ಕಾಣಲಾರದ ವಿಷಯವಾಗಿತ್ತು. ಆದ್ದರಿಂದ ಅವರು ಅನುಗ್ರಹ ಬುದ್ಧಿಯಿಂದ ಹೆಂಗಸರು ಮಕ್ಕಳ ಉಪಯೋಗಕ್ಕಾಗಿ ಬಂಗಾಳಿಯಲ್ಲಿ ಬರೆಯುತ್ತಿದ್ದರು. ಹೀಗೆ ತಿರಸ್ಕಾರಕ್ಕೆ ಪಾತ್ರವಾಗಿದ್ದ ಬಂಗಾಳಿಯು ಅತ್ಯಂತ ದೀನ ಮಲಿನ ಭಾವದಲ್ಲಿ ಕಾಲ ಹಾಕುತ್ತಿತ್ತು. ಅದರಲ್ಲಿ ಅಡಗಿದ್ದ ಅಷ್ಟೊಂದು ಸೌಂದರ್ಯ, ಮಹಿಮೆ ಎಲ್ಲಾ ಅದರ ಬಡತನವನ್ನು ಭೇದಿಸಿಕೊಂಡು ಹೊರಕ್ಕೆ ಬಂದು ಕಾಣಿಸಿಕೊಳ್ಳಲಾರದೆ ಇದ್ದವು. ಮಾತೃಭಾಷೆಗೆ ಇಷ್ಟೊಂದು ತಿರಸ್ಕಾರವಿರುವ ಸ್ಥಳದಲ್ಲಿ ಮಾನವ ಜೀವನದ ಶುಷ್ಕತೆ ದೀನತೆಗಳನ್ನು ಯಾರೂ ಹೋಗಲಾಡಿಸರು." ಇಂಥ ಕಾಲದಲ್ಲಿ ಅಂದಿನ ವಿದ್ಯಾವಂತರೊಳಗೆ ಶ್ರೇಷ್ಠನೆನಿಸಿದ ಬಂಕಿಮನು ತನ್ನ ಎಲ್ಲಾ ವಿದ್ಯೆ, ಅನುರಾಗ, ಪ್ರತಿಭೆಗಳನ್ನೂ ಆ ಸಂಕುಚಿತ ವಂಗಭಾಷೆಯ ಚರಣದಲ್ಲಿ ಅರ್ಪಿಸಿದನು. ಆಗ ಅವನಿಗಿಂತ ಅಲ್ಪ ವಿದ್ಯಾವಂತರಾದ ಪ್ರತಿಭಾಹೀನರಾದ ಬಂಗಾಳಿಗಳು





ಇಂಗ್ಲೀಷಿನಲ್ಲಿ ಎರಡು ಪಂಕ್ತಿ ಬರೆಯಬಲ್ಲವರಾದರೆ ಅಭಿಮಾನದಲ್ಲಿ ಉಬ್ಬಿ ಹೋಗುತ್ತಿದ್ದರು." ರವೀಂದ್ರರ ಲೇಖನವು ಬಂಕಿಮಚಂದ್ರ ಹಾಗೂ ವಂಗ ಸಾಹಿತ್ಯದ ಬಗ್ಗೆ ತಿಳಿವಳಿಕೆಯನ್ನು ನೀಡುತ್ತದೆ. ಇವರ ಲೇಖದಿಂದಲೇ ಕೆಲವು ಮಾತುಗಳನ್ನು ಉದ್ಧರಿಸಿರುವ ಕುವೆಂಪು ಅವರು, ಅದೇ ಮಾತುಗಳು ಕನ್ನಡ ಭಾಷೆ ಸಾಹಿತ್ಯಗಳಿಗೂ ಕೃಷ್ಣಶಾಸ್ತ್ರಿಗಳಿಗೂ ಒಪ್ಪುವವೆಂದು ತಿಳಿಸಿರುವುದು ಸತ್ಯವೇ ಆಗಿದೆ, ಒಟ್ಟಿನಲ್ಲಿ ಮೂರು ಮುನ್ನುಡಿಗಳೂ ಗ್ರಂಥಕ್ಕೆ ಅವಶ್ಯಕವೇ ಆಗಿದ್ದು ಗ್ರಂಥದ ಗಾಂಭೀರ್ಯಕ್ಕೆ ಸರಿತೂಗುವಂತವುದಾಗಿವೆ.

'ಕಲೆಯೋ ಕಾಯಕ' ಗುಬ್ಬಿ ವೀರಣ್ಣನವರ ಆತ್ಮಕಥೆ. ಆರು-ಏಳು ಪುಟಗಳಷ್ಟಿರುವ ಲೇಖಕರ 'ನಾಲ್ಕು ನುಡಿ'ಗಳಲ್ಲಿ ಈ ಕೃತಿಯ ಒಂದು ವಿಹಂಗಮ ನೋಟವೇ ಇದೆ. "ಗೇಟ್ ಕೀಪರ್, ಬುಕಿಂಗ್ ಕ್ಲಾರ್ಕ ಮತ್ತು ವ್ಯವಸ್ಥಾಪಕರ ಕೆಲಸಗಳನ್ನೂ ಸಂದರ್ಭಾನುಸಾರವಾಗಿ ಮಾಡಿದೆನಲ್ಲದೆ ವಾದ್ಯದವರ ಗೈರು ಹಾಜರಿಯಲ್ಲಿ ತಬಲಾ, ಹಾರ್ಮೋನಿಯಂ, ಪಿಟೀಲು ವಾದ್ಯಗಳನ್ನೂ ನುಡಿಸುತ್ತಿದ್ದ ಸಂದರ್ಭಗಳಿಗೂ ಕಮ್ಮಿ ಇರುತ್ತಿರಲಿಲ್ಲ." ಹೀಗೆ ಸಣ್ಣ ಪುಟ್ಟ ಕೆಲಸಗಳಿಂದ ಪ್ರಾರಂಭಿಸಿ ಕೀರ್ತಿಯ ಶಿಖರಕ್ಕೇರಿದ ಲೇಖಕರ ಸಾರ್ಥಕ ಬದುಕಿನ ಕಥೆ ಈ ಮುನ್ನುಡಿಯಲ್ಲಿ ಒಂದು ಸಣ್ಣ ಚಿಪ್ಪಿನಲ್ಲಿ ಅಡಗಿದಂತಿದೆ. "ನಾನು ಸಂಘದ ಒಡೆಯನಾದಾಗ ಅಂದರೆ ೧೯೧೭ರಲ್ಲಿ ಸಂಘವು ಇದ್ದುದಕ್ಕೂ 'ಕುರುಕ್ಷೇತ್ರ' ನಾಟಕದ ನಂತರ ಇದ್ದ ಸ್ಥಿತಿಗೂ ಅಜಗಜಾಂತರ ವ್ಯತ್ಯಾಸವಾಗಿದ್ದಿತು. ದೈವಕೃಪೆಯಿಂದ ದಿನೇ ದಿನೇ ಅಭಿವೃದ್ಧಿ ಹೊಂದಿಕೊಂಡು ಬಂದಿದ್ದಿತು. ಅರಿದಾಳ, ಇಂಗ್ಲೀಷ್, ಸಪೇದ, ಹಾಗೆ ಬಂಗಾರಗಳಿಂದ ಮೇಕಪ್ ಮಾಡುತ್ತಿದ್ದ ಕಾಲ ಹೋಗಿ ಮ್ಯಾಕ್ಸ್ ಫ್ಯಾಕ್ಟರ್ ಬಣ್ಣಗಳನ್ನು ಮತ್ತು ಕ್ರೇಪ್ ಹೇರ್ ಗಳನ್ನು ಉಪಯೋಗಿಸುವವರೆಗೂ ಬಂದಿತು. ರಂಗಮಂದಿರಕ್ಕೆ ಈಚಲ ಚಾಪೆಗಳನ್ನು ಹಾಸುತ್ತಿದ್ದುದು ಹೋಗಿ ೫೦೦-೬೦೦ ರೂಪಾಯಿಗಳ ರತ್ನಗಂಬಳಿಗಳನ್ನು ಹಾಸುತ್ತಿದ್ದೆವು." ಹೀಗೆ ಕಂಪನಿಯ ಸ್ಥಿತಿ ಉತ್ತಮಗೊಳ್ಳುತ್ತ ಹೋದುದನ್ನು ನಿಷ್ಕಳಂಕ ಆನಂದದಿಂದ ಹೇಳಿಕೊಳ್ಳುತ್ತಾರೆ. ವಿದ್ಯಾಬಲವಾಗಲಿ ಜನ ಬೆಂಬಲವಾಗಲಿ, ಧನ ಬೆಂಬಲವಾಗಲಿ ಇಲ್ಲದ ಹಳ್ಳಿಯವನಾದ ನನಗೆ ದೆಹಲಿಯಲ್ಲಿ ರಾಷ್ಟ್ರಪತಿಗಳಿಂದ ಪ್ರಶಸ್ತಿ ಬರುವ ಸ್ಥಿತಿಗೆ ಬಂದಿತೆಂದರೆ ಯಾವ ಕನ್ನಡಿಗನಿಗೆ ತಾನೆ ಆಶ್ಚರ್ಯವಾಗದಿಂದು! ಹೆಮ್ಮೆಯಾಗದಿರದು!! 'ನೀನೊಲಿದರೆ ಕೊರಡು ಕೊನರುವುದಯ್ಯಾ, ನೀನೊಲಿದರೆ ಬರಡು ಹಯನಹುದಯ್ಯಾ' ಎಂದಂತೆ ದೇವರ ದಯೆ ಇದ್ದಲ್ಲಿ ಕನಸು ನನಸಾಗುವುದು ಅತಿಶಯವಲ್ಲವೆಂಬುದಕ್ಕೆ ನನ್ನ ಈ ಆತ್ಮಕಥೆಯೇ ನಿದರ್ಶನ."

ಜೀವನದಲ್ಲಿ ನಡೆದ ಘಟನೆಗಳನ್ನೆಲ್ಲ ಯಾವ ಅಲಂಕಾರ, ಶಬ್ದಾಡಂಬರಗಳಿಲ್ಲದೆ, ನೇರವಾಗಿ ಪ್ರಾಮಾಣಿಕವಾಗಿ ಹೇಳುತ್ತ ಹೋಗುವ ಗ್ರಂಥದ ಶೈಲಿಯೇ ಮುನ್ನುಡಿಯಲ್ಲಿಯೂ ಮೂಡಿ ಬಂದಿದೆ. ಮುನ್ನುಡಿಗಳಲ್ಲಿ ಹಲವು ಹತ್ತು ಬಗೆಗಳುಂಟು. ಅದು ಹೀಗೇ ಇರಬೇಕು ಎಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಓದುಗನ ಮನಸ್ಸನ್ನು ಕೃತಿಪ್ರವೇಶಕ್ಕೆ ಸಿದ್ಧಗೊಳಿಸುವ ಸಾಧನವಾಗಿ ಕಿರಿದರಲ್ಲಿ ಹಿರಿದನ್ನು ಹೇಳುವಂತಹ ಚೊಕ್ಕ ಪ್ರಬಂಧವಾದರೆ ಒಳ್ಳೆಯದೆಂದು ಹೇಳಬಹುದು. ಏನೇ ಆದರೂ ಮುನ್ನುಡಿಯನ್ನು ಓದಿ ನಂತರ ಕೃತಿಯನ್ನು ಓದಲು ಪ್ರಾರಂಭಿಸುವುದರಿಂದ ಓದುಗನಿಗೆ ಕೃತಿಯ ಬಗ್ಗೆ ಆವಶ್ಯಕವಾದ ಹಿನ್ನೆಲೆ ದೊರೆಯುತ್ತದೆ. ಬಹಳಷ್ಟು ಮುನ್ನುಡಿಗಳು ಸ್ವಾರಸ್ಯಕರವಾಗಿಯೂ ಅಭ್ಯಾಸಯೋಗ್ಯವಾಗಿಯೂ ಇರುತ್ತವೆ. ಮುನ್ನುಡಿಗಳ ಅಧ್ಯಯನ ಒಂದು ವಿಶಿಷ್ಟ ಅನುಭವವೇ ಸರಿ. ✦



# ಸೂರ್ಯನ ಕುದುರೆ ಹುಳ
## ಮತ್ತು
# ಕೀಟ ಋಷಿ

ಕನ್ನಡಕ್ಕೆ: **ಶಶಿಧರ ವಿಶ್ವಾಮಿತ್ರ**

ತಿತ್ತಿರಿ ಹುಳದಷ್ಟೇ ಕುತೂಹಲ ಹುಟ್ಟಿಸುವ, ಆದರೆ ಕಚ್ಚು ಮಾಡುವುದಿಲ್ಲವಾದ್ದರಿಂದ ಅಷ್ಟು ಪ್ರಸಿದ್ಧಿ ಪಡೆದಿಲ್ಲದ ಇನ್ನೊಂದು ಕೀಟವಿದೆ. ಸೃಷ್ಟಿ ಇದಕ್ಕೊಂದು ಜೊತೆ ತಾಳ ದಯ ಪಾಲಿಸಿದ್ದರೆ ಇದರ ಖ್ಯಾತಿ ಹಾಡುಗಾರ ತಿತ್ತಿರಿ ಹುಳವನ್ನೂ ಮೀರಿಸಿಬಿಡುತ್ತಿತ್ತು. ಏಕೆಂದರೆ ಇದರ ಆಕಾರ, ನಡವಳಿಕೆ ಅಷ್ಟು ಅಸಾಧಾರಣ ವಾದದ್ದು. ಇಲ್ಲಿನ ಜನರು ಇದನ್ನು ದೇವರ ಪ್ರಾರ್ಥನೆ ಮಾಡುವ ಹುಳ ಅರ್ಥಾತ್ ಸೂರ್ಯನ ಕುದುರೆ ಹುಳ ಎನ್ನುತ್ತಾರೆ. ಇದರ ಅಧಿಕೃತ ಹೆಸರು ಪ್ರೇಯಿಂಗ್ ಮ್ಯಾಂಟಿಸ್. ಉರುವ ಕೃತ ಉರಿವ ಸೂರ್ಯನಡಿ ಬೇಯುತ್ತಾ ನಿಂತ ಪೊದೆಗಳಲ್ಲಿ ಜಾರು ನಿಲುವಿನ ರಾಜ ಗಾಂಭೀರ್ಯದಲ್ಲಿ ನಿಮಿರಿ ನಿಂತ ಒಂದು ಕೀಟವನ್ನು ಕಂಡೆ. ಪಳಗುಡಾವ ಹುಲ್ಲುಗಾವಲಿನ ಹಸಿರು ಬಣ್ಣದ ಉದ್ದನ್ನ ರೆಕ್ಕೆಗಳಿದ್ದ ಈ ಕೀಟದ ಮುಂಗಾಲುಗಳು – ಇವೇ ಅದರ ಕೈಗಳು ಕೂಡ – ಕೈಮುಗಿಯುವಂತೆ ಗಗನಕ್ಕೆತ್ತಿ ನಿಂತಿದ್ದವು. ಕಂಡದ್ದಷ್ಟೇ ಜನಸಾಮಾನ್ಯನ ಬುದ್ಧಿ ಮಿಕ್ಕದ್ದನ್ನು ಕಲ್ಪಿಸಿಕೊಂಡುಬಿಟ್ಟಿತ್ತು. ಕಾಲ ಕಾಲದಿಂದಲೂ ದೈವವನ್ನು ಪ್ರಾರ್ಥಿಸುವ ಕೀಟಗಳನ್ನು ಪೊದೆಗಳಲ್ಲೆಲ್ಲಾ ಕಂಡು ಕೊಂಡು ಬಿಟ್ಟಿತು.

ಅಯ್ಯೋ. ಸರಳ ಮುಗ್ಧ ಹೃದಯಗಳೇ ನಿಮ್ಮ ತಪ್ಪೆಷ್ಟು ಗೊತ್ತೆ? ಈ ಶರಣ್ಯ ನಿಲುವು ಸೈತಾನನ ಆಷಾಢಭೂತಿ ಭಂಗಿ, ಕೈ ಮುಗಿಯುವ ಆ ಮುಂಗಾಲುಗಳು ಜಪಮಾಲೆಗಳನ್ನೆಂದೂ ಎಣಿಸುವುದಿಲ್ಲ. ಸನಿಹಕ್ಕೆ ಸುಳಿಯುವ ಬೇಟೆಯ ಕತ್ತು ಕತ್ತರಿಸುವ ಕತ್ತಿಗಳು ಇದಕ್ಕಿರುವ ಶಕ್ತಿ, ಬಕಾಸುರನ ಮಾಂಸಪ್ರಿಯತೆ, ಬೇಟೆಯನ್ನು ಹಿಡಿಯಲು ಇದಕ್ಕಿರುವ ಹತ್ಯಾರಗಳು ಇದನ್ನು ಕೀಟಗಳಲ್ಲಿ ಅತಿ ಭಯಂಕರನನ್ನಾಗಿ ರಕ್ತ ಹೀರುವ ದೈತ್ಯನನ್ನಾಗಿ ಮಾಡಿವೆ.

ಕೊಲ್ಲುವ ಹತ್ಯಾರಗಳ ವಿನಾ ಇದರಲ್ಲಿ ಭಯ ಹುಟ್ಟಿಸುವಂಥದ್ದೇನೂ ಇಲ್ಲ. ಇದರ ತೆಳ್ಳನ್ನ ಉದ್ದನ್ನ ಮಾಟವಾದ ಮೈ. ಜೀವದ ನಸು ನೀಟು ನಡು, ತೆಳು ಹಸಿರು ಬಣ್ಣದ ಉದ್ದನ್ನ ಜಾಳರಿ ರೆಕ್ಕೆಗಳು ನಿಜವಾಗಿ ಒಂದು ಬಗೆಯ ಸೌಂದರ್ಯವನ್ನೇ ತೊಡಿಸಿದೆ. ಕಳೆಗತ್ತರಿಯಂತೆ ಅಗಲವಾಗಿ ಬಾಯಿ ತೆರೆಯುವ ಕಡಿಕೊಂಡಿಗಳಿಲ್ಲ. ಬಾಯಿ ತೆಗೆದರೆ ಹಾಡೀತೇನೋ ಎನ್ನಿಸುವಂಥ ನಾಜೂಕಿನ ಮೂತಿ ಇದೆ. ಮೇಲೆ ಕೆಳಗೆ ಆಡಿಸಲು ಬಗ್ಗಿಸಲೂ ಎತ್ತಲೂ ಅನುವಾದ ಕತ್ತಿದೆ. ಇಚ್ಛಿಸಿದೆಡೆ ದೃಷ್ಟಿ ಇಡಬಲ್ಲ, ಕಂಡದ್ದನ್ನು ಪರೀಕ್ಷಿಸಿ ಪೃಥಕ್ಕರಿಸಬಲ್ಲ ಶಕ್ತಿ: ಮುಖ ನೋಡಿ ಮಣೆ ಹಾಕಬಲ್ಲ ತಕ್ಕ ಕೀಟಗಳಲ್ಲಿಲ್ಲ ಇದೊಂದಕ್ಕೇ ಇರುವುದು.

ತನ್ನಂತೆ ಕೂತಿರುವಾಗ ಇದರ ಕೊಲ್ಲುವ ಹತ್ಯಾರಗಳಾದ ಮುಂಗಾಲುಗಳು ಎದೆಗೆ ಅತ್ತು ಕೊಂಡಿರುವುದರಿಂದ ನಿರುಪದ್ರವಿಯಂತೆ ಕಾಣಿಸಿ

ಬಿಡುತ್ತದೆ. ಆದರೆ ಎದುರಿಗೆ ಬೇಟೆ ಸುಳಿಯಿತೋ ಇದರ ಪ್ರಾರ್ಥನಾ ಭಂಗಿ ತಟ್ಟನೆ ಬದಲಾಯಿಸಿ ಬಿಡುತ್ತದೆ. ಉದ್ದನ್ನ ಹಲ್ಲು ಮುಳ್ಳುಗಳಿರುವ ಮುಜ್ಜೋಡಿ ಮುಂಗಾಲುಗಳ ಸೆಳೆಕೊಂಡಿಗಳನ್ನು ದೂರ ಚಾಚಿ ಬೇಟೆಯನ್ನು ಸೆಳೆದುಕೊಂಡುಬಿಡುತ್ತದೆ. ಹಿಂಗಾಲುಗಳ ತೊಡೆಗಳ ಮೇಲೆಯೂ ಗರಗಸದಂಥ ಮುಳ್ಳು ಮೊನೆಗಳಿದ್ದು ಹಿಂಗಾಲು ಮುಂಗಾಲುಗಳ ಇಕ್ಕಳದ ಸಿಕ್ಕಿಗೆ ಬಿದ್ದ ಬೇಟೆಯ ಗತಿ ಮುಗಿದಂತೆಯೇ ಶಲಭ ಚಿಟ್ಟೆಗಳೇ ಮಿಡಿತೆಗಳೇ ಇವಕ್ಕೂ ಹೆಚ್ಚಿನ ಶಕ್ತಿಯುಳ್ಳ ಯಾವುದೇ ಕೀಟಗಳೇ ಮುಳ್ಳಿನಿಕ್ಕಳಕ್ಕೆ ಸಿಕ್ಕವೆಂದರೆ ಕಥೆ ಮುಗಿಯಿತೆಂದೇ.

× × ×

ಜೀವಕೋಟಿಯ ಅನಂತ ವೈವಿಧ್ಯಗಳನ್ನು ಕುರಿತು ಪ್ರಶ್ನಿಸುತ್ತಾ ವಿಸ್ತಾರವಾದ ಈ ಭೂಮಿ, ಸಾಗರಗಳ ಮೇಲೆಲ್ಲಾ ಎಲ್ಲಾ ಋತುಗಳಲ್ಲೂ ಧ್ರುವದಿಂದ ಧ್ರುವದ ವರೆಗೂ ಪರ್ಯಟನ ಮಾಡಬೇಕು. ಅಧ್ಯಯನ ಮಾಡ ಬಯಸುವ ಕಣ್ಣುಗಳಿಗೆ ಇದಕ್ಕಿಂತ ದೊಡ್ಡ ಅದೃಷ್ಟವಿಲ್ಲ: ರಾಬಿನ್‌ಸನ್ ಕ್ರೂಸೋ ಬಹಳ ಇಷ್ಟವಾಗಿಬಿಟ್ಟಿದ್ದ ಯೌವ್ವನದ ದಿನಗಳಲ್ಲಿ ಈ ಕನಸು ನನ್ನನ್ನು ಆವರಿಸಿ ಬಿಟ್ಟಿತ್ತು. ನನ್ನ ಅಧ್ಯಯನದ ಜಗತ್ತಾದ ಇಂಡಿಯಾದ ಅರಣ್ಯಗಳು ಬ್ರೆಸಿಲ್ಲಿನ ದಟ್ಟ ಕಾಡುಗಳು, ಕಾಂಡರ್ ಪಕ್ಷಿ ವಿಹರಿಸುವ ಆ್ಯಂಡೀಸ್‌ಪರ್ವತಗಳ ಉನ್ನತ ಶಿಖರಗಳು ನಾಲ್ಕು ಗೋಡೆಗಳ ನಡುವೆ ಅವುಚಿಕೊಂಡಿರುವ ಇಷ್ಟಗಲದ ನೊರಜು ಭೂಮಿಯಾಗಿ ಸಂಕೋಚಗೊಂಡು ಬಿಟ್ಟಿತು.

ಹೀಗೆ ಬರೆದ ಜೀನ್ ಹೆನ್ರಿ ಕ್ಯಾಸ್ಮಿರ್ ಫ್ಯಾಬ್ರ್ ೧೮೨೩ರಲ್ಲಿ ಫ್ರಾನ್ಸಿನ ಸೇಂಟ್ ಲಿಯೂನ್ಸ್‌ನಲ್ಲಿ ತೀರ ಬಡಕುಟುಂಬದಲ್ಲಿ ಜನಿಸಿದ. ಹೊಟ್ಟೆ ಹೊರೆಯಲು ಏನೆಂದರೆ ಆ ಕೂಲಿ ಕೆಲಸ ಮಾಡುತ್ತಾ ಹದಿನೆಂಟನೆಯ ವಯಸ್ಸಿಗೆ ಓದು ಮುಗಿಸಿ ಹೊಟ್ಟೆಗಾದರೆ ಬಟ್ಟೆಗಾಗದ ಸಂಬಳದ ಅಧ್ಯಾಪಕನಾಗಿ ನಲವತ್ತು ವರ್ಷ ದುಡಿದ. ಇಪ್ಪತ್ತು ವಯಸ್ಸಿನವನಿದ್ದಾಗ ಕಣ್ಸೆಳೆಯುವ ಚಿತ್ರಣಗಳಿದ್ದ ಕೀಟಗಳ ಪುಸ್ತಕವೊಂದು ಅಂಗಡಿಗೆ ಬಂದಿತಂತೆ, ಆದರೆ ಅದರ ಬೆಲೆ, ಅದರ ಬೆಲೆ! ಎಷ್ಟಾದರೇನೀಗ? ನನ್ನ ಘನಂದಾರಿ ಸಬಳ ದೇಹ ಬುದ್ಧಿ ಇವೆರಡನ್ನೂ ಪೋಷಣೆ ಮಾಡಬೇಕೆಂದು — ಹೇಳಿದವರು ಯಾರು? ಹೊಟ್ಟೆಯನ್ನು ಕದ್ದು ಬುದ್ಧಿಗೆ ಹಂಚುವಂಥ ನೋವುಗಳು ವೈಜ್ಞಾನಿಕ ಶೋಧದ ಹುಚ್ಚಿರುವವರೆಲ್ಲರಿಗೂ ಗೊತ್ತಿರುವುದೇ. ತಿಂಗಳ ಸಂಬಳ ಮುಡಿಪಿರಿಸಿ ಆ ಪುಸ್ತಕವನ್ನು ಕೊಂಡೆ... ಅದನ್ನೋದಿ ನಾನು ನನ್ನ ಕರಿ ದುಂಬಿಯ ಹೆಸರು ಗೊತ್ತು ಮಾಡಿಕೊಂಡೆ ಕೀಟ ವಿಜ್ಞಾನದಲ್ಲಿ ಖ್ಯಾತರಾದ ರಾಯರ್ ಮೂರ್, ಹ್ಯೂಬರ್ ಮತ್ತು ಡೂಫೋರ್ ಇವರ ಹೆಸರುಗಳನ್ನು ಓದುವಾಗ ನನ್ನ ಕಣ್ಣುಗಳು ಕಾಂತಿಯಿಂದ ತುಂಬಿಬಿಟ್ಟಿತು. ನೂರನೆಯ ಬಾರಿ ಪುಟಗಳನ್ನು ತಿರುಗಿಸಿದಾಗ ನನ್ನೊಳಗೊಂದು ಧ್ವನಿ ಪಿಸುಗುಟ್ಟಿತು: 'ನೀನೂ ಅವರನ್ನು ಸರಿಗಟ್ಟುವ ಜೊತೆಗಾರನಾಗುತ್ತೀಯ!'

ನಲವತ್ತು ವರ್ಷಗಳ ಕಡು ಕಷ್ಟದ ಜೀವನ ನಡೆಸಿದ ಮೇಲೆ, ೧೮೭೯ರ ಸುಮಾರಿಗೆ ಫ್ಯಾಬ್ರ್ ಜೀವನವಿಡೀ ಹೊತ್ತಿದ್ದ ಕನಸು ನನಸಾಯಿತು. ಅದೆಂದರೆ ಫ್ರಾನ್ಸಿನ ಸೆರಿಗ್ನಾನ್ ಎಂಬ ಹಳ್ಳಿಯ ಕೊಯರ್‌ಮೂಲೆಯಲ್ಲಿ ಮುಳ್ಳು ಕಂಟಿ ಪೊದೆ ತುಂಬಿ ಪಾಳು ಬಿದ್ದಿದ್ದ ೨.೪೭ ಎಕರೆಯ ಚಿಕ್ಕಕನ್ನ ಬಂಜರುಭೂಮಿಯ ಒಡೆತನ! ಕಾಂಪೌಂಡಿದ್ದ ಈ ಭೂಮಿಯಲ್ಲಿ ಎರಡಂತಸ್ತಿನ ಒಂದು ಮನೆಯೂ ಇತ್ತು.

× ×

ಸೂರ್ಯನ ಕುದುರೆ ಹುಳದ ನಿರಂತರ ಅಧ್ಯಯನ ಬಯಲಿನಲ್ಲಿ ಸಾಧ್ಯವಿಲ್ಲ. ಹಿಡಿದು ತಂದು ಮನೆಯಲ್ಲಿ ಬೆಳೆಸಬೇಕು. ಇದೇನೂ ಕಷ್ಟದ ಕೆಲಸವಲ್ಲ. ಏಕೆಂದರೆ ಹೊಟ್ಟೆಗೆ ಒಳ್ಳೊಳ್ಳೆ ಆಹಾರ ಕೀಟದ ಸರಬರಾಜು ಮಾಡುತ್ತಿದ್ದರೆ ಸಾಕು, ಗಾಜುಗೂಡಿನ ಬಂಧನದಲ್ಲಿದ್ದೇನೆಂದು ಈ ಕೀಟ ಇರಸು ಮುರುಸುಗೊಳ್ಳುವುದಿಲ್ಲ. ಮಾಂಸಕ್ಕೆ ನೊಣ ಮುತ್ತದಿರುವಂಥ ಜಾಲರಿ ಮುಚ್ಚಳಗಳನ್ನು ಕಂಡಿದ್ದೀರಲ್ಲ. ಅಂಥ ಹತ್ತು

ಜಾಲರಿ ಮುಚ್ಚಳಗಳು ನನ್ನಲ್ಲಿವೆ. ಮರಳು ಹರಡಿ ತಟ್ಟೆಗಳ ಮೇಲೆ ಇವನ್ನು ಬೋರಲಿಟ್ಟೆ. ಮೊಟ್ಟೆ ಇಡಲು ಮರಳ ಮೇಲೆ ಒಂದು ಚಪ್ಪಟೆ ಕಲ್ಲು, ಒಂದು ಹಿಡಿ ಒಣ ಹುಲ್ಲು, ಹಗಲೆಲ್ಲ ಬಿಸಿಲು ಬೀಳುವ ಏರ್ಪಾಟು – ಇಷ್ಟು ಸೌಲಭ್ಯ ಕಲ್ಪಿಸಿ ಈ ಗೂಡುಗಳನ್ನು ಲ್ಯಾಬೋರೇಟರಿಯ ಮೇಜಿನ ಮೇಲೆ ಸಾಲಾಗಿ ಇಟ್ಟೆ.

ಹುಲ್ಲು ಒಣಗತೊಡಗುತ್ತದಲ್ಲ, ಆಗಸ್ಟ್ ತಿಂಗಳ ಕಡೆಯ ವಾರ, ಆಗ ದಾರಿಗುಂಟ ಇರುವ ಪೊದೆಗಳಲ್ಲಿ ಇವು ಕಾಣಸಿಗುತ್ತವೆ. ದಿನಗಳೆದಂತೆ ಗಂಡಿಗಿಂತ ಹೆಚ್ಚು ಗಾತ್ರ ಇರುವ ಹೆಣ್ಣುಗಳೇ ಹೆಚ್ಚೆಚ್ಚು ಕಾಣಸುತ್ತವೆ. ಚಿಕ್ಕ ಗಾತ್ರದ ಗಂಡುಗಳು ಸುಲಭವಲ್ಲಿ ಸಿಗುವುದಿಲ್ಲ ವಾದ್ದರಿಂದ ನನಗೆ ಜೋಡಿ ಮಾಡುವುದೇ ಕಷ್ಟವಾಗಿಬಿಡುತ್ತದೆ. ಭಕ್ಷ್ಯದಿಂದಾಗಿ ಗೂಡಿನೊಳಗೂ ಅಳಿವು ಹೆಚ್ಚು. ಅಲ್ಲೋ ಇಲ್ಲೋ ಇಷ್ಟು ಕಚ್ಚಿ ತಿಂದು ಮಿಕ್ಕೆಲ್ಲ ಭಾಗವನ್ನು ಬೇಕಾಬಿಟ್ಟಿ ಚೆಲ್ಲಿ ಹಾಳುಗೆಡುವುದ ವಾತವುಳ್ಳ ಇವುಗಳನ್ನು ತಿಂಗಳುಗಟ್ಟಲೆ ಸಾಕುವುದು ಸುಲಭದ ಕೆಲಸವಲ್ಲ. ಪೊದೆಗಳಲ್ಲಿ ತಾವೇ ಬೇಟೆಯಾಡುವಾಗ ಈ ಥರದ ಅಸಡ್ಡಾಳತನಕ್ಕೆ ಇವು ಬೀಳುವುದಿಲ್ಲ ಎಂದೇ ನಾನು ಅಂದು ಕೊಳ್ಳುತ್ತೇನೆ. ಆದರೆ ನನ್ನ ಗೂಡುಗಳಲ್ಲಿ ಮಾತ್ರ ಅಷ್ಟೋ ಇಷ್ಟೋ ತಿಂದು ಮಿಕ್ಕೆಲ್ಲವನ್ನೂ ಬಿಸಾಡಿ ಬಿಡುತ್ತವೆ. ಬಂಧನದ ಬೇಜಾರನ್ನು ಹೋಗಲಾಡಿಸಲು ಹೀಗೆ ಮಾಡುತ್ತವೆಯೋನೋ.

ಹೀಗೆ ದೊಡ್ಡಸ್ತಿಕೆ ಮೆರೆಯುವ ಹುಳಗಳ ಆಹಾರದ ಏರ್ಪಾಡಿಗಾಗಿ ನಾನು ಇಬ್ಬರು ಮೂವರು ಹುಡುಗರಿಗೆ ಕಲ್ಲಂಗಡಿ ಹಣ್ಣಿನ ಚೂರೋ ಬ್ರೆಡ್ಡು ಬೆಣ್ಣೆಯೋ ಲಂಚ ಕೊಟ್ಟು ಶಲಭಚಿಟ್ಟೆ, ಮಿಡಿತೆಗಳನ್ನು ಹಿಡಿಯಲು ಕಳುಹಿಸುತ್ತೇನೆ, ನನ್ನೀ ಹೊಟ್ಟೆಬಾಕ ಅತಿಥಿಗಳಿಗೆ ಇಷ್ಟವಾಗುವಂಥ ಆಹಾರ ಹೊಂಚಲು ಬಲೆ ಹಿಡಿದು ನಾನು ಹೊರಡುತ್ತೇನೆ. ಈ ತಿನಿಸುಗಳಿಂದ ಇವುಗಳ ಬೇಟೆಯ ತಾಖತ್ತು ಎದು–ರಾಳಿಯನ್ನೆದುರಿಸುವ ಕೆಚ್ಚು ಎಲ್ಲಿಯವರೆಗೆ ಹೋಗಬಲ್ಲುದು ಎಂಬುದನ್ನು ಕಂಡುಕೊಳ್ಳಬಹುದಲ್ಲವೇ? ಮಿಡಿತೆಗಳು, ಸಗಣಿ ಹುಳುಗಳು, ಚಿಟ್ಟೆಗಳು, ಸೊಣಗಳು, ಕಣಜಗಳು, ಜೇನ್ನೊಣಗಳು: ಕೊಂಡಿ ಇಕ್ಕಳ ಉಳ್ಳವು ಇರಿಕತ್ತಿ ಉಳ್ಳವು, ಮೈಯೆಲ್ಲಾ ಕೂಲುಳ್ಳವು; ತನಗಿಂತ ದೊಡ್ಡ ಗಾತ್ರದವು ಕಡೆಗೆ ವಿಷವುಳ್ಳ ದೈತ್ಯ ಜೇಡಗಳು ಯಾವ ಕೀಟ ಎದುರಾಗಲಿ ಸೂರ್ಯನ ಹುಳು ಕಾಳಗ ಕೊಡಲು ತುದಿಗಾಲಿನಲ್ಲಿ ಮಹಾ ಧೈರ್ಯದಿಂದ ನಿಂತಿರುತ್ತದೆ. ಬೇಟೆಯಾಡಲು ಹಿಂಜರಿಯುವುದೇ ಇಲ್ಲ, ದೊಡ್ಡ ಬೇಟೆಯ ಗಂಡಾಂತರಗಳು ಇದಕ್ಕೆ ಹೊಸದೇನೂ ಅಲ್ಲ, ಬಾಳಿನ ದಿನನಿತ್ಯದ ಸಾಧಾರಣ ಸಂಗತಿಯಷ್ಟೆ. ಗೂಡಿನ ಜಾಲರಿಯಲ್ಲಿ ಬೂದು ಶಲಭ ಚಿಟ್ಟೆಯನ್ನು ಕಂಡ ತಕ್ಷಣ ಇದರ ಮೈ ಅನಾರುವಾಯು ಬಂದಂತೆ ಒಮ್ಮೆ ಅರಿಭಯಂಕರ ನಿಲುವು ತಳೆಯುತ್ತದೆ. ವಿಸ್ಮೃತಿಸ ಗರವೂ ಇಷ್ಟು ಕ್ಷಿಪ್ರವಾಗಿ ಪರಿಣಾಮಕಾರಿಯಾಗಲಾರದು. ಈ ಮಾರ್ಪಾಡು ಎಷ್ಟು ಹಠಾತ್ತನೆ ಆಗಿ ಬಿಡುತ್ತದೆ, ತಳೆಯುವ ರೂಪ ಎಷ್ಟು ಉಗ್ರವಾಗಿರುತ್ತದೆ ಎಂದರೆ ಮೊದಲು ಕಾಣುವ ಯಾರಿಗೇ ಏನೇ ಗಂಡಾಂತರವೆಂಬ ಸಂಶಯ ಗ್ರಸ್ತ ಭೀತಿ ಬಡಿಯುತ್ತದೆ. ಇದನ್ನು ಕಂಡು ಅಭ್ಯಾಸವಾಗಿರುವ ನಾನೇ ವಿಮನಸ್ಕನಾಗಿರುವ ಸಮಯ ಬೆವರಿಬಿಡುತ್ತೇನೆ. ನಿಬ್ಬೆರಗಾಗಿ ಬಿಡುವಂತೆ ನಿಮ್ಮ ಕಣ್ಣೆದುರಿಗೇ ಜಾದು ನಡೆದುಬಿಡುತ್ತದೆ. ಆ ಈ ಕಡೆಯ ರೆಕ್ಕೆ ಮುಸುಕುಗಳು ತೆರೆದು ಬೆಂಭಾಗಕ್ಕೆ ಸರಿದು ಬಾಗಿ ಕೂರುತ್ತವೆ; ರೆಕ್ಕೆಗಳು ಹಡಗಿನ ಹಾಯಿ ಪಟದಂತೆ ತಟ್ಟನೆ ತೆರೆದು ಅಕ್ಕಪಕ್ಕ ಉದ್ದಕ್ಕೆ ಹರಡಿಕೊಳ್ಳುತ್ತವೆ; ಬಿಷಪ್ಪಿನ ಧರ್ಮದಂಡದಂತೆ ನಡುವಿನ ಮೇಲ್ಭಾಗವೆಲ್ಲ ಮೇಲೆ ಕೆಳಗೆ ಎದ್ದು ಬೀಳತೊಡಗುತ್ತದೆ; ಜೊತೆಗೇ ಟರ್ಕಿ ಕೋಳಿ ಗರಿಗೆದರಿದಾಗ ಆಗುವ ಉಫ್ ಉಫ್ ಶಬ್ದ ಕೇಳಿ ಬರುತ್ತದೆ. ಬೆದರಿ ಬುಸುಗುಡುವ ಕನ್ನಡಿ ಹಾವು ಜ್ಞಾಪಕವಾಗಿ ಬಿಡುತ್ತದೆ. ಕೆಳಗಿನ ಹಿಂಗಾಲುಗಳು ದಿಟ್ಟ ಊರಿರುವ ಇದರ ನಡುವಿನ ಮೇಲಿನ ದೇಹವಿಡೀ ಛಟ್ಟನೆ ನಿಮಿರಿ

ಬಿಡುತ್ತದೆ. ಈ ಮುಂಚೆ ಮಡಚಿಕೊಂಡಿದ್ದ, ಸೆಳೆಕೊಂಡಿಗಳುಳ್ಳ ಮುಂಗಾಲುಗಳು ಮೈಯ ನಿಲುವಿಗೆ ಸಮಾನಾಂತರವಾಗಿ ಕ್ರಾಸಿನಂತೆ ಅಗಲಕ್ಕೆ ತೆರೆದುಕೊಂಡುಬಿಡುತ್ತವೆ. ಈಗ ತೆರೆದ ಕಂಕುಳಿನಿಂದ ದಂತದ ಮಣಿಗಳಂತೆ ಚೆಂದ ಕಾಣುವ ಸಾಲು ಚುಕ್ಕಿಗಳೂ, ನವಿಲಿನ ಗರಿಗಣ್ಣನ್ನು ಹೋಲುವ ಬಿಳೀ ಟಿಕ್ಕೆಯನ್ನು ಸುತ್ತಿಕೊಂಡಂಥ ಕಪ್ಪುಂಗುರವೂ ಕಾಣಿಸಿಕೊಳ್ಳುತ್ತದೆ.

ಹೀಗೆ ಅತಿಭಯಂಕರ ನಿಲುವಿಗೆ ತಟ್ಟನೆ ರೂಪಾಂತರಗೊಂಡು ನಿಂತ ಸೂರ್ಯ ಕುದುರೆ ಹುಳ ಬೇಟೆಯ ಮೇಲೆ ಕಣ್ಣಿಡುತ್ತದೆ. ಬೇಟೆ ಏನಾದರೂ ಚಲಿಸಿತೋ, ಚಲನೆಗೆ ತಕ್ಕಂತೆ ಇದರ ಕತ್ತೂ ತಿರುಗುತ್ತದೆ. ಈ ಕಾರ್ಯಚರಣೆಯ ಮರ್ಮ ತಿಳಿಯದ್ದೇ ಬೇಟೆಯು ಎದೆಗೆಡಿಸಿ ಓಡಾಡಲಿಕ್ಕೂ ಸಾಗದಂಥ ಭೀತಿಗೆ ಕೆಡವಿಬಿಡುವುದು. ಈ ಭೀತಿ ಹುಟ್ಟದಿದ್ದಲ್ಲಿ ಬೇಟೆಯದೇ ಮೇಲುಗೈಯಾಗಿಬಿಟ್ಟೀತು.

ಈ 'ಕಾರ್ಯಾಚರಣೆ ಯಾಕೆ ತರ್ಕೀತೋ? ಬೇಟೆಯಾಗಿರುವ ಕೀಟದ ತಲೆಯೊಳಗೆ ಏನು ನಡೆಯಿತೆಂದು ಹೇಳುವವರು ಯಾರು? ಆದರೆ ತಾನು ಗಂಡಾಂತರದಲ್ಲಿದ್ದೇನೆ ಎಂಬ ಅರಿವಂತೂ ಅದಕ್ಕೆ ಖಂಡಿತವಾಗಿ ಆಗಿಬಿಡುತ್ತದೆ. ಗರಗಸದಂಥ ಮುಳ್ಳುಗಳುಳ್ಳ ಇಕ್ಕಳಕೊಂಡಿಗಳನ್ನು ಎತ್ತಿ ಹಿಡಿದು ಮೇಲೇರಗಲು ಸಿದ್ಧವಾಗಿ ನಿಂತ ಭೂತವನ್ನು ತನ್ನೆದುರಿಗೆ ಕಂಡೊಡನೆಯೇ ಮೃತ್ಯುವಿನೆದುರಿಗೇ ನಿಂತ ಹಾಗಾಗಿ, ಕಾಲಾವಕಾಶ ಇದ್ದರೂ ನಿಂತಲ್ಲಿಂದ ಕಾಲು ಕೀಳಲಾರದಾಗಿಬಿಡುತ್ತದೆ. ಪಟಕ್ಕನೆ ಹಾರಿ ಈ ಹಿಡಿತದಿಂದ ಸುಲಭವಾಗಿ ಬಿಡಿಸಿಕೊಳ್ಳಬಲ್ಲ ಮಿಡತೆ ಅದರ ಪುಷ್ಟ ತೊಡೆಯ ದೊಡ್ಡ ನೆಗೆತದ, ಮಿಡತೆ ಬಸವಳಿದು ಪೆಚ್ಚಾಗಿ ನಿಂತಲ್ಲೇ ನಿಂತುಬಿಡುತ್ತದೆ. ಅಥವ ಮೆಲ್ಲನೆ ಅಡಿ ಇಡುತ್ತಾ ಹತ್ತಿರವೇ ಸರಿಯುತ್ತದೆ. ದಂಷ್ಟ್ರಗಳು ಕಾಣುವಂತೆ ತೆರೆದ ಬಾಯಿಯ ಹಾವಿನ ಗುಂಡಿಗಣ್ಣುಗಳ ಕ್ರೂರ ನೋಟಕ್ಕೆ ಬಿದ್ದೊಡನೆ ಪುಟ್ಟ ಹಕ್ಕಿ ಗರ ಬಡಿದಂತಾಗಿ ಹಾರುವ ಶಕ್ತಿಯನ್ನೇ ಕಳೆದುಕೊಂಡು ಸುಲಭದ ಬಾಯಿ ತುತ್ತಾಗುತ್ತದೆಂದು ಹೇಳುತ್ತಾರಲ್ಲ, ಹೆಚ್ಚು ಕಡಿಮೆ ಈ ಅವಸ್ಥೆಯೇ ಬೇಟೆಗಳದ್ದು ಕೂಡ. ಸೂರ್ಯನ ಕುದುರೆಯು ಬೇಟೆಯ ಮೋಡಿಯನ್ನು ಇಗೋ ನೋಡಿ. ಅಗಲಕ್ಕೆ ತೆರೆದ ಮುಂಗೈಗಳ ಸೆಳೆಕೊಂಡಿಗಳು ಬೇಟೆಯ ಬರಸೆಳೆದು ಮುಳ್ಳಿನಿಕ್ಕಳದಿಂದ ಬಂಧಿಸಿಬಿಡುತ್ತದೆ. ಪಾಪ, ಬೇಟೆ ಅನ್ಯಥಾ ಹೆಣಗುತ್ತದೆ; ಬಾಯಿ ಖಾಲಿ ಜಾಗ ಕಚ್ಚುತ್ತದೆ; ಕಾಲುಗಳು ಗಾಳಿಯನ್ನು ಒದೆಯುತ್ತವೆ. ಇನ್ನಿದರ ಹಣೆಬರಹ ಮುಗಿಯಿತು.

× ×

ಸೂರ್ಯನ ಕುದುರೆ ಹುಳಕ್ಕಂತೂ ಒದರಾಡುವ ಬೇಟೆಯನ್ನು ತಿನ್ನುವ ಇಚ್ಛೆಯಿಲ್ಲ. ಭೋಜನ ಶಾಂತವಾಗಿ ಜರುಗಬೇಕು. ತನ್ನನ್ನು ತಿನ್ನಿಸಿಕೊಳ್ಳಲು ಒಪ್ಪದ ಬೇಟೆಯು ಒದರಾಡುವ ಕಾಲುಗಳು, ಚುಚ್ಚುವ ಕತ್ತಿಗಳು, ಕಚ್ಚುವ ಕೊಂಡಿಗಳನ್ನು ಒಂದೊಂದಾಗಿ ಕತ್ತರಿಸಿ ತೆಗೆದು ಇವುಗಳು ಮಾಡುವ ಗೊಂದಲದಿಂದ ಪಾರಾಗಬಹುದು. ಆದರೆ ಇದು ತೀರ ನಿಧಾನದ ವಿಧಾನ. ಅಪಾಯಗಳೂ ಉಂಟೇ. ಬೇಟೆಗಳ ಅಂಗರಚನೆ ಮತ್ತು ಮಾಂಸಖಂಡಗಳನ್ನು ನಿಯಂತ್ರಿಸುವ ಶಕ್ತಿ ಕೇಂದ್ರ ಎಲ್ಲಿದೆ ಎಂದು ಬಲ್ಲ ಸೂರ್ಯನ ಕುದುರೆ ಹುಳು ಇದಕ್ಕಿಂತ ಘನವಾದ ವಿಧಾನವನ್ನು ಅನುಸರಿಸುತ್ತದೆ. ಬೇಟೆಯ ನಡುವನ್ನು ಎರಡು ಜೊತೆ ಮುಂಗಾಲುಗಳ ಗರಗಸದ ಇಕ್ಕಳದಲ್ಲಿ ತಲೆ ಹಿಡಿದರೆ ಇನ್ನೆರಡು ಕತ್ತು ತೆಗೆದು ಕಾಣುವಂತೆ ತಲೆಯನ್ನು ನೂಕಿ ಹಿಡಿಯುತ್ತವೆ. ಹೀಗೆ ತೆರೆದ ಕತ್ತಿನ ಮೇದು ಭಾಗವನ್ನು ಕಚ್ಚಿ ಚುಚ್ಚಿ ದೊಡ್ಡ ಗಾಯವನ್ನು ಮಾಡಿಬಿಡುತ್ತದೆ. ಬೇಟೆಯ ಒದರಾಟ ಕಚ್ಚಾಟಗಳೆಲ್ಲ ಬಹು ಬೇಗನೆ ಸ್ಥಗಿತಗೊಳ್ಳುತ್ತವೆ. ಇನ್ನೀಗ ಎಷ್ಟೇ ದೊಡ್ಡ ಬೇಟೆಯನ್ನೇ ಶಾಂತಿಯಿಂದ ಉಣ್ಣಬಹುದು. ತನ್ನ ಸಾಧಾರಣ ಭಂಗಿಗೆ ಹಿಂದಿರುಗಿ ಇಚ್ಛಿಸಿದ ಭಾಗಗಳನ್ನು ಆರಿಸಿಕೊಂಡು ಭಕ್ಷಿಸಲಾರಂಭಿಸುತ್ತದೆ.

ತೀರ ಒಣಗಿ ಬಿಟ್ಟಿರುವ ರೆಕ್ಕೆಯ ಭಾಗವನ್ನು ತಿನ್ನದೆ ಬಿಟ್ಟು, ಕೈ ಕಾಲು ತೊಡೆ

ಕೊಂಡಿಗಳು ತೊಗಲು ಇನ್ನೆಲ್ಲ ಭಾಗಗಳನ್ನೂ ಮುಕ್ಕಿಬಿಡುತ್ತವೆ. ಕೆಲವು ದಿನ ಉಪವಾಸ ಬಿದ್ದ ಹುಳು ತನಗಿಂತ ದೊಡ್ಡ ಗಾತ್ರದ ಕೀಟವನ್ನು ಎರಡು ಗಂಟೆಗಳೊಳಗೆ ತಿಂದು ಪೂರೈಸಿ ಬಿಡುತ್ತವೆ. ಇಂಥ ದೈತ್ಯ ಭಕ್ಷಕ ತುಂಬಾ ಅಪರೂಪ. ನಾವಂತೂ ಒಳಗಿನ ಸಾಮಾನುಗಳಿಗಿಂತ ಪೆಟ್ಟಿಗೆ ದೊಡ್ಡದು ಎಂಬ ಗಾದೆಯನ್ನೇ ತಲೆಕೆಳಗು ಮಾಡುವ ಇವುಗಳ ಹೊಟ್ಟೆಬಾಕತನವನ್ನು ಕಂಡು ಆಶ್ಚರ್ಯಗೊಂಡಿದ್ದೇವೆ.

ವಿಕ್ಟರ್ ಹ್ಯೂಗೋವಿನಿಂದ 'ಕೀಟಗಳ ಹೋಮರ್' ಎಂದು ಕರೆಯಿಸಿಕೊಂಡ ಫಾಬ್ರ್ ಐವತ್ತೈದನೆಯ ವಯಸ್ಸಿನಲ್ಲಿ ೨.೪೭ ಎಕರೆಗಳ ಪಾಳಿನ ಒಡೆಯನಾಗಿಬಿಟ್ಟ: ಇದನ್ನೇ ನಾನು ಬಯಸಿದ್ದು, ಬಿಸಿಲಿನಲ್ಲಿ ಬೇಯುತ್ತಾ ಅನಾದರಣೆಯಿಂದ ಪಾಳು ಬಿದ್ದ ಆದರೆ ಕಣಜ ಜೇನ್ನೊಣಗಳು ಬಯಸುವ, ಪೊದೆ ಕುರುಚಲು ಕಾಡು ಹೂಗಳು ಇಟ್ಟಾಡುವ ಒಂದು ತುಂಡು ಭೂಮಿ; ಓ ದೊಡ್ಡದಲ್ಲ, ಆದರೆ ದಾರಿಹೋಕರು ಓಡಿಯಾಡದಂತೆ ಬೇಲಿ ಇದ್ದದ್ದು. ಯಾಕೆಂದರೆ ನಾನಿಲ್ಲಿ ಯಾರ ತಂಟೆಯೂ ಇಲ್ಲದೆ ಸಗಣಿ ಹುಳು, ಕಣಜ ಇನ್ನಿತರ ಕೀಟಗಳೊಡನೆ ಪ್ರಯೋಗಗಳೇ ಭಾಷೆಯಾಗಿ ಬಿಡುವ ಚರ್ಚೆಗಳಲ್ಲಿ ಪ್ರಶ್ನೋತ್ತರ ವಿನಿಮಯ ಮಾಡಬಹುದು. ವೈ ಮನಸ್ಸುಗಳನ್ನು ಸುಸ್ತು ಮಾಡುವ ಬಹುದೂರದ ಆಯಾಸದ ಹಾದಿ ತುಳಿಯುವ ಇಲ್ಲಿಯೆ ನಾನು ಮುಸುಕುಮರೆಸಿನ ಪ್ರಯೋಗಗಳನ್ನು ಹೂಡಿಕೊಂಡೋ ಯೋಜಿಸಿಕೊಂಡೋ ಇವುಗಳಿಗೇನು ಉತ್ತರ ಬಂದೀತು ಎಂಬ ವೀಕ್ಷಣೆ ಕಾರ್ಯವನ್ನು ನಿರಾತಂಕವಾಗಿ ದಿನವಿಡೀ ಜರುಗಿಸಬಹುದು. ಹೌದು, ಇದೇ ನನ್ನನ್ನು ಸದಾ ಕಾಲ ಕಾಡುತ್ತಿದ್ದ ಆದರೆ ಭವಿಷ್ಯದ ಮಂಜಿನ ತೆರೆಯೊಳಗೆ ಮುಸುಕಿಕೊಂಡುಬಿಡುತ್ತಿದ್ದ ನನ್ನ ಹಂಬಲ, ತನ್ನ ಕನಸು, ಹೊಟ್ಟೆಗಿಷ್ಟು ಬ್ರೆಡ್ಡು ಹೊಂಚಲೇ ಹೆಣಗುತ್ತಿದ್ದ ನನಗೆ ಈ ತುಂಡು ಭೂಮಿಯ ಪ್ರಯೋಗಶಾಲೆಯನ್ನು ಕೊಂಡುಕೊಳ್ಳುವುದು ಸುಲಭ ಸಂಗತಿಯಾಗಿರಲಿಲ್ಲ. ಇದಕ್ಕಾಗಿ ನಾನೆಷ್ಟು ಮನಃಸಂಯಮ ತಾಳಿದೆ ಎಂತೆಂತಹ ಕಷ್ಟಗಳನ್ನು ಎದೆಗೆಡದೆ ಹಾಗು ಮುಚ್ಚಿಕೊಂಡು ಅನುಭವಿಸಿದೆ, ನಾನು ಹೇಳಹೋಗುವುದಿಲ್ಲ. ಕಡೆಗೂ ನನ್ನ ಬಯಕೆ ಕೈಗೂಡಿದೆ. ಓ ನನ್ನ ಮುದ್ದಿನ ಕೀಟಗಳೇ, ಹಲ್ಲಿದ್ದವರಿಗೆ ಕಡಲೆ ಇಲ್ಲ ಎನ್ನುವ ಗಾದೆಗೆ ತಕ್ಕ ಹಾಗೆ ನನ್ನ ಕನಸು ತುಂಬ ತಡವಾಗಿ ಬಂದಿದೆ. ಹೌದು. ತುಂಬಾ ತಡವಾಗಿಬಿಟ್ಟಿದೆ; ಒಂದು ಕಾಲದಲ್ಲಿ ವಿಸ್ತಾರವಾಗಿ ಕಾಣುತ್ತಿದ್ದ ಕ್ಷಿತಿಜ ದಿನದಿನಕ್ಕೆ ಕ್ಷಯಿಸಿ ತನ್ನ ವಿಸ್ತಾರವನ್ನೂ ವಿನ್ಯಾಸವನ್ನೂ ನೀಗಿಕೊಳ್ಳುತ್ತಾ ಉಸಿರುಗಟ್ಟಿಸುವಂತೆ ಇಷ್ಟೇ ಅಗಲಕ್ಕೆ ಸಂಕುಚಿತಗೊಂಡುಬಿಟ್ಟಿದೆ. ಯಾವ ಹಂಬಲವೂ ಈಡೇರದ ಬಾಳ ಜಂಜಡದಲ್ಲಿ ನಾನೆಷ್ಟು ಬಳಲಿಬಿಟ್ಟಿದ್ದೇನೆಂದರೆ ಬದುಕಿ ಪ್ರಯೋಜನವೇನು ಎಂಬ ಪ್ರಶ್ನೆಯೇ ಅಡಿಗಡಿಗೆ ಮುಂದೆ ಬಂದು ನಿಲ್ಲುತ್ತದೆ. ಆದರೆ ಪಶ್ಚಾತ್ತಾಪ ಪಡುತ್ತಾ ಕೂರಬಾರದು. ನಾನು ಬಾಳುತ್ತಿರುವ ಜೀವನ ಎಂಬ ಪಾಳಿನಲ್ಲಿ ಪಟ್ಟುಗಟ್ಟಿ ಭದ್ರವಾಗಿ ನಿಂತಿರುವ ಒಂದೇ ಒಂದು ಗೋಡೆಯೆಂದರೆ ವಿಜ್ಞಾನದ ಸತ್ಯಗಳನ್ನು ಶೋಧಮಾಡುವುದರಲ್ಲಿ ನನಗಿರುವ ಹಂಬಲ. ಸದಾ ಚಟುವಟಿಕೆಯಿಂದಿರುವ ಓ ನನ್ನ ಕೀಟಗಳೇ, ನಿಮ್ಮ ಜೀವನದ ಚರಿತ್ರೆಗೆ ಒಂದಷ್ಟು ಪುಟಗಳನ್ನು ಸೇರಿಸಲು ನನಗೀಗ ಸಮಯವು ಸಾಲದು. ನನ್ನೀ ಹಂಬಲ ಈಡೇರದಂತೆ ನನ್ನ ಶಕ್ತಿ ಕುಂದಿಬಿಟ್ಟಿತು. ನಾನೇಕೆ ನಿಮ್ಮಿಂದ ಇಷ್ಟು ಕಾಲ ದೂರ ಇದ್ದೆ? ಆದರೆ ನೋಡಿ; ತಪ್ಪು ನನ್ನದಲ್ಲ. ನಾನು ನಿಮ್ಮನ್ನು ಮರೆತಿರಲಿಲ್ಲ. ವೈಮನಸ್ಯವೋ ಅಥವಾ ಅನಾದರಣವೇ ಕಾರಣವಲ್ಲ. ಕಾಲ ನನ್ನ ಅಧೀನದಲ್ಲಿರಲಿಲ್ಲ. ಅನಾದರ ಒಂಟಿತನ ಮತ್ತು ತಾಪತ್ರಯಗಳಿಗೆ ಸಿಕ್ಕಿಕೊಂಡು ನಾನು ಹೆಣಗುತ್ತಿದ್ದೆ. ತತ್ತ್ವ ಹೇಳುವುದಕ್ಕೆ ಮುಂಚೆ ಹೊಟ್ಟೆ ತುಂಬಬೇಕು.

× × ×

ತನ್ನವರನ್ನೇ ಕೊಂದು ತಿನ್ನುವ ಜೇಡಗಳಿಗಿಂತ ಕಠೋರವಾದ ಭಕ್ಷಕ ಹಿಮಾನಿ ಸೂರ್ಯನ

ಕುಮಾರಿಗೇ ಮೀಸಲಾದದ್ದು. ನಾನೀಗ ಒಂದೇ ಗೂಡಿನಲ್ಲಿ ಅನೇಕ ಹೆಣ್ಣುಗಳನ್ನಿರಿಸಿದೆ. ಇವಷ್ಟೇ ಅಲ್ಲ, ಇವುಗಳ ಸಂತಾನ ಕೂಡ ಸಹಬಾಳುವೆ ನಡೆಸಲು ಸಾಕಾಗಿ ಮೀರುವಷ್ಟು ಜಾಗವಿತ್ತು. ಗೂಡಿನ ತಂತಿ ಜಾಲರಿಗೆ ನೇತು ಹಾಕಿಕೊಂಡು ನಿಶ್ಚಲ ಉದಾಸನ್ನು ಅರಗಿಸಿಕೊಳ್ಳುತ್ತಿದ್ದುವು. ಇಲ್ಲಿ ಬೇಟೆ ಸುಳಿದೀತೆ ಎಂದು ಕಾಯುತ್ತಿರುತ್ತಿದ್ದುವು. ಬಯಲಿನ ಸ್ವಾತಂತ್ರ್ಯದಲ್ಲಿ ಕೂಡ ಇವು ಹೀಗೆಯೆ ಮಾಡುತ್ತವೆಯಲ್ಲವೆ? ಹುಲ್ಲಿನ ಕೊರತೆಯಾದಾಗ ಸಾಮಾನ್ಯವಾಗಿ ಶಾಂತ ಸ್ವಭಾವವುಳ್ಳ ಕತ್ತೆಗಳು ಸಹ ಕಾದುತ್ತವೆ ಎಂದು ನನಗೆ ಗೊತ್ತು. ಇವುಗಳಷ್ಟು ಸ್ವೈರಣೆ ಇಲ್ಲದ ನನ್ನ ಬಂದಿಗಳು ಆಹಾರದ ಕೊರತೆಯಾಗಿಬಿಟ್ಟರೆ ರೊಚ್ಚಿಗೆದ್ದು ತಮ್ಮ ತಮ್ಮಲ್ಲೇ ಕಾದಾಡಿಬಿಟ್ಟಾವು ಎಂದು ಮುನ್ನೆಚ್ಚರತ್ತ ನಾನು ದಿನಕ್ಕೆರಡು ಸಲ ಸಾಕಷ್ಟು ಸಂಖ್ಯೆ ಮಿಡಿತೆಗಳನ್ನು ಗೂಡಿಗೆ ಪೂರೈಸುತ್ತಿದ್ದೆ. ಇನ್ನೀಗ ಅಂತರ್ಯುದ್ಧ ಆರಂಭವಾದರೆ ಕ್ಷಾಮದ ಕಾರಣದಿಂದಲ್ಲ, ಅಲ್ಲ?

ಮೊದಲಿಗೆ ಎಲ್ಲವೂ ಚೆನ್ನಾಗಿಯೇ ಸಾಗಿತು. ತಮ್ಮ ಬಳಿ ಸುಳಿದ ಮಿಡತೆಯನ್ನು ಗಬಕಿ ಕೊಳ್ಳುತ್ತ ತಮ್ಮ ತಮ್ಮಲ್ಲಿ ಕಾದದೆಯೆ ಸ್ವಲ್ಪ ಕಾಲ ಶಾಂತವಾಗಿ ಬಾಳಿದುವು. ಹೆಣ್ಣುಗಳ ಅಂಡಾಶಯಗಳು ಉಬ್ಬಿ ಉಬ್ಬಿ ಹೊಟ್ಟೆ ಇಡುವ ಕಾಲ ಸನ್ನಿಹಿತವಾಯಿತು. ಆ ವೇಳೆಗೆ, ಪ್ರೇಮಕಲಹಕ್ಕೆ ಕುಮ್ಮಕ್ಕು ಕೊಡಬಲ್ಲಂಥ ಒಂದೇ ಒಂದು ಗಂಡೂ ಇಲ್ಲದಿದ್ದರೂ, ಗುಂಪಿನಲ್ಲಿ ಈರ್ಷ್ಯೆ ಕಶ್ಮಲಗಳು ಸ್ಫೋಟಗೊಂಡು ಬಿಟ್ಟುವು. ಅಕ್ಕ ಪಕ್ಕದ ಎರಡು ಹೆಣ್ಣುಗಳು ವಿಸ್ಮಯಕಾರಿ ವೈ ಸೆಟೆಯಿಸಿ ತಲೆ ಆ ಕಡೆ ಈ ಕಡೆ ರುಡುಂಕಿಸಿ ಸಶಬ್ದವಾಗಿ ರೆಕ್ಕೆ ಹಿಗ್ಗಿಸಿ ಒಂದನ್ನೊಂದು ದುರು ದುರು ನೋಡತೊಡಗಿದವು. ಬಹಳ ಸಣ್ಣ ಪುಟ್ಟ ಗಾಯಗಳ ಹೊರತು ಅತಿರೇಕಕ್ಕೆ ಹೋಗದ ಸಮಯ ರೆಕ್ಕೆಗಳು ಪುಸ್ತಕದ ಹಾಳೆಗಳು ಬಿಚ್ಚಿ ಕೊಳ್ಳುವಷ್ಟು ಮಾತ್ರ ಅಗಲಿಸಿಕೊಂಡಿರುತ್ತವೆ. ಹೀಗೇ ಇರುತ್ತ ಒಬ್ಬಾಕೆ ಪ್ರತಿಸ್ಪರ್ಧಿಯತ್ತ ಮಿಂಚಿನ ವೇಗದಲ್ಲಿ ಸೆಳೆಕೊಂಡಿಯನ್ನು ಬೀಸಿ ಹಿಂದೆಗೆದು ಕೊಳ್ಳುತ್ತಾಳೆ. ಎದುರಾಳಿಯೂ ಹಾಗೆಯೇ ಬೆವರು ಕಾಳಗಕೊಡುತ್ತಾಳೆ. ಹೀಗೆ ಕಾದುತ್ತಾ ಗಾಯ ಗೊಂಡೊಡನೆ ಒಬ್ಬಾಕೆ ತಟ್ಟನೆ ಹಿಮ್ಮೆಟ್ಟಿ ಬಿಡುತ್ತಾಳೆ. ಗೆದ್ದಾಕೆ ವಿಜಯದ ಪತಾಕೆಯನ್ನು ಮೆರೆಸುವಂತೆ ವೈ ಎತ್ತಿಕೊಂಡು ಇನ್ನೆಲ್ಲಿಗೋ ಹೋಗಿ ಪ್ರಾರ್ಥನಾಭಂಗಿಯಲ್ಲಿ ನಿಶ್ಚಲ ನಿಲ್ಲುತ್ತಾಳೆ. ಆದರೆ ಮರುಕಾಳಗ ಕೊದಲಂತೂ ಸದಾಸಿದ್ಧ.

ಬಹಳ ಸಲ ಈ ಬೆದರುಕಾಳಗಗಳು ಶೋಕಾಂತವಾಗಿ ಬಿಡುತ್ತವೆ. ಇಂಥ ಹೊತ್ತು ಗೆದ್ದಾಕೆಯ ಇಕ್ಕಳದ ಹಿಡಿತಕ್ಕೆ ಸಿಕ್ಕಿ ಸೋತವಳು ಸತ್ತು ಹೋಗಿದಳೆಂದೇ. ಮಿಡಿತೆಯೋ ಇನ್ನೊಂದೋ ಹುಳದಂತೆಯೇ ಮೊದಲು ಕತ್ತು ಕಚ್ಚಿಸಿಕೊಂಡು ನಿಶ್ಚೇಷ್ಟವಾಗಿಬಿಟ್ಟು ನಿರಾತಂಕ ಭೋಜನದ ತುತ್ತುಗಳಾಗಿಬಿಡುತ್ತಾಳೆ. ಸುತ್ತಲಿನ ಇತರ ಯಾರೂ ಇದೇನು ನೀನು ನಮ್ಮವಳನ್ನೇ ತಿನ್ನುತ್ತಿದ್ದಿ? ಎಂದು ಚಕಾರವೆತ್ತುವುದಿಲ್ಲ. ಏಕೆಂದರೆ ಸಮಯ ಸಿಕ್ಕ ಕ್ಷಣ ತಾವೂ ಅದನ್ನೆ ತಾನೆ ಮಾಡುವುದು. ಈ ಕುಲಘಾತಕ ಕ್ರೌರ್ಯ ಇನ್ನೂ ಬೀಭತ್ಸ ಮಟ್ಟಕ್ಕೆ ಹೋಗುತ್ತದೆ.

× ×

ಫಾಬ್ರ್ ನಸುಕಿನಲ್ಲಿಯೆ ಎದ್ದು ಅಧ್ಯಯನ ಸಂಚಾರಕ್ಕೆ ಹೊರಟುಬಿಡುತ್ತಿದ್ದ. ನನ್ನೀ ಆವರಣದಲ್ಲೇ ನಾನು ಮತ್ತೆ ಮತ್ತೆ ಪ್ರದಕ್ಷಿಣೆ ಬರುತ್ತೇನೆ. ಅಲ್ಲಿ ಇಲ್ಲಿ ನಿಲ್ಲುತ್ತೇನೆ. ಅಷ್ಟು ದೂರ ಹೋಗಿ ಹಿಂದಿರುಗುತ್ತೇನೆ. ಅತ್ಯಂತ ಸಾವಧಾನವಾಗಿ ಪ್ರಶ್ನೆ ಹಾಕುತ್ತೇನೆ. ಯಾವ ಕಾಲಕ್ಕೋ ಒಂದು ತುಣುಕು ಉತ್ತರ ಬರುತ್ತದೆ. ಎಲ್ಲಿನ ಹಣ್ಣಿನ ಮರದ ಯಾವ ಕೊಂಬೆಯಲ್ಲಿ ಸೂರ್ಯ ಕುದುರೆ ಹುಳು ಕುಕ್ಕುರು ಕೂತಿದೆ; ಬೇಸಿಗೆಯ ನೀರವ ರಾತ್ರಿಗಳಲ್ಲಿ ಯಾವ ಪೊದೆಯಿಂದ ಇಟಲಿಯ ಮಿಡತೆ ತಾಳ ಹಾಕುತ್ತದೆ; ಯಾವ ಗಿಡದ ಕೊಂಬೆಯನ್ನು ಗೂಡು ಹೆಣೆಯುವ ಹತ್ತಿಗಾಗಿ ಕಾಡದುಂಬಿ ಕೆರೆಯುತ್ತದೆ: ಅತ್ಯಂತ ಸಣ್ಣ ಕೀಟಗಳ ಗ್ರಾಮ ಸಮುದಾಯ ಎಲ್ಲಿದೆ – ನಾನು ಪರಿಚಯಿಸಿ

ಕೊಂಡಿದ್ದೇನೆ.

× × ×

ಆಗಸ್ಟ್ ತಿಂಗಳು ಕೊನೆಯ ವೇಳೆಗೆ ಗಂಡಿಗೆ ಕೂಡಲು ಇದೀಗ ಸುಮುಹೂರ್ತ ಎನ್ನಿಸಿಬಿಡುತ್ತದೆ. ತನಗಿಂತ ದೊಡ್ಡ ಗಾತ್ರದ ಹೆಣ್ಣಿನ ಮೇಲೆ ಗಂಡು ಕತ್ತು ಕೊಂಕಿಸಿ ಎದೆ ಉಬ್ಬಿಸಿ ಕಣ್ಣಿಡುತ್ತದೆ. ಇದೇ ಭಂಗಿಯಲ್ಲಿ ಅಲ್ಲಾಡದೆ ಬಹು ಹೊತ್ತು ತನ್ನ ಮನದನ್ನೆಯ ಮೇಲೆ ಕಣ್ಣಿಟ್ಟರೂ ಆಕೆ ಮಾತ್ರ ಮಿಸುಕುವುದಿಲ್ಲ; ನಿರಾಸಕ್ತಳಂತೆ ತೆಪ್ಪನೆ ಇರುತ್ತಾಳೆ. ಪ್ರೇಮಪಾಶಕ್ಕೆ ಬಿದ್ದ ಗಂಡು ಸಮ್ಮತಿಯ ಸೂಚನೆಯನ್ನು ಹೇಗೆ ಕಂಡು ಕೊಳ್ಳುತ್ತದೋ ಆ ಸಂಜ್ಞೆಯ ಗುಟ್ಟು ಏನೆಂದು ನನಗೆ ಕಂಡು ಕೊಳ್ಳಲಾಗಿಲ್ಲ. ಪ್ರೇಮಿಯು ಬಳಿಸಾರಿ ತಟ್ಟನೆ ರೆಕ್ಕೆ ತೆರೆಯುತ್ತದೆ. ರೆಕ್ಕೆಗಳ ತಟಪಟ ಅದುರತೊಡಗುತ್ತವೆ. ಇದೇ ಗಂಡಿನ ಪ್ರೇಮಘೋಷ. ಸಣ್ಣ ಮೈಯ ಗಂಡು ಮುನ್ನುಗ್ಗಿ ಹೆಣ್ಣಿನ ಮೇಲೇರಿ ಸರಿಯಾದ ಪಟ್ಟು ಹಿಡಿದು ಮೈಗೆ ಮೈ ಅಂಟಿಸುತ್ತದೆ. ಈ ಕೂಡುವಳಿ ಬಹು ಹೊತ್ತು, ಕೆಲವು ವೇಳೆ ಐದಾರು ಘಂಟೆಗಳ ತನಕ ನಡೆದೇ ಇರುತ್ತದೆ. ಇಷ್ಟೂ ಸಮಯ ಒಡನಾಡಿಗಳಿಬ್ಬರೂ ಅಲುಗದಲೆ ಇರುತ್ತಾರಾಗಿ ಏನೂ ಜರುಗುತ್ತಿರುವಂತೆ ಕಾಣುವುದಿಲ್ಲ. ಕಡೆಗೊಮ್ಮೆ ಬೇರ್ಪಟ್ಟರೂ ಮತ್ತೊಮ್ಮೆ ಇಂಥದೇ ಕೂಡುವಳಿ ಜರುಗುತ್ತದೆ.

ಗಂಡು ತನ್ನ ಗರ್ಭದ ಅಂಡಗಳನ್ನು ಫಲಭರಿತನ್ನಾಗಿ ಮಾಡೇತ್ತಾನೆಂಬ ಒಂದೇ ಕಾರಣಕ್ಕೆ ಹೆಣ್ಣು ಆ ಒಡನಾಡಿಯನ್ನು ಇಚ್ಛಿಸುವುದಿಲ್ಲ. ಅದೇ ಹೊತ್ತೋ, ಇಲ್ಲ ಮಾರನೆ ದಿನವೋ ಆ ಗಂಡನ್ನು ಈಕೆ ಬರಸೆಳೆದದ್ದೇ ಯಥಾಕ್ರಮವಾಗಿ ಕತ್ತು ಕುಟುಕಿ ಬಾಯಿಗೆ ರುಚಿಗಟ್ಟುವ ಯಾವುದೇ ಬೇಟೆಯಂತೆ ತುತ್ತಾಗಿ ಭಕ್ಷಿಸಿಬಿಡುತ್ತಾಳೆ. ಹೊಟ್ಟೆ ಬಾಕತನದ ವಿನಾ ಈ ಭಕ್ಷಣಕ್ಕೆ ಅಂತಃ ಮಾನವ ಸ್ತ್ರೀಯರ ಹೊಟ್ಟೆ ಕಿಚ್ಚಿನ ಕಾರಣವಂತೂ ಅಲ್ಲ.

× ×

ಮಿತವಾದ ಉಪಾಹಾರ ಮುಗಿಸಿದೊಡನೆ ಫಾಬ್ರ್ ಚಿಪ್ಪಿನೊಳಗೆ ಹೊಕ್ಕಿಕೊಳ್ಳುವ ಶಂಖದ ಹುಳುವಿನಂತೆ ಪ್ರಯೋಗಶಾಲೆಯನ್ನು ಹೊಕ್ಕಿಬಿಡುತ್ತಿದ್ದ. ನೆಲಹಂಚು ಹಾಸಿದ್ದ ಉದ್ದನ್ನ ಈ ಕೊಠಡಿಯ ಮೇಜುಗಳ ಮೇಲೆ ಕೀಟಗಳನ್ನು ಸಾಕಿ ಬೆಳೆಸಲು ಇವನೇ ನಿಯೋಜಿಸಿ ತಯಾರಿಸಿದ್ದ ಗೂಡುಗಳು ಜಾಲರಿ ಜೋಣುಗಳು ಇರುತ್ತಿದ್ದವು. ಆಧುನಿಕ ಸಂಶೋಧಕ ಬಯಸುವ ಯಾವುದೇ ಸೌಲಭ್ಯ ಅವನ ಬಳಿ ಇದ್ದಿಲ್ಲ: ನಾನು ಅತ್ಯಂತವಾಗಿ ಬಳಸುವ ಉಪಕರಣಗಳೆಂದರೆ ಕಾಲ ಮತ್ತು ಸಂಯಮ ಎನ್ನುತ್ತಿದ್ದ. ಅಧ್ಯಯನ ಶೀಲ ಫಾಬ್ರ್ ಯಾವೊಂದು ಪ್ರಯೋಗವನ್ನು ನಿಶ್ಚಿತವಾಗುವ ವರೆಗೆ ಮರಳಿ ಮರಳಿ ಮಾಡುತ್ತಿದ್ದ. ಇವನ ತಾಳ್ಮೆ, ಕಷ್ಟಸಹಿಷ್ಣುತೆ ಅನನ್ಯ ಸಾಧಾರಣವಾದದ್ದು. ಪ್ರಯೋಗಶಾಲೆಯ ಮೇಜುಗಳ ಸುತ್ತ ಎಷ್ಟು ಓಡಾಡಿಬಿಟ್ಟಿದ್ದನೆಂದರೆ ಇವನ ರೈತನ ಒರಟು ಬೂಟುಗಳ ಕಾಲ್ತುಳಿತದಿಂದ ಗಟ್ಟಿ ನೆಲಹಂಚುಗಳಲ್ಲಿ ಹಾದಿಯನ್ನೇ ಸವೆಯಿಸಿಬಿಟ್ಟಿದ್ದ. ಒಂದು ಬಗೆಯ ಕಾಡುದುಂಬಿಗಳ ಜೀವನ ವಿಧಾನವನ್ನು ಅಧ್ಯಯನ ಮಾಡಲೋಸುಗ ಒಮ್ಮೆ ಕೊರಕಲೊಂದರ ಬಂಡೆಯ ಮೇಲೆ ನಿಶ್ಚಲ ಕೂತಿದ್ದನಂತೆ. ಮೂರು ಜನ ತೋಟದ ಹೆಣ್ಣಾಳುಗಳು ಇದೇ ಹಾದಿಯಲ್ಲಿ ಹೋದರು. ಹೋಗುತ್ತಾ ಎಂಥವನ್ನೋ ತದೇಕ ದೃಷ್ಟಿಯಿಂದ ನೋಡಿಕೊಂಡು ಕಲ್ಲ ಮೇಲೆ ಕುಳಿತಿದ್ದ ಮನುಷ್ಯನತ್ತ ನೋಡಿದರು. ಸಂಜೆಗೆ ಕೆಲಸ ಕೈಬಿಟ್ಟು ಮೇಲೆ ತಲೆ ಮೇಲೆ ಹೆಡಿಗೆಗಳನ್ನು ಹೊತ್ತುಕೊಂಡು ಅದೇ ದಾರಿಯಲ್ಲಿ ಹಿಂದಿರುಗಿದರು. ಅದೇ ಮನುಷ್ಯ ಅದೇ ಕಲ್ಲಿನ ಮೇಲೆ ಅದೇ ಜಾಗವನ್ನು ಅಷ್ಟೇ ಏಕಾಗ್ರತೆಯಿಂದ ನೋಡುತ್ತಾ ಕೂತಿದ್ದ. ಅವನ ನಿಶ್ಚಲ ಭಂಗಿ ನಿರ್ಜನವಾದ ಎಡೆಯಲ್ಲಿ ಅಷ್ಟು ಕಾಲ ಅವಿಚ್ಛಿನ್ನವಾಗಿ ಇದ್ದುಕೊಂಡಿದ್ದು ಅವರ ತಲೆಗೆ ತಟ್ಟಿರಬೇಕು. ನನ್ನನ್ನು ದಾಟಿ ಹೋಗುವಾಗ ಒಬ್ಬಳು ತಲೆ ಚಚ್ಚಿಕೊಂಡು ಇನ್ನೊಬ್ಬಳಿಗೆ ಹೀಗೆ ಪಿಸುಗುಟ್ಟಿದ್ದುದು ನನ್ನ ಗಮನಕ್ಕೆ ಬಂತು.

'ಅಯ್ಯೋ, ಬಡಪಾಯಿ! ಪಾಪ! ಪೆದ್ದ. ಅಷ್ಟಾಗಿ ತಲೆ ಸರಿಯಿಲ್ಲ. ಆದರೆ ಯಾರಿಗೂ ತೊಂದರೆ ಕೊಡುವವನಲ್ಲ.'

ತೀರ ಅಪರೂಪಕ್ಕೆ ಹೊರತು ಯಾರ ಸಂಪರ್ಕವನ್ನೂ ಇರಿಸಿಕೊಳ್ಳಲಿಚ್ಛಿಸದ ಫಾಬ್ರ್ ತಾನು ಬರೆದ ಕಾಗದಕ್ಕೆ ಉತ್ತರಿಸಲಿಲ್ಲವೇಕೆಂದು ಆಕ್ಷೇಪಿಸಿದ ಸ್ನೇಹಿತನಿಗೆ ಹೀಗೆ ತಿಳಿಸಿದ: ನಾನು ನನ್ನ ಹವ್ಯಾಸದ ಕುದುರೆಯನ್ನು ಏರಿಸಿದ್ದೇನೆ. ಇನ್ನೀಗ ಪ್ರತ್ಯುತ್ತರಗಳಿಗೆ ವಿದಾಯ, ಬೇರೆಲ್ಲವಕ್ಕೂ ವಿದಾಯ.

× × ×

ಗಂಡೊಂದರ ಪ್ರೇಮ ಪ್ರದರ್ಶನ, ಕೂಡುವಳಿ, ನಂತರ ಅದರ ಭಕ್ಷಣ ಇಷ್ಟರಿಂದ ಹೆಣ್ಣು ತೃಪ್ತಿ ಹೊಂದುವುದೇ ಇಲ್ಲ. ಸ್ವಲ್ಪ ಕಾಲ ವಿಶ್ರಮಿಸಿದ ನಂತರ, ಹೊಟ್ಟೆ ಇಳಿದ ಬಳಿಕ; ಇವಳು ಎರಡನೇ ಗಂಡನನ್ನು ಪ್ರೇಮಿಯಾಗಿ ಅಂಗೀಕರಿಸಿ ಮೊದಲಿನಂತೆ ತಿಂದು ಮುಗಿಸುತ್ತಾಳೆ. ಮೂರನೆಯವನು ಕೂಡ ತನ್ನ ಕೆಲಸ ಪೂರೈಸಿ ಹೆಣ್ಣಿನ ಹೊಟ್ಟೆ ಸೇರಿ ಮಾಯವಾಗುತ್ತಾನೆ. ನಂತರ ನಾಲ್ಕನೆಯವನ ಸರದಿ. ಎರಡು ವಾರಗಳ ಅವಧಿಯಲ್ಲಿ ಏಳು ಗಂಡುಗಳೊಡನೆ ಕೂಡುವಳಿ ನಡೆಸಿ ಸ್ವಾಹಾ ಮಾಡಿದ್ದನ್ನು ನಾನು ಕಂಡಿದ್ದೇನೆ.

ನನ್ನ ಗೂಡುಗಳಲ್ಲಿ ತಪ್ಪಿಸಿಕೊಂಡೋಡುವ ಎಡೆ ಇಲ್ಲದ್ದರಿಂದ ಇಂಥ ಕ್ರೂರ ಕೂಡುವಳಿ ನಡೆಯಬಹುದು. ಸುಲಭವಲ್ಲಿ ತಪ್ಪಿಸಿಕೊಳ್ಳಬಹುದಾದ ಬಯಲಿನ ಪೊದೆಗಳಲ್ಲಿ ಪ್ರಣಯ ಕಾರ್ಯ ಮುಗಿಸಿದೊಡನೆ ಗಂಡು ಹೆಣ್ಣೆಂಬ ರಕ್ಕಸಿಯ ಕೈ ತಪ್ಪಿಸಿಕೊಂಡುಬಿಡಬಹುದು ಎಂದು ಹೇಳಬೇಕೆನಿಸುತ್ತದೆ. ಬಯಲಿನ ಪೊದೆಗಳಲ್ಲಿ ಇವುಗಳ ಚರ್ಯೆ ಹೇಗೋ ಅದನ್ನು ಕಂಡುಕೊಳ್ಳುವ ಅವಕಾಶ ನನಗೆ ಒದಗಿಬರಲಿಲ್ಲ. ಆಹಾರ, ಬಿಸಿಲು ಮತ್ತು ಓಡಿಯಾಡುವ ಎಡೆಗಳ ವಿಪುಲ ಸೌಕರ್ಯ ಇರುವ ನನ್ನ ಗೂಡುಗಳಲ್ಲಿ ಈ ಬಂದಿಗಳು ಹೇಗೆ ನಡೆದುಕೊಳ್ಳುತ್ತವೋ ಇದನ್ನು ಆಧರಿಸಿ ಹೇಳಬಲ್ಲೆನಾದರೆ ಇಲ್ಲಿ ಹೇಗೆ ಆಚರಿಸುತ್ತೇವೆಯೋ ಅಲ್ಲಿಯೂ ಸಾಧಾರಣವಾಗಿ ಹಾಗೆಯೇ ಆಚರಿಸುತ್ತವೆ. ಆದರೆ ಅಲ್ಲಿ ಕೂಡ ಗಂಡುಗಳಿಗೆ ತಪ್ಪಿಸಿಕೊಳ್ಳುವ ಅವಕಾಶ ಉಂಟು ಎಂಬ ಕಲ್ಪನೆಯೇ ಸರಿಯಲ್ಲ ಎನ್ನಿಸಿಬಿಡುತ್ತದೆ.

ನಾನೊಮ್ಮೆ ಜೋಡಿಯೊಂದು ಕೂಡುವಳಿ ಕೇಳಿಯಲ್ಲಿ ತೊಡಗಿದ್ದುದನ್ನು ಕಂಡೆ. ಮೈಥುನ ಕಾರ್ಯದಲ್ಲಿ ತೀರ ಮಗ್ನವಾಗಿದ್ದ ಗಂಡು ಹೆಣ್ಣನ್ನು ಗಟ್ಟಿಯಾಗಿ ತಬ್ಬಿ ಹಿಡಿದಿತ್ತು. ಆದರೆ ಆ ಬಡಪಾಯಿಗೆ ತಲೆಯೇ ಇರಲಿಲ್ಲ; ಸಂಗಾತಿ ಹೆಣ್ಣು ತಲೆಯನ್ನು ಬಾಗಿಸಿ ಬಾಗಿಸಿ ಗಂಡಿನ ದೇಹದ ಉಳಿದುಳಿದ ಭಾಗಗಳನ್ನು ಆರಾಮವಾಗಿ ಕಬಳಿಸುತ್ತಿತ್ತು. ಆದಾಗ್ಯೂ ಗಂಡಿನ ಅಳಿದುಳಿದ ಅವಶೇಷ ಹೆಣ್ಣನ್ನಂಟಿಕೊಂಡು ಸಂತಾನ ವ್ಯವಹಾರವನ್ನು ಮುಂದುವರಿಸಿಕೊಂಡಿತ್ತು! ತಲೆಯೇ ಇಲ್ಲದ ರುಂಡದ ಬಹುಭಾಗ ಇಲ್ಲವಾಗಿ ಬಿಟ್ಟು ಸಾಯಹೊರಟ ಈ ಅವಶೇಷ ಜೀವವನ್ನು ಕೊಡಲು ಹೆಣಗುತ್ತಿತ್ತು. ಜನನೇಂದ್ರಿಯಗಳನ್ನು ತಿನ್ನುವ ವರೆಗೂ ತನ್ನ ಪಟ್ಟನ್ನು ಗಂಡು ಬಿಟ್ಟುಕೊಡದು. ಸಾವಿಗಿಂತ ಪ್ರೇಮ ಶಕ್ತ ಎನ್ನುತ್ತಾರೆ. ಈ ಉದಾಹರಣೆಗಿಂತ ಘನವಾದ ಅನುಮೋದನೆ ಖಂಡಿತ ಸಿಗಲಾರದು.

ಅಂಗಸಂಗ ಮುಗಿಸಿ ಸುಸ್ತು ಬಡಿದ, ಗಾತ್ರದಲ್ಲಿ ತನಗಿಂತ ಕುಬ್ಜವಾದ ಪ್ರೇಮಿಯನ್ನು ಕಬಳಿಸಿಬಿಡುವುದು ಮುಂದೆ ಇನ್ನು ಯಾವುದೇ ಉಪಯೋಗಕ್ಕೆ ಬರದವರನ್ನು ನಿಸೂರು ಮುಗಿಸಿಬಿಡುವ ಪರಿಪಾಠವುಳ್ಳ ಕೀಟಲೋಕಕ್ಕೆ ಭಾವೋದ್ರೇಕಗೊಳಿಸುವ ಸಂಗತಿಯಲ್ಲ; ಆದರೆ ಇನ್ನೂ ಮೈಥುನಕಾರ್ಯ ಜರುಗುತ್ತಿದ್ದಾಗಲೇ ಕಬಳಿಸತೊಡಗುವುದನ್ನಂತೂ ಎಂಥ ಕಟುಕನ ಚಿತ್ತವೂ ಕನಸಿನಲ್ಲಿಯೂ ಕಲ್ಪಿಸಿಕೊಳ್ಳಲಾರದು. ನನ್ನ ಕಣ್ಣೆದುರಿಗೇ ಜರುಗಿದ ಈ ಘಟನೆಯಿಂದ ಪಟ್ಟ ಅಚ್ಚರಿಯಿಂದ ನಾನಿನ್ನೂ ಚೇತರಿಸಿಕೊಂಡಿಲ್ಲ.

× × ×

ಮಾರ್ಗದರ್ಶಕರೆ ಸಹಾಯಕರೆ ಆಕರ ಗ್ರಂಥ

ಗಳೆ ಇಲ್ಲದೆಲೆ ಒಂಟಿಯಾಗಿ ಸತತವಾಗಿ ೧೯೦೭ರ ವರೆಗೆ ಕೀಟಗಳೊಡನೆ ಒಡನಾಡಿಕೊಂಡು ಅಧ್ಯಯನ ಮಾಡಿದ ಫಾಬ್ರ್ ಹತ್ತು ಸಂಪುಟಗಳಷ್ಟು ದೊಡ್ಡದಾದ ಕೀಟಶಾಸ್ತ್ರ ಗ್ರಂಥವನ್ನು ರಚಿಸಿದ. ಯಾವ ಆಡಂಬರವೇ ಮುದ್ರಣದ ಬೇಡಗೇ ವಿಜ್ಞಾನ ಬಲ್ಲಿದರ ಭಾಷೆಯೇ ಇಲ್ಲದ ಈ ಗ್ರಂಥಗಳು ಕೊನೆಗಾಲದ ವರೆಗೆ ಪ್ರಸಿದ್ಧಿಗೆ ಬರಲಿಲ್ಲ. ಬದಲಿಗೆ ಸರಳ ಭಾಷೆ, ಆ ಕಾಲದ ವಿಜ್ಞಾನಕ್ಕೆ ಅಶಿಷ್ಟ ಎನ್ನಿಸುವ ಸಂಭಾಷಣೆಗಳು, ವೈಯಕ್ತಿಕಾಂಶಗಳು ಈ ಗ್ರಂಥಗಳಿಗೆ ಟೀಕೆ, ಅನಾದರಣೆಗಳನ್ನೇ ತಂದೊಡ್ಡಿದುವು. ಇದರಿಂದೇನೂ ಫಾಬ್ರ್ ಎದೆಗೆಡಲಿಲ್ಲ. ಹಾಡುವ ಹಾರುವ ಚುಚ್ಚುಕೊಂಡಿಯುಳ್ಳ ಕೀಟಗಳಿರಾ, ನೀವೇ ನನ್ನ ಪರವಾಗಿ ವಕೀಲಿ ನಿಂತು ಅವರಿಗೆಲ್ಲಾ ಹೇಳಿ. ನಾನು ನಿಮ್ಮೊಡನೆ ಎಷ್ಟು ಆತ್ಮೀಯವಾಗಿ ಬೆರೆತು ನಡೆನುಕೊಳ್ಳುತ್ತೇನೆ. ಎಷ್ಟು ಕಾಲ ಎಷ್ಟು ಸಂಯಮದಿಂದ ಅಧ್ಯಯನ ಮಾಡಿ ನಿಮ್ಮ ಪ್ರತಿ ಚರ್ಯೆಯನ್ನೂ ಎಷ್ಟು ಕರಾರುವಾಕ್ಕಾಗಿ ಬರಹಕ್ಕಿಡುತ್ತೇನೆ... ನನ್ನ ಬದಲಿಗೆ ಯಾರೇ ಯಾವಾಗಲೇ ಇವೇ ಪ್ರಶ್ನೆ ಹಾಕಿದಲ್ಲಿ ಅವೇ ಉತ್ತರ ಪಡೆಯುತ್ತಾರೆ; ತಿಳಿಸಿಕೊಡಿ, ನಿಮ್ಮ ಮಾತುಗಳಿಗೆ ವಿಜ್ಞಾನದ ಆಡಂಬರವೇ ತೂಕವೇ ಇಲ್ಲವಾದ್ದರಿಂದ ನಾನೇ ಅವರಿಗೆ ತಿಳಿಸುತ್ತೇನೆ; ನಾನು ಪ್ರಾಣಿಗಳ ಅಧ್ಯಯನವನ್ನು ಬದುಕಿರುವಾಗಲೇ ಮಾಡಿದರೆ ನೀವು ಕತ್ತರಿಸಿ ನೋಡುತ್ತೀರಿ. ನಿಮ್ಮ ದೃಷ್ಟಿಕೋಣ ಕ್ರೌರ್ಯ ಮತ್ತು ಭಯ ಇವುಗಳಿಂದ ಕೂಡಿದ್ದು. ನಾನವನ್ನು ಪ್ರೀತಿಯಿಂದ ಕಾಣುತ್ತೇನೆ. ನೀಲಗಗನದಡಿ ತಿತ್ತಿರಿ ಹುಳುಗಳ ಹಾಡನ್ನು ಕೇಳುತ್ತಾ ನಾನು ಅಧ್ಯಯನ ಮಾಡಿದರೆ ನೀವು ಅವುಗಳ ಜೀವ ಕಣಗಳನ್ನು ರಾಸಾಯನಿಕ ಪ್ರಯೋಗಗಳಿಗೆ ಒಳಪಡಿಸುತ್ತೀರಿ. ನೀವು ಸಾವನ್ನು ಬಗೆದು ಹೋದರೆ ನಾನು ಜೀವನವನ್ನು ಒಳಹೊಕ್ಕು ನೋಡುತ್ತೇನೆ.

ಕಡೆಯ ಗ್ರಂಥವನ್ನು ರಚಿಸಿ ಮೂರು ವರ್ಷಗಳಾದ ಮೇಲೆ ಎಂಭತ್ತೇಳರ ಮುಪ್ಪಿನಲ್ಲಿದ್ದಾಗ ಹೆಸರು, ಹೆಗ್ಗಳಿಕೆ, ದೊಡ್ಡ ಪ್ರತಿಷ್ಠೆಯುಳ್ಳ ವೈಜ್ಞಾನಿಕ ಸಂಸ್ಥೆಗಳ ಸದಸ್ಯತ್ವಗಳು ಇವನನ್ನು ಅರಸಿಕೊಂಡು ಇವನಿದ್ದ ಕೊಂಪೆ ಮೂಲೆಯ ಹಳ್ಳಿಗೆ ಬಂದವು. ಇವನ ಪ್ರತಿಮೆ ಅನಾವರಣವಾಯಿತು. ಫ್ರಾನ್ಸಿನ ರಾಷ್ಟ್ರಾಧ್ಯಕ್ಷನೇ ಇವನಿದ್ದಲ್ಲಿಗೆ ಬಂದ.

ಬಾಳಿನ ಪೂರ್ವದಲ್ಲೆಲ್ಲಾ ನನ್ನನ್ನು ಪಟ್ಟು ಹಿಡಿದಿದ್ದ ಶೋಧಕನ ಬಿಸಿ /ಉತ್ಸಾಹಗಳು ಇನ್ನೂ ಇದ್ದೇ ಇದೆ. ಕೆಲಸ ಮಾಡಲಾಗದಂತೆ ಕೈ ಕಾಲುಗಳೂ ಕಣ್ಣೂ ಸೋತಿರದಿದ್ದರೆ ನಾನು ಅಂದಿಗೆ ಕಡಿಮೆ ಇಲ್ಲದಂತೆ ಇಂದೂ ದುಡಿಯುತ್ತಿದ್ದೆ– ಎಂದು ಎಂಭತ್ತೆಂಟನೆಯ ವಯಸ್ಸಿನಲ್ಲಿ ಬರೆದ. ಗಮನಿಸದಿದ್ದಲ್ಲಿ ಕ್ಷುಲ್ಲಕ ಎಂದು ತೋರಿಕೊಂಡುಬಿಡುವ, ಗಮನಿಸಿದೊಡನೆ ಗಂಭೀರವೂ ಗಹನವೂ ಆಗಿಬಿಡುವ ಕೀಟಗಳ ಜೀವನ ಸಾಧಾರಣ ರೂಪದಲ್ಲಿರುವ ವೈಚಿತ್ರ್ಯಗಳನ್ನೂ ಹುದುಗಿರುವ ಗೋಪ್ಯಗಳನ್ನೂ ಕಂಡುಕೊಳ್ಳುವ ಒಂದೇ ಒಂದು ಹಂಬಲಕ್ಕಾಗಿ ತನ್ನ ಇಡಿಯ ಆಯುಷ್ಯವನ್ನೆ ಸವೆಯಿಸಿದ ಕೀಟ ಋಷಿ, ಫಾಬ್ರ್ ೧೯೧೫ರಲ್ಲಿ ಕೊನೆಯುಸಿರೆಳೆದ.

**ಗ್ರಂಥಋಣ: ಈ. ಡಬ್ಲ್ಯು. ಟೀಲ್ ಅವರು ಸಂಪಾದಿಸಿದ 'ದಿ ಇನ್‌ಸೆಕ್ಟ್ ವರ್ಲ್ಡ್ ಆಫ್ ಜೆ. ಹೆನ್ರಿ ಫಾಬ್ರ್.'**



**ಹೆವಿವೇಟ್ ಚಾಂಪಿಯನ್ ಜೋ ಫ್ರೇಜರ್‌ನಿಗೆ ವಾದ್ಯ-ಸಂಗೀತದ ಹವ್ಯಾಸ. ಅದರಲ್ಲಿ ಪರಿಣತ ಕೂಡ. ಕೆಲವು ವಾದಕರದೊಂದು ತಂಡವನ್ನಾತ ಕಟ್ಟಿದ. ತಂಡಕ್ಕೇನು ಹೆಸರು? 'ನಾಕ್ ಔಟ್ಸ್!'**

ವೆಂಕಟೇಶ ಶೇಟ, ಮಲ್ಲಿಗೇನಹಳ್ಳಿ

ಪ್ರಜಾಪ್ರಭುತ್ವ ನಮಗೆ ಒಗ್ಗುವುದಿಲ್ಲ ಎಂದವರಾರು ?

# ಪ್ರಾಚೀನ ಭಾರತದಲ್ಲಿ ಪ್ರಜಾಸತ್ತೆ

ಸುಮಾರು ೨೫೦೦ ವರ್ಷಗಳ ಹಿಂದೆ ಪ್ರಾಚೀನ ಭಾರತದಲ್ಲಿ ಅನೇಕ ಸಣ್ಣ ಸಣ್ಣ ರಾಜ್ಯಗಳಿದ್ದವು. ಇವುಗಳಲ್ಲಿ ಕೆಲವು ರಾಜಸಂತತಿಗಳ ಆಳ್ವಿಕೆಗೆ ಒಳಪಟ್ಟಿದ್ದರೆ ಇನ್ನು ಕೆಲವು ಗಣತಂತ್ರಾತ್ಮಕವಾಗಿದ್ದವು. —ರಾಜ ದರ್ಬಾರದ ಸ್ಥಾನವನ್ನು ಗಣತಂತ್ರಾತ್ಮಕ ರಾಜ್ಯಗಳ ಸಂಥಾಗಾರಗಳು ಹೊಂದಿದ್ದವು. ಈ ಸಂಥಾಗಾರ(ಸಂಸ್ಥಾ + ಆಗಾರ)ಗಳು ಆ ಕಾಲದ ಸಂಸತ್ ಅಥವಾ ಪಾರ್ಲಿಮೆಂಟುಗಳೆನಿಸಿದ್ದವು. ಅನೇಕ ಮಹತ್ವದ ರಾಜಕೀಯ ವಿಚಾರಗಳ ಬಗ್ಗೆ ಚರ್ಚೆ ನಡೆದು ತೀರ್ಮಾನಗಳನ್ನು ಕೈಗೊಳ್ಳುವುದು, ಮಂತ್ರಿಮಂಡಳಗಳ ಸಭೆ ಆಡಳಿತದ ನೀತಿ ನಿಯಮಗಳ ನಿರೂಪಣೆ ಉನ್ನತ ಅಧಿಕಾರಿಗಳ ನೇಮಕ, ಹೊಸ ಸದಸ್ಯರುಗಳು ಹಾಗೂ ಗಣಪ್ರಧಾನ ಅಥವಾ ಅಧ್ಯಕ್ಷರುಗಳ ನೇಮಕ ಇತ್ಯಾದಿಗಳೆಲ್ಲ ಸಂಥಾಗಾರರಗಳಲ್ಲಿಯೇ ನಡೆಯುತ್ತಿದ್ದವು.

ಬೌದ್ಧ ಸಾಹಿತ್ಯದಲ್ಲಿ ಉಲ್ಲೇಖಿಸಲಾಗಿರುವ ಗಣರಾಜ್ಯಗಳಲ್ಲಿ ಪ್ರಮುಖವಾದವುಗಳೆಂದರೆ ವೈಶಾಲಿಯ ಲಿಚ್ಛವಿ, ಕಪಿಲವಸ್ತುವಿನ ಶಾಖ್ಯ ಅದರಂತೆ ಪಾವಾ ಮತ್ತು ಕುಶೀನಗರದ ಮಲ್ಲರು ಮುಖ್ಯರಾಗಿದ್ದರು. ಸಣ್ಣ ಸಣ್ಣ ರಾಜ್ಯಗಳಲ್ಲಿ ಕೇವಲ ಒಂದೇ ಸಂಥಾಗಾರವಿದ್ದರೆ ಲಿಚ್ಛವೀ ಹಾಗೂ ಶಾಖ್ಯ ಮುಂತಾದ ದೊಡ್ಡ ಗಣರಾಜ್ಯಗಳಲ್ಲಿ ಕೇಂದ್ರೀಯ ಗಣರಾಜ್ಯದ ಹೊರತಾಗಿ ಪ್ರಾಂತೀಯ ಸಂಥಾಗಾರಗಳು ಇದ್ದವು. ಇವು ಪ್ರಾಂತಗಳ ಆಡಳಿತವನ್ನು ನಿರ್ವಹಿಸುತ್ತಿದ್ದವು.

ಈ ಸಂಥಾಗಾರಗಳು ಒಂದು ಪ್ರಕಾರದ ಸಂಸತ್ ಭವನಗಳಾಗಿದ್ದವು. ಸಂಥಾಗಾರಗಳು ಹೊಸದಾಗಿ ರೂಪುಗೊಂಡಾಗ ಈಗಿನಂತೆ ಗೌರವಾನ್ವಿತ ವ್ಯಕ್ತಿಯೊಬ್ಬರಿಂದ ಅದನ್ನು ಉದ್ಘಾಟಿಸುವ ಪರಿಪಾಠವೂ ಇತ್ತು. 'ದಿಗ್ಧನಿಕಾಯ'ದ ಸಂಗೀತ ಸುತ್ತದ ಅನುಸಾರ ಮಲ್ಲರ ಹೊಸ ಸಂಥಾಗಾರದ ಉದ್ಘಾಟನೆ ಬುದ್ಧನಿಂದ ನೆರವೇರಿಸಲ್ಪಟ್ಟಿತ್ತು. ಮಜ್ಝಿಮ

ನಿಕಾಯ ಹಾಗೂ ಸಂಯುಕ್ತ ನಿಕಾಯದಲ್ಲಿ ಉಲ್ಲೇಖಿಸಲ್ಪಟ್ಟಿರುವಂತೆ ಶಾಖ್ಯರ ಹೊಸ ಸಂಥಾಗಾರದ ಉದ್ಘಾಟನೆಯನ್ನು ಬುದ್ಧನು ಒಂದು ಆಖ್ಯಾನ ಮಾಲೆಯ ಮೂಲಕ ನೆರವೇರಿಸಿದ್ದನು.

ಭಿನ್ನ ಭಿನ್ನ ಗಣರಾಜ್ಯಗಳ ಸಂಥಾಗಾರಗಳಲ್ಲಿ ಸದಸ್ಯರುಗಳ ಸಂಖ್ಯೆ ಭಿನ್ನ ಭಿನ್ನವಾಗಿರುತ್ತಿತ್ತು. ವೈಶಾಲಿಯ ಸಂಥಾಗಾರದಲ್ಲಿ ೭೭೦೭ ಸದಸ್ಯರುಗಳಿದ್ದರು. ಇವರು ಲಿಚ್ಛವೀ ವಂಶದ ಮೂಲ ಕುಟುಂಬಗಳಿಂದ ಆಯ್ಕೆಯಾಗುತ್ತಿದ್ದರು. ಅವರೆಲ್ಲ ತಮ್ಮನ್ನು ರಾಜರೆಂದು ಕರೆದುಕೊಳ್ಳುತ್ತಿದ್ದರು. ಪರಸ್ಪರರಲ್ಲಿ ಚಿಕ್ಕವರು ದೊಡ್ಡವರೆಂಬ ಭೇದಭಾವವಿರಲಿಲ್ಲ. ವಿವಿಧ ಹುದ್ದೆಗಳಿಗೆ ರಾಜಗಣವನ್ನು ಸಂಥಾಗಾರಗಳೇ ನೇಮಿಸುತ್ತಿದ್ದವು. ಅವರ ಆಯ್ಕೆ ನೇಮಕಗಳನ್ನು ಸಂಥಾಗಾರಗಳಲ್ಲಿಯೇ ಮಾಡಲಾಗುತ್ತಿತ್ತು.

ವೈಶಾಲಿ ನಗರದ ಜನಸಂಖ್ಯೆ ಲಕ್ಷದಷ್ಟಿದ್ದರೂ ಕೇವಲ ೭೭೦೭ ಶ್ರೇಷ್ಠ ಪರಿವಾರಗಳಿಂದ ಮಾತ್ರ ಸಂಥಾಗಾರದ ಸದಸ್ಯರು ಚುನಾಯಿಸಲ್ಪಡುತ್ತಿದ್ದರು. ಆಡಳಿತದ ಅಧಿಕಾರ ಕೇವಲ ಕುಲೀನ ಪರಿವಾರದವರ ಕೈಯಲ್ಲಿತ್ತು. ಆಡಳಿತವನ್ನು ನಿರ್ವಹಿಸಲು ಯೋಗ್ಯರೂ, ದಕ್ಷರೂ, ಸಚ್ಚಾರಿತ್ರ್ಯವುಳ್ಳವರೂ ಆದವರನ್ನು ಮಾತ್ರ ಆಯ್ಕೆ ಮಾಡಲಾಗುತ್ತಿತ್ತು. ಅಂಥವರು ಪ್ರತಿನಿಧಿ ರಾಜಾ ಎಂದು ಕರೆಯಲ್ಪಡುತ್ತಿದ್ದರು. ಹಾಗೂ ಅವರ ಸಭೆಗಳು ಸಂಥಾಗಾರಗಳಲ್ಲಿಯೇ ನಡೆಯುತ್ತಿದ್ದವು. ಶಾಖ್ಯರ ಸಂಥಾಗಾರವು ಹಲವಾರು ಸ್ತಂಭಗಳ ಒಂದು ವಿಶಾಲ ಭವನದಲ್ಲಿ ಸೇರುತ್ತಿತ್ತು. ಮಹಾವಸ್ತುವು ಹೇಳುವಹಾಗೆ ಸಂಥಾಗಾರದಲ್ಲಿ ೫೦೦ ಸದಸ್ಯರುಗಳಿದ್ದರು.

ಪ್ರತ್ಯೇಕ ಗಣರಾಜ್ಯಕ್ಕೆ ಒಂದು ನಾಯಕ ಸ್ಥಾನವಿರುತ್ತಿತ್ತು. ನಾಯಕನನ್ನು ಅಧ್ಯಕ್ಷ ಗಣಮುಖ್ಯ ಅಥವಾ ಜೇಟ್ಟಕ ಎಂದು ಕರೆಯುತ್ತಿದ್ದರು. ಸಂಥಾಗಾರದ ನಾಯಕನೇ ರಾಜ್ಯದ ಪ್ರಧಾನ ಅಥವಾ ರಾಷ್ಟ್ರಪತಿಯಾಗುವ ಸಂಭವ ಹೆಚ್ಚಾಗಿತ್ತು. ಒಂದು ನಿರ್ದಿಷ್ಟ ಅವಧಿಗೆ ಚುನಾವಣೆಯ ಮೂಲಕ ಅಧ್ಯಕ್ಷರ ನೇಮಕವಾಗುತ್ತಿತ್ತು. ಮಹಾತ್ಮಾ ಬುದ್ಧನ ಕಾಲದಲ್ಲಿ ಚೇಟಕನು ವೈಶಾಲಿ ಗಣರಾಜ್ಯದ ಪ್ರಧಾನನಾಗಿ ನೇಮಕನಾಗಿದ್ದನು. ಮಹಾವೀರನ ತಾಯಿ ತ್ರಿಶಲಾ ಆತನ ಸೋದರಿಯಾಗಿದ್ದಳು. ಗೌತಮ ಬುದ್ಧನ ತಂದೆ ಶುದ್ಧೋದನ ಸ್ವತಃ ಶಾಖ್ಯ ಪರಿಷತ್ತಿನ ಅಧ್ಯಕ್ಷನಾಗಿದ್ದನು. ಶಾಖ್ಯ ಸಂಥಾಗಾರದ ಅಧ್ಯಕ್ಷರನ್ನು ರಾಜಾ ಎಂದು ಕರೆಯಲಾಗುತ್ತಿತ್ತು.

ಸಂಥಾಗಾರಗಳು ರಾಜ್ಯದ ಎಲ್ಲಕ್ಕಿಂತ ದೊಡ್ಡ ಸಂಸ್ಥೆಗಳಾಗಿದ್ದವು. ಇವುಗಳ ಕಾರ್ಯಕ್ಷೇತ್ರ ಬಹಳ ವ್ಯಾಪಕವಾಗಿತ್ತು. ಅಧ್ಯಕ್ಷರು ಮತ್ತು ಸದಸ್ಯರ ಚುನಾವಣೆ, ಉನ್ನತ ಅಧಿಕಾರಿಗಳ ನೇಮಕ, ಯುದ್ಧ, ಸಂಧಿ ಹಾಗೂ ಇತರ ರಾಜನೀತಿಗೆ ಸಂಬಂಧಿಸಿದ ಸಮಸ್ಯೆಗಳ ಸಮಾಧಾನ, ಅಪತ್ ಸ್ಥಿತಿಯ ಬಗ್ಗೆ ವಿಚಾರ ವಿಮರ್ಶೆ, ಆಡಳಿತದ ನೀತಿ ನಿರ್ಧಾರ ಮೊದಲಾದ ಕಾರ್ಯಗಳನ್ನು ಸಂಥಾಗಾರಗಳು ನಿರ್ವಹಿಸುತ್ತಿದ್ದವು.

ರಾಜನೈತಿಕ ಅಧಿವೇಶನಗಳು ಹಾಗೂ ಮಂತ್ರಿ ಮಂಡಳಗಳ ಸಭೆಗಳ ಹೊರತಾಗಿ ಈ ಸಂಥಾಗಾರಗಳಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಗೋಷ್ಠಿಗಳನ್ನು ಆಯೋಜಿಸಲಾಗುತ್ತಿತ್ತು. ಸಂಯುಕ್ತ ನಿಕಾಯದ ಅನುಸಾರ ಶಾಖ್ಯರ ಹೊಸ ಸಂಥಾಗಾರದಲ್ಲಿ ಒಂದು ಹೊಸ ಆಖ್ಯಾನ ಮಾಲೆಯನ್ನು ಆಯೋಜಿಸಲಾಗಿತ್ತು. ಅದನ್ನು ಗೌತಮ ಬುದ್ಧನು ಉದ್ಘಾಟಿಸಿದ್ದನು. ಬುದ್ಧನು ನಿರ್ವಾಣ ಹೊಂದಿದ ಸುದ್ದಿ ಶಾಲವನದಿಂದ ಕುಶೀನಗರವನ್ನು ತಲುಪಿದಾಗ ಮಲ್ಲರು ತಮ್ಮ ಸಂಥಾಗಾರದಲ್ಲಿ ಸಭೆ ಸೇರಿದ್ದರು. ನಂತರ ಬುದ್ಧನ ಅಂತಿಮ ಸಂಸ್ಕಾರವನ್ನು ಹೇಗೆ ನಡೆಸಬೇಕೆಂಬುದನ್ನು ನಿರ್ಧರಿಸಲು ಅವರು ಪುನಃ ಸಂಥಾಗಾರದಲ್ಲಿ ಸಭೆ ಸೇರಿದ್ದರು.

ವಸ್ತುತಃ ಈ ಸಂಥಾಗಾರಗಳು ವಿಧಾನ ಸಭೆ, ವ್ಯವಸ್ಥಾಪಕ ಸಭೆ, ಕಾರ್ಯಪಾಲಕ ಸಭೆ, ನ್ಯಾಯಪಾಲಕ ಸಭೆ ಹೀಗೆ ಎಲ್ಲ ಪಾತ್ರ

ವನ್ನೂ ನಿರ್ವಹಿಸುತ್ತಿದ್ದವು. ರಾಜದರ್ಬಾರುಗಳಲ್ಲಿಯಂತೆ ಸಂಥಾಗಾರಗಳಲ್ಲಿ ಅನೇಕ ವಿವಾದಗಳ ಬಗ್ಗೆ ನ್ಯಾಯ ತೀರ್ಮಾನ ಮಾಡಬೇಕಾಗುತ್ತಿತ್ತು. ಸಂಥಾಗಾರಗಳು ಸರ್ವೋಚ್ಚ ನ್ಯಾಯಾಲಯಗಳ ಕೆಲಸವನ್ನು ನಿರ್ವಹಿಸುತ್ತಿದ್ದವು. ವೈಶಾಲಿ ಗಣರಾಜ್ಯದ ನ್ಯಾಯವ್ಯವಸ್ಥೆಯು ಅತ್ಯಂತ ಶ್ರೇಷ್ಠಮಟ್ಟದ್ದಾಗಿತ್ತು. ಅಲ್ಲಿ ಅನೇಕ ದರ್ಜೆಯ ನ್ಯಾಯಾಲಯಗಳಿದ್ದವು. ಅವುಗಳೆಂದರೆ ಕ್ರಮವಾಗಿ ವಿನಿಶ್ಚಯ, ಮಹಾಮಾತ್ರ, ವೋಹಾರಿಕ (ವ್ಯವಹಾರಿಕ) ಹಾಗೂ ಸೂತ್ರಧರ ಇವೆಲ್ಲವುಗಳಲ್ಲೂ ನಡೆದು ತೀರ್ಮಾನವಾಗದ ಮೊಕದ್ದಮೆಗಳು ಅಟ್ಠಕುಲಕ ವೆಂಬ ನ್ಯಾಯಪೀಠದ (ಜ್ಯೂರಿ) ಮುಂದೆ ವಿಚಾರಣೆಗೆ ಬರುತ್ತಿದ್ದವು. ಇದರ ಮೇಲಿನ ದರ್ಜೆಗಳೆಂದರೆ ಸೇನಾಪತಿ, ಉಪರಾಜ ಹಾಗೂ ಕೊನೆಯಲ್ಲಿ ರಾಜ ಅಥವಾ ಅಧ್ಯಕ್ಷರೆಂಬ ನ್ಯಾಯಾಲಯಗಳಿದ್ದವು.

ನಿರ್ದೋಷಿಗಳನ್ನು ಮುಕ್ತಗೊಳಿಸುವ ಅಧಿಕಾರ ಎಲ್ಲ ನ್ಯಾಯಾಲಯಗಳಿಗೂ ಇತ್ತು. ಆದರೆ ದೋಷಿಗಳೆಂದು ತೀರ್ಮಾನಿಸಲ್ಪಟ್ಟ ಅಧಿಕಾರಿಗಳಿಗೆ ದಂಡ ಅಥವಾ ಶಿಕ್ಷೆ ವಿಧಿಸುವ ಅಧಿಕಾರ ಕೇವಲ ರಾಜನ ಸರ್ವೋಚ್ಚ ನ್ಯಾಯಾಲಯಕ್ಕೆ ಮಾತ್ರವಿತ್ತು. ರಾಜನೂ ಮನಸ್ಸಿಗೆ ಬಂದಂತೆ ಶಿಕ್ಷೆಯನ್ನು ವಿಧಿಸುತ್ತಿರಲಿಲ್ಲ. ಅಪರಾಧ, ಅಪರಾಧಿಯ ವಯಸ್ಸು, ಆತನ ಸಾಮಾಜಿಕ ಸ್ಥಿತಿ ಹಾಗೂ ಮಾನಸಿಕ ಸ್ಥಿತಿ ಮುಂತಾದವುಗಳನ್ನು ಗಮನದಲ್ಲಿಟ್ಟುಕೊಂಡು ಪವೇಣಿ ಪೋತ್ಥಕ (ಪ್ರವೀಣಾ ಪುಸ್ತಕ ಅಥವಾ ವಿಧಾನ ಸಂಹಿ-ತೆಯ) ಆಧಾರದ ಮೇಲೆ ಶಾಸ್ತ್ರಾನುಕೂಲವಾಗಿ ಶಿಕ್ಷೆವಿಧಿಸುತ್ತಿದ್ದನು. ಈ ರೀತಿ ವೈಶಾಲಿ ರಾಜ್ಯದಲ್ಲಿ ಯಾವುದೇ ನಿರಪರಾಧಿ ವ್ಯಕ್ತಿಯು ಶಿಕ್ಷೆಗೊಳಗಾಗುವುದು ಅಸಂಭವವಾಗಿತ್ತು.

ಸಂಥಾಗಾರಗಳ ಸಭೆಗಳು ಆಧುನಿಕ ಸಂಸತ್ತಿಗೆ ಯಾವುದೇ ರೀತಿಯಲ್ಲಿ ಕಡಿಮೆಯಿಲ್ಲದಂತೆ ವ್ಯವಸ್ಥಿತವಾಗಿರುತ್ತಿದ್ದವು. ಸಂಥಾಗಾರದಲ್ಲಿ ಸಭೆಯ ಕಾರ್ಯಕಲಾಪ ಸೂಚನೆ ಮತ್ತು ಸಂಚಾಲನೆಗಾಗಿ ಅನೇಕ ಅಧಿಕಾರಿಗಳು ಹಾಗೂ ಸಿಬ್ಬಂದಿಗಳು ನಿಯಮಿಸಲ್ಪಡುತ್ತಿದ್ದರು. ಸದಸ್ಯರುಗಳು ನಿಶ್ಚಿತ ಸಂಖ್ಯೆಯಲ್ಲಿ ಹಾಜರಾಗುವ ವರೆಗೆ (ಕೋರಂ ಇಲ್ಲದೆ) ಅಲ್ಲದೆ ಕೋರಂ ಇಲ್ಲದ ಸಭೆಗಳು ತೆಗೆದುಕೊಂಡ ನಿರ್ಣಯಗಳು ಸಿಂಧುವಾಗುತ್ತಿರಲಿಲ್ಲ. ನಿಶ್ಚಿತ ಸಂಖ್ಯೆಯಲ್ಲಿ ಸದಸ್ಯರುಗಳನ್ನು ಸೇರಿಸಿ ಸಭೆಯನ್ನು ವ್ಯವಸ್ಥಿತಗೊಳಿಸಲು ನಿಯಮಿಸಲ್ಪಡುತ್ತಿದ್ದ ಅಧಿಕಾರಿಯನ್ನು ಗಣಪೂರಕನೆಂದು ಕರೆಯಲಾಗುತ್ತಿತ್ತು. ಎಲ್ಲ ಸದಸ್ಯರಿಗೂ ಸೂಕ್ತವಾದ ಆಸನ ವ್ಯವಸ್ಥೆಯನ್ನು ಆಸನ ಪಂಚಾಪಕ ಎಂದು ಕರೆಯಲ್ಪಡುವ ಅಧಿಕಾರಿ ವ್ಯವಸ್ಥೆಗೊಳಿಸುತ್ತಿದ್ದರು. ಮತಗಳ ಹಂಚಿಕೆ, ಗಣನೆ ಹಾಗೂ ಮತ ನಿರ್ಣಯವನ್ನು ಮಾಡುವ ಅಧಿಕಾರಿಯನ್ನು ಗಣಕನೆಂದು ಕರೆಯಲಾಗುತ್ತಿತ್ತು. ಸಭೆಯ ಕಾರ್ಯ ಕಲಾಪಗಳನ್ನು ದಾಖಲೆಗೊಳಿಸಲು ಲಿಪಿಕರಿರುತ್ತಿದ್ದರು.




"ಇದು ಶಾಲಾ ಕಾಲೇಜುಗಳ ಫಲಿತಾಂಶಗಳು ಹೊರಬೀಳೋ ಸಮಯ. ಸಾವುಗಳು ಜಾಸ್ತಿ. ನಮಗೆ ಜಾಸ್ತಿ ಸಿಬ್ಬಂದಿ ಕೊಡಿ ಪ್ರಭು..."

ಸಂಥಾಗಾರಗಳ ಸಭೆ ಜ್ಞಪ್ತಿಯ ಅನುಶಾಸನವೆಂದು ಕರೆಯಲ್ಪಡುವ ವಿಷಯ ಪ್ರಸ್ತಾಪ ಪಾಠದೊಡನೆ ಪ್ರಾರಂಭವಾಗುತ್ತಿತ್ತು. ಒಮ್ಮೊಮ್ಮೆ ಈ ವಿಷಯದ ಪ್ರಸ್ತಾಪ ಪುನರುಚ್ಚರಿಸಲ್ಪಡುತ್ತಿತ್ತು. ಸದಸ್ಯರು ಸದನದಲ್ಲಿ ಕೇವಲ ವಿಷಯ ಪ್ರಸ್ತಾಪದ ಬಗ್ಗೆ ಮಾತ್ರ ಮಾತನಾಡಬೇಕಾಗುತ್ತಿತ್ತು. ಪ್ರಸ್ತಾಪ ಪಾಠದ ನಂತರ ಪ್ರಸ್ತಾಪಿಸಲ್ಪಟ್ಟ ವಿಷಯದ ಬಗ್ಗೆ ಸದಸ್ಯರು ತಮ್ಮ ತಮ್ಮ ವಿಚಾರಗಳನ್ನು ಮಂಡಿಸುತ್ತಿದ್ದರು. ವಿವಾದಗ್ರಸ್ತ ವಿಷಯಗಳ ಮೇಲೆ ಮೊದಲು ಬಿಚ್ಚು ಮನಸ್ಸಿನ ಚರ್ಚೆ ನಡೆಯುತ್ತಿತ್ತು. ನಂತರ ಬಹುಮತವನ್ನು ಪರೀಕ್ಷಿಸಲು ಮತಗಣನೆ ನಡೆಯುತ್ತಿತ್ತು.

ಮತದಾನದಲ್ಲಿ ಪ್ರಕಟ ಮತದಾನ ಪದ್ಧತಿ ಹಾಗೂ ರಹಸ್ಯ ಮತದಾನ ಪದ್ಧತಿಯನ್ನು ಅನುಸರಿಸಲಾಗುತ್ತಿತ್ತು. ಪ್ರಕಟ ಪದ್ಧತಿಯನ್ನು ವಿವೃತಿಕಮ್ ಎಂದು ಕರೆಯಲಾಗುತ್ತಿತ್ತು. ಆದರೆ ರಹಸ್ಯ ಮತದಾನದಲ್ಲಿ ಸ್ವಕರ್ಣ ಜಲ್ಪಕಮ್ ಹಾಗೂ ಶಲಾಕಾ ಪದ್ಧತಿ ಎಂಬೆರಡು ವಿಧಾನಗಳಿವೆ. ಸ್ವಕರ್ಣ ಜಲ್ಪಕಮ್ ವಿಧಾನದಂತೆ ಪ್ರತ್ಯೇಕ ಸದಸ್ಯರು ಗಣಕನ ಕಿವಿಯಲ್ಲಿ ಪಿಸುಗುಟ್ಟಿ ತಮ್ಮ ತಮ್ಮ ಅಭಿಪ್ರಾಯವನ್ನು ಪ್ರಕಟಿಸುತ್ತಿದ್ದರು. ನಂತರ ಗಣಕನು ಮತದಾನದ ಪರಿಣಾಮವನ್ನು ಸದನದಲ್ಲಿ ಪ್ರಕಟಿಸುತ್ತಿದ್ದನು. ಆದರೆ ಅತ್ಯಂತ ಮಹತ್ವಪೂರ್ಣ ವಿಷಯಗಳ ಬಗ್ಗೆ ಮತದಾನ ನಡೆದಾಗ ಶಲಾಕಾ ಪದ್ಧತಿಯನ್ನು ಅನುಸರಿಸಲಾಗುತ್ತಿತ್ತು. ಪಕ್ಷ ಹಾಗೂ ಪ್ರತಿಪಕ್ಷಗಳ ಮತಪತ್ರಗಳು ಭಿನ್ನ ಭಿನ್ನ ವರ್ಣದವುಗಳಾಗಿರುತ್ತಿರುತ್ತಿದ್ದವು. ಶಲಾಕಾಗ್ರಾಹಕ ಎಂಬ ಅಧಿಕಾರಿ ಪ್ರತ್ಯೇಕ ಸದಸ್ಯರಿಂದ ರಹಸ್ಯವಾಗಿ ಮತಪತ್ರಗಳನ್ನು ಒಟ್ಟುಗೂಡಿಸಿ ಬಳಿಕ ಗಣಕನು ಮತದಾನದ ಪರಿಣಾಮವನ್ನು ಸದನಕ್ಕೆ ತಿಳಿಸುತ್ತಿದ್ದನು. ಶಲಾಕಾ ಪದ್ಧತಿಯು ಮತದಾನದ ಅತ್ಯಂತ ವೈಜ್ಞಾನಿಕ ಹಾಗೂ ಉತ್ತಮ ಪದ್ಧತಿಯೆನಿಸಿತ್ತು.

ಸಂಥಾಗಾರದ ಸದಸ್ಯರು ಬೇರೆ ಬೇರೆ ಗುಂಪು ಅಥವಾ ದಳಗಳಿಗೆ ಸೇರಿರುತ್ತಿದ್ದರು. ಅವರು ತಮ್ಮ ತಮ್ಮ ಗುಂಪಿನ ನಾಯಕರುಗಳ ಹೆಸರಿನ ಮೇಲೆ ಗುರುತಿಸಲ್ಪಡುತ್ತಿದ್ದರು. ಉದಾಹರಣೆಗೆ ಅಂಧಕ ವೃಷ್ಣಿ ಸಂಘದ ಸಂಥಾಗಾರದಲ್ಲಿ ಅಕ್ರೂರನ ಅನುಯಾಯಿಗಳನ್ನು ಅಕ್ರೂರವಾರ್ಗ, ಅಕ್ರೂರ ಪಕ್ಷ ಅಥವಾ ಅಕ್ರೂರಗೃಹ್ಯರೆಂದು ಕರೆಯಲಾಗುತ್ತಿತ್ತು.

ಸಂಥಾಗಾರಗಳಲ್ಲಿ ಧಾರ್ಮಿಕ ಅಥವಾ ಸಾಮಾಜಿಕ ಗೋಷ್ಠಿಗಳ ಸಂದರ್ಭದಲ್ಲಿ ಶಾಂತಿಯು ನೆಲೆಸುತ್ತಿದ್ದರೂ ರಾಜಕಾರ್ಯದ ಸಂದರ್ಭದಲ್ಲಿ ಗಲಾಟೆ, ಗದ್ದಲಗಳು ಉಂಟಾಗುತ್ತಿದ್ದವು. ಗುಂಪುಗಾರಿಕೆ ಹಾಗೂ ಪರಸ್ಪರ ದ್ವೇಷ, ಅಸೂಯೆಗಳು ಗಣರಾಜ್ಯಗಳ ದೊಡ್ಡ ದೌರ್ಬಲ್ಯವಾಗಿವೆ. ಪ್ರಾಚೀನ ಸಂಥಾಗಾರಗಳೂ ಇವುಗಳಿಂದ ಹೊರತಾಗಿರಲಿಲ್ಲ. ಈ ಗುಂಪುಗಾರಿಕೆ, ಈರ್ಷೆ, ದ್ವೇಷಗಳ ಕಾರಣ ಅಧಿಕಾರ ಲಾಲಸೆಯಾಗಿತ್ತು. ಭಾಷಣ ಕಲೆ, ಮಾತುಗಾರಿಕೆಯಲ್ಲಿ ನಿಷ್ಣಾತರಾದ ಸದಸ್ಯರು ಸಹಜವಾಗಿ ಸಫಲರಾಗುತ್ತಿದ್ದರು. ಈಗಿನಂತೆ ಪ್ರಾಚೀನ ಕಾಲದಲ್ಲೂ ಆಡಳಿತ ಪಕ್ಷವನ್ನು ಸೋಲಿಸುವುದು ಕಠಿಣವಾಗಿತ್ತು. ಎರಡೂ ಪಕ್ಷಗಳು ಬಲದಲ್ಲಿ ಸಮಾನವಾಗಿದ್ದರೆ ಸಣ್ಣ ಪುಟ್ಟ ಪಕ್ಷಗಳು ಅದರ ಲಾಭವನ್ನು ಪಡೆಯಲು ಯತ್ನಿಸುತ್ತಿದ್ದವು. ಆ ಪಕ್ಷಗಳು ಯಾರನ್ನು ಬೆಂಬಲಿಸುವವೋ ಅದೇ ಆಡಳಿತ ಪಕ್ಷವಾಗುತ್ತಿತ್ತು.

ಪ್ರಾಚೀನ ಸಂಥಾಗಾರಗಳು ಆಧುನಿಕ ಸಂಸತ್ತಿಗಿಂತ ಯಾವುದೇ ರೀತಿಯಲ್ಲಿ ಭಿನ್ನವಾಗಿರಲಿಲ್ಲವೆಂಬುದು ಮೇಲಿನ ದೃಷ್ಟಾಂತಗಳಿಂದ ಸ್ಪಷ್ಟವಾಗುತ್ತದೆ.

★ ಟಿ. ಎಂ. ಸುಬ್ಬರಾಯ

# ಕಾಣೆಯಾಗುತ್ತಿರುವ ಕಾಡು ಬೆಕ್ಕುಗಳು

ಮಕ್ಕಳಿಗೆ ಮುದ್ದಿನ ಸೊಕ್ಕಾಗಿರುವ, ಕೆಲವು ಗೃಹಿಣಿಯರಿಗೆ ಕಾಲುಸುತ್ತಾಗಿರುವ, ಇನ್ನು ಕೆಲವರಿಗೆ ಪ್ರತಿಷ್ಠೆ, ಪ್ರದರ್ಶನದ ಸ್ವತ್ತಾಗಿರುವ, ಸಂಪ್ರದಾಯಸ್ಥರು ಶಕುನಸೂಚಕವಾಗಿ ಪರಿಗಣಿಸುವ ಬೆಕ್ಕುಗಳ ಬಗ್ಗೆ ನಾವು ತಿಳಿದಿದ್ದೇವೆ. ಆದರೆ ಮಾರ್ಜಾಲ ಗುಂಪಿಗೇ ಸೇರಿದರೂ ಗೃಹಿಣಿಯರು ನೀಡುವ ಹಾಲು, ಅನ್ನ, ಮಮತೆ ಇತ್ಯಾದಿಗಳಿಂದ ವಂಚಿತವಾಗಿ ಕಾಡನ್ನೆ ತಮ್ಮ ಬೀಡಾಗಿಸಿಕೊಂಡಿರುವ ಕಾಡು ಬೆಕ್ಕುಗಳ ಬಗ್ಗೆ ತಿಳಿದಿರುವವರು ಕೆಲವರು ಮಾತ್ರ.

ಭಾರತದ ಕಾಡುಬೆಕ್ಕುಗಳಲ್ಲಿ ಎಂಟು ಪ್ರಭೇದಗಳಿವೆ. ಅವುಗಳ ಪೈಕಿ ಬಂಗಾರದ ಬೆಕ್ಕುಗಳು ಸುಂದರ. ಕಾಡು ಬೆಕ್ಕುಗಳಲ್ಲಿ ಇದರದು ದೊಡ್ಡ ಜಾತಿ. ಹೊಟ್ಟೆಯ ಮೇಲೆ ಅಲ್ಲಲ್ಲಿ ಕಲೆ. ಮುಖದ ಮೇಲೆ ಬಿಳಿಯ ಕರಿಯ ವರ್ಣಮಯ ಗೆರೆ. ಮತ್ತೆಲ್ಲ ಭಾಗ ಕಂದು ಬಂಗಾರ ವರ್ಣ. ಮೊಲ, ಜಿಂಕೆ, ಕುರಿ, ಆಡು ಇದರ ಬೇಟೆ. ಇವು ಬೇಟೆಯಲ್ಲಿ ತುಂಬಾ ನೈಪುಣ್ಯವನ್ನು ಸಾಧಿಸಿವೆ. ಸುಮಾರು ಒಂದು ಮೀಟರಿನಷ್ಟು ಉದ್ದವಾಗಿರುವ ಈ ಬೆಕ್ಕುಗಳ ಬಾಲ ದೇಹದ ಅರ್ಧ ಪ್ರಮಾಣದಲ್ಲಿರುವುದೊಂದು ವಿಶೇಷ. ದುಂಡಾದ ಪುಟ್ಟ ಕಿವಿಯ ಈ ಬೆಕ್ಕುಗಳು ಹೆಚ್ಚಾಗಿ ಭಾರತದ ಈಶಾನ್ಯ ವಲಯದ ಕಾಡುಗಳಲ್ಲಿ ಕಾಣಸಿಗುತ್ತವೆ.. ಅಗತ್ಯಕ್ಕನುಗುಣವಾಗಿ ವೃಕ್ಷಾರೋಹಣ ಮಾಡುತ್ತವೆಯಾದರೂ ಹೆಚ್ಚಾಗಿ ವಾಸಿಸುವುದು ನೆಲದ ಮೇಲೆಯೆ.

ಪಲ್ಲಾ ಮಾರ್ಜಾಲಗಳೆಂದು ಜನಪ್ರಿಯವಾಗಿರುವ ಮಾರ್ಜಾಲ ಪ್ರಭೇದವು ಲಡಕ್ ಹಾಗೂ ಟಿಬೆಟ್ ಪ್ರದೇಶಗಳಲ್ಲಿ ಕಾಣಸಿಗುತ್ತದೆ. ದಪ್ಪ ತುಪ್ಪಳದಿಂದ ಮುಚ್ಚಿರುವ ಇದರ ಮುಖ ಮಫ್ಲರ್ ಸುತ್ತಿಕೊಂಡ ರೋಗಿಯನ್ನು ನೆನಪಿಸುತ್ತದೆ. ಚಿಕ್ಕದಾದರೂ ಸ್ಥೂಲ ಕಾಯ. ಪುಟ್ಟ ಗಿಡ್ಡ ಗಟ್ಟಿ ಕಾಲು. ಚಿಕ್ಕ ದುಂಡು ಕಿವಿ, ದೊಡ್ಡ ತಲೆ. ಒಳಹೊಕ್ಕ ಹಣೆ. ತೀರಾ



ಚಾಚಿನ ಮೋರೆ. ಕಾಲುಗಳ ಮೇಲೆ ಬೂದು, ಕಪ್ಪು ಮಿಶ್ರಿತ ಪಟ್ಟೆ. ಪುಟ್ಟ ಬಾಲದ ಮೇಲೆ ಕಪ್ಪು ಉಂಗುರ ಗುರು ಈ ಪ್ರಭೇದದ ಮುಖ್ಯ ಲಕ್ಷಣ.

ಮರುಭೂಮಿಯ ಮಾರ್ಜಾಲಗಳು ಹೆಚ್ಚಾಗಿ ವಾಸಿಸುವುದು ಭಾರತದ ಪಶ್ಚಿಮ ವಲಯದ ಅರ್ಧ ಮರಳುಗಾಡು ಪ್ರದೇಶದಲ್ಲಿ. ಹಳದಿ ಮಿಶ್ರಿತ ಕಂದು ಬಣ್ಣದ ಕೂದಲಿನ ಈ ಬೆಕ್ಕುಗಳ ಉದ್ದ ಸುಮಾರು ೬೦ ಸೆಂಟಿಮೀಟರಿನಷ್ಟು. ಕಪ್ಪು ಚುಕ್ಕೆಗಳಿರುವ ಇವುಗಳ ಆಹಾರ ಮಿಡತೆ, ಮೂಷಕವರ್ಗದ ಪ್ರಾಣಿ ಹಾಗೂ ಪಕ್ಷಿಗಳು. ಹೊಳೆ, ಹಳ್ಳಗಳ ಸನಿಹದ ಕಲ್ಲುಬಂಡೆಗಳ ಮೇಲೆ, ಸರೋವರ ತೀರಗಳಲ್ಲಿ ಕಾದು ಕುಳಿತು ಅವಕಾಶ ದೊರೆತೊಡನೆಯೇ ಚಂಗನೆ ನೆಗೆದು ಮೀನು ನುಂಗುವ ಪ್ರಭೇದಕ್ಕೆ 'ಮೀನು ಮಾರ್ಜಾಲ'ಗಳೆಂದೇ ಹೆಸರು. ಇನ್ನಿತರ ಮಾರ್ಜಾಲ ಪ್ರಭೇದಗಳಿಗಿಂತ ದೊಡ್ಡದಾಗಿರುವ ಮೀನು ಮಾರ್ಜಾಲಕ್ಕೆ ತುಂಬಾ ಚಿಕ್ಕ ಬಾಲ,





ಬೂದು ಬಣ್ಣದ ಕೂದಲು. ಅದರ ಮೇಲೆ ಉದ್ದನೆಯ ಎಳೆ. ದೇಹದ ತುಂಬಾ ಪಟ್ಟೆ, ಚುಕ್ಕೆಗಳು. ಮೋರೆಯ ಮೇಲೆ ಸ್ಪಷ್ಟವಾಗಿ ಮೂಡಿರುವ ಕಂದು ಮಿಶ್ರಿತ ಬಿಳಿ ವರ್ಣದ ಗೆರೆಗಳು. ಉತ್ತರ ಪ್ರದೇಶ, ಹಿಮಾಲಯ, ವಿಂಧ್ಯ ಪರ್ವತದ ದಕ್ಷಿಣ ಭಾಗ, ಬಂಗಾಲದ ಉತ್ತರ ಭಾಗ, ಕೇರಳದ ಹಸಿರು ಕಾಡು, ಮಂಗಳೂರು ಕರಾವಳಿ ಪ್ರದೇಶಗಳಲ್ಲಿ ಕಾಣ ಸಿಗುವ ಇವು ಕಾಡು ಹಾಗೂ ಜವುಗು ಪ್ರದೇಶವನ್ನು ಬಯಸುವ ಪ್ರಾಣಿಗಳು.

ಇನ್ನೊಂದು ಜಾತಿಯ ಬೆಕ್ಕಿಗೆ ಸಂಗಮರವರಿ ಮಾರ್ಜಾಲಗಳೆಂದೇ ಹೆಸರು. ಅಮೃತ ಶಿಲೆಯ ಬಣ್ಣವಿರುವ ಇವು ಇತ್ತೀಚೆ ಅಪರೂಪವಾಗಿವೆ. ಸಿಕ್ಕಿಂ ಹಾಗೂ ಅಸ್ಸಾಂಗಳಲ್ಲಿ ಕಾಣ ಸಿಗುವುದು ಹೆಚ್ಚು. ಮರ ಏರುವುದರಲ್ಲಿ ಇವಕ್ಕೆ ಹೆಚ್ಚು ಖುಷಿ. ಹೆಚ್ಚಾಗಿ ಇವು ಇರುವುದು ಮರಗಳ ಮೇಲೆಯೇ. ಚಪ್ಪಟೆ ತಲೆ, ಕಂದು ಬೂದು ಮಿಶ್ರಿತ ವರ್ಣ, ಗಟ್ಟಿ ಹಲ್ಲು, ದಪ್ಪ ತುಪ್ಪಳ ಪಟ್ಟೆಗಳಿರುವ ತಲೆ, ಉಭಯ ಪಾರ್ಶ್ವಗಳಲ್ಲಿ ಕಪ್ಪು ಮಚ್ಚೆ—ಇವು ಸಂಗಮರವರಿಯ ಪ್ರಮುಖ ಲಕ್ಷಣಗಳು.

'ಚಿರತೆ ಬೆಕ್ಕು' ನೀರಿನಲ್ಲಿ ಈಜಬಲ್ಲವು.

ಸುಲಭವಾಗಿ ಮರವನ್ನು ಏರಬಲ್ಲವು. ಕಾಶ್ಮೀರದಿಂದ ಕನ್ಯಾಕುಮಾರಿಯ ತನಕ ಬಹುತೇಕ ಎಲ್ಲ ಕಾಡುಗಳಲ್ಲಿಯೂ ಕಾಣಸಿಗುವ ಇವುಗಳ ದೇಹ ಹಳದಿ ಕಂದುವರ್ಣ. ಅಲ್ಲಲ್ಲಿ ಕಪ್ಪು ಚುಕ್ಕೆಗಳೂ ಸಾಮಾನ್ಯ. ಸಣ್ಣಪುಟ್ಟ ಸಸ್ತನಿಗಳು, ಪಕ್ಷಿಗಳು, ಬಾವಲಿಗಳು ಇವುಗಳು ಆಹಾರ. ಕೋಳಿ, ಕೊಕ್ಕರೆ, ಕಸ್ತೂರಿಮೃಗಗಳನ್ನೂ ಬೇಟೆಯಾಡುವ ಇವು ತಮ್ಮ ಬೇಟೆಗೆ ರಾತ್ರಿ ಕಾಲವನ್ನೇ ಹೆಚ್ಚಾಗಿ ಆಯ್ದುಕೊಳ್ಳುತ್ತವೆ.

ಕಾಡು ಬೆಕ್ಕು ಎಂದೇ ಪರಿಚಿತವಾಗಿರುವ ಇನ್ನೊಂದು ಪ್ರಭೇದ ಭಾರತದ ಎಲ್ಲೆಡೆ ಕಾಣಸಿಗುತ್ತದೆ. ಇವು ಚಿರತೆ ಬೆಕ್ಕುಗಳಷ್ಟೇ ದೊಡ್ಡವು. ಮಣ್ಣು ಬಣ್ಣದ ಇವುಗಳ ಉದರದ ಮೇಲೆ ಕಂದುಕೆಂಪಿನ ಪಟ್ಟೆಗಳಿವೆ. ಬಾಲದ ತುದಿ ಕಪ್ಪು. ಚಿರತೆ ಬಾಲಕ್ಕಿಂತ ತುಸು ಕುಳ್ಳು ಬಾಲ, ಕಡುಗೆಂಪು, ಕಂದು ಮಿಶ್ರಿತ ಕಿವಿ, ಕಿವಿಯ ತುದಿಯಲ್ಲಿ ಕುಚ್ಚಿನ ಕೂದಲುಗೊಂಡೆ. ನದಿ, ಹಳ್ಳಗಳ ಸಮೀಪದ ಹುಲ್ಲುಗಾವಲು, ಕಾಡು ಮೇಡುಗಳಲ್ಲಿ ಇವುಗಳ ವಾಸ. ಸದಾ ಚುರುಕಾಗಿರುವ ಇವುಗಳ ಬೇಟೆ ಇಲಿ, ನವಿಲು, ಕೋಗಿಲೆ, ಹಕ್ಕಿ, ಕೆಲವೊಮ್ಮೆ ಕಣೆ ಹಂದಿಗಳನ್ನೂ ಇವು ಬೇಟೆಯಾಡುವುದುಂಟು.

ಕಪ್ಪು ಗೊಂಡೆಯ ಕೂದಲು, ಉದ್ದ ಚೂಪನೆಯ ಕಿವಿಗಳ ಆಧಾರದಿಂದಲೇ ಕಾರಕಲ್ ಪ್ರಭೇದದ ಬೆಕ್ಕುಗಳನ್ನು ಸುಲಭವಾಗಿ ಗುರುತಿಸಬಹುದು. ಬೇಟೆಯಲ್ಲಿ ನಿಪುಣವಾಗಿರುವ ಇವು ಕುರಿ, ಮೊಲ, ಆಡು, ಜಿಂಕೆಗಳನ್ನು ಕೊಂದು ತಿನ್ನುತ್ತವೆ. ಕೆಲವು ಅಡಿಗಳಷ್ಟು ಎತ್ತರ ಮೇಲೆ ನೆಗೆದು ಪಕ್ಷಿಗಳನ್ನು ಹಿಡಿಯಬಲ್ಲ ಈ ಬೆಕ್ಕುಗಳೆಂದರೆ ಪಕ್ಷಿಗಳಿಗೆ ತುಂಬಾ ಭೀತಿ. ಇಂದು ಅರಣ್ಯನಾಶ ಅವ್ಯಾಹತವಾಗಿ ಸಾಗಿದೆ. ಕಾಡಿನ ನಾಶದೊಂದಿಗೆ ಅದೆಷ್ಟೋ ಕಾಡು ಪ್ರಾಣಿಗಳೂ ಕಾಣೆಯಾಗುತ್ತವೆ. ಅವುಗಳ ಪೈಕಿ ಈ ಸುಂದರ ಪಾಪ, ಹಾನಿಕರಕವಲ್ಲದ ಈ ಕಾಡುಬೆಕ್ಕುಗಳೂ ಒಂದು.

---

## ಜಾಗೃತಿ

ಎಲೆ ಗೌರವದ ಗೆಳತೀ

ನಾ ಮೋಹ ಸಾಗರದಲ್ಲಿ
ಬಿದ್ದಾಗಲೇ
ಕಣ್ಣು ಕಾಣದ ಗಾವಿಲನಾದೆ!

ನಿನ್ನ ಬುದ್ಧಿ ಭಾವದ
ಲೈಟ್‌ಹೌಸ್‌ನಿಂದ

ನಾನಿಂದು ತಿಳಿಯಾದ
ಅರಿವಿನ ದಡ ಸೇರಿದೆ;

ನಿನ್ನ ಸ್ನೇಹ ತಂಗಾಳಿ ದೆಸೆಯಿಂದ

ನನ್ನ ಅಭೀಪ್ಸೆ ದೋಣಿಗೆ
ಹರೆಯುದ ಬಂದರಲ್ಲೇ
ಜಾಗೃತಿಯು ಲಂಗರು ಹಾಕಿದೆ!

–ದೊಡ್ಡ ರಂಗೇಗೌಡ

---

ಬದುಕಿನಲಿ ಸಿಗದ ಏನನ್ನೋ ನೆನೆದು,
ಕೊರಗುವುದಕ್ಕಿಂತ ಇಲ್ಲಿ ಬಾ,
ನನ್ನ ಮಡಿಲಿಗೆ;
ಇದೆಷ್ಟು ಆನಂದಮಯ ಎನ್ನುವುದು ನಾ
ತೋರಿಸಿಕೊಡುತ್ತೇನೆ.

–ಗುಡಿಬಂಡೆ ಪೂರ್ಣಿಮಾ

ಹುಡುಗನಂತೆ ವೇಷ ತೊಡಿಸಿ, 'ಅನಾಮ' ಗಾರ್ಡನ್ ಎಂಬ ತನ್ನ ಸೋದರ ಎಂದು ಹೇಳಿ ಬ್ರಿಟನ್ನಿಗೆ ಕರೆದುಕೊಂಡು ಬಂದಿದ್ದ. ಆ ಉನ್ಮಾದದ ದಿನಗಳನ್ನು ಅರೇಬಿಯನ್ ನೈಟ್ಸ್‌ನಂತಹ ಪ್ರೇಮ ಸಾಹಸಗಳನ್ನು ಜೀವಿಸುವಲ್ಲಿಯೇ ಕಳೆದ.

ಆ ಕಾಲದಲ್ಲಿ ಯುರೋಪಿನ, ಸಾಧ್ಯವಿದ್ದರೆ ಇತರ ದೇಶಗಳ ಪ್ರವಾಸ ಕೈಕೊಳ್ಳದ ಇಂಗ್ಲಿಷ್ ಸಭ್ಯಗೃಹಸ್ಥನ ಶಿಕ್ಷಣ ಅಪೂರ್ಣವೆಂದು ಬಗೆಯಲಾಗುತ್ತಿತ್ತು. ೧೮೦೯ರಲ್ಲಿ ಅದು ಸಾಧ್ಯವಿರದ ಮಾತಾಗಿತ್ತು. ಫ್ರಾನ್ಸಿನೊಂದಿಗೆ ಇಂಗ್ಲೆಂಡ ಯುದ್ಧನಿರತವಾಗಿತ್ತು. ನೆಪೋಲಿಯನ್ ಯುರೋಪಿನ ಬಹುಭಾಗವನ್ನು ಆಕ್ರಮಿಸಿದ್ದ. ಆದರೆ ಬೈರನ್ ಇದರಿಂದ ವಿಚಲಿತನಾಗಲಿಲ್ಲ. ಅವನು ಎಲ್ಲರೂ ತುಳಿದ ಹಾದಿ ತುಳಿಯುವವನಲ್ಲ. ಅವನ ಆಸಕ್ತಿ ಅಷ್ಟೊಂದು ಪರಿಚಿತವಿರದ ತುರ್ಕಿ ಪರ್ಷಿಯಾ, ಭಾರತ ಮೊದಲಾದ ಪೌರಸ್ತ್ಯ ದೇಶಗಳಲ್ಲಿ ಉಂಟಾಗಿತ್ತು. ಆದ್ದರಿಂದ ತುರ್ಕಿ, ಗ್ರೀಸ್, ಸಿರಿಯಾ, ಇರಾಕ್, ಪೋರ್ಚುಗಲ್, ಸ್ಪೇನ್ ಮೊದಲಾದ ದೇಶಗಳಿಗೆ ಸಮುದ್ರಯಾನ ಮಾಡಿದ. ಈ ಅನುಭವವೆ ಅವನ ಪ್ರಖ್ಯಾತ ಕಾವ್ಯ 'ಚೈಲ್ಡ್ ಹ್ಯಾರೊಲ್ಡ್'ಗೆ ಸಾಮಗ್ರಿ.

ಮಾಲ್ಟಾದಲ್ಲಿ ಕೇವಲ ಮೂರು ವಾರ ತಂಗಿದ್ದ. ಸ್ಪೆನ್ಸರ್ ಸ್ಮಿಥ್ ಎಂಬ ವಿವಾಹಿತ ಇಂಗ್ಲಿಷ್ ತರುಣಿಯನ್ನು ಮೋಹಪಾಶದಲ್ಲಿ ಬಂಧಿಸಲು ಅಷ್ಟು ಸಮಯ ಸಾಕಾಗಿತ್ತು. ತನ್ನ ಕಾವ್ಯದಲ್ಲಿ ಸುಂದರ ಫ್ಲಾರೆನ್ಸ್ ಎಂದು ವರ್ಣಿಸಿರುವುದು ಇವಳನ್ನೇ. ತರುವಾಯದ ವರ್ಷಗಳಲ್ಲಿ ಆತನೆ ಹೇಳಿಕೊಂಡಿರುವಂತೆ ಅಳಿಯದ ಪ್ರೇಮ ಬಂಧನದಲ್ಲಿ ಆತ ಸಿಲುಕಿದ್ದ. ಅವರಿಬ್ಬರೂ ಓಡಿ ಹೋಗುವುದನ್ನು ಚರ್ಚಿಸಿದರು. ಆದರೆ ಸಾಧ್ಯವಾಗಲಿಲ್ಲ.

ವೆನಿಸ್‌ಗೆ ಬಂದಾಗ ಪ್ರೇಮದ ಹಸಿವೆಗೆ ಅನ್ನವಿಲ್ಲದೆ ಒಂದು ವರ್ಷ ಸಂದಿತ್ತು. ಕೂಡಲೆ ತನ್ನ ಹಿಂದಿನ ಮಾರ್ಗ ಅನುಸರಿಸಿದ. ಸುಂದರ ತರುಣ ಮಡದಿಯುಳ್ಳ ಬಟ್ಟೆ ವ್ಯಾಪಾರಿಯ ಮನೆಯಲ್ಲಿ ವಸತಿ ಸೌಲಭ್ಯ ಮಾಡಿಕೊಂಡ ಬೈರನ್ ಅವಳನ್ನು ಪರಿ ಒಂದು ಕಂಡ. ಹರಿಣಿ ಸುಲಭವಾಗಿ ಬಲೆಯಲ್ಲಿ ಸಿಲುಕಿತು. ಒಂದು ಮಾತನ್ನು ಇಲ್ಲಿ ಹೇಳಬೇಕು. ಮಹಿಳೆಯರಿಗೆ ಬೈರನ್ನನ ಆಕರ್ಷಣೆ ತಡೆದುಕೊಳ್ಳುವುದು ಸುಲಭವಾಗಿರಲಿಲ್ಲ.

ಆಗಸ್ಟಾಳೊಂದಿಗೆ ಬೈರನ್ನನದು ವಿಲಕ್ಷಣ ಸಂಬಂಧ. ಕಾರ್ಮರ್ಥೆನ್‌ನ ವಿವಾಹ ವಿಚ್ಛೇದಿತೆ ಮಾರ್ಚನೆಸ್‌ಳನ್ನು ಬೈರನ್ನನ ತಂದೆ ಮದುವೆಯಾಗಿದ್ದ. ಆಕೆಗೆ ಬೈರನ್ನನ ತಂದೆಯಿಂದಲೇ ಹುಟ್ಟಿದವಳು ಈ ಆಗಸ್ಟಾ. ಬೈರನ್ ತನ್ನ ಜೀವನವಿಡಿ ಈಕೆಯೊಂದಿಗೆ ಒಲುಮೆಯ ಪತ್ರ ವ್ಯವಹಾರ ನಡೆಸಿದ. ತನ್ನ ಏಕಾಕಿತನ ಮತ್ತು ಬೇಸರದಲ್ಲಿ ನಲ್ಮೆಯ ಆಗಸ್ಟಾಳಿಗೆ, "ನೀನೊಬ್ಬಳೆ ನನ್ನನ್ನು ಮಿತ್ರನೆಂದು ನೋಡಿಕೊಂಡವಳು," ಎಂದು ಹೃದಯಾಂತರಾಳವನ್ನು ತೋಡಿಕೊಂಡ. ಅವಳು ಕರ್ನಲ್ ಲೇ ಎಂಬವನ ಪತ್ನಿಯಾಗಿದ್ದಳು. ಕರ್ನಲ್ ಲೇ ಕುದುರೆ ಜೂಜಿನಲ್ಲಿ ಸಮಯ ಕಳೆಯುತ್ತಿದ್ದುದೆ ಜಾಸ್ತಿ. ಬೈರನ್ ಆಗಸ್ಟಾರ ಸಂಬಂಧ ಸೋದರ ಸಂಬಂಧದ ಎಲ್ಲೆ ಮೀರಿತ್ತೆಂಬುದು ಖಚಿತಪಟ್ಟ ಸಂಗತಿ. ಅವರಿಬ್ಬರ ಅನುರಾಗದ ಸ್ವಭಾವ ಮತ್ತು ಅವರು ಇತರ ತರುಣ ತರುಣಿಯರಂತೆ ಬೇರೆ ಬೇರೆಯಾಗಿಯೆ ಬೆಳೆದು ಪರಸ್ಪರ ಸಂಧಿಸಿದವರೆಂಬುದು ಇಲ್ಲಿ ಗಮನಿಸಬೇಕಾದ ಅಂಶ. ಬೈರನ್ ಮಾತ್ರ ಆಗಸ್ಟಾಳನ್ನು ಇನ್ನಾವ ಸ್ತ್ರೀಗಿಂತಲೂ ಹೆಚ್ಚು ಗಾಢವಾಗಿ ಪ್ರೇಮಿಸಿದ. ದುರದೃಷ್ಟವೆಂದರೆ ಅವನೊಂದಿಗೆ ಸಹಬಾಳ್ವೆ ನಡೆಸಲಾರದವಳೆಂದರೆ ಅವಳೊಬ್ಬಳೆ. ಅವರಿಬ್ಬರ ಸಂಬಂಧದ ಸುದ್ದಿ ಇಡೀ ಯುರೋಪವನ್ನೇ ಗೊಂದಲಕ್ಕೀಡು ಮಾಡಿತು. ಇಬ್ಬರು ಅಗಲಲೇ ಬೇಕಾಯಿತು. ಬೈರನ್ ಅವಳನ್ನುದ್ದೇಶಿಸಿ ಒಂದು ಸುಂದರ ಕವನ ಬರೆದ,

ವರ್ಷಗಳುರುಳಿದ ಬಳಿಕ<br>
ನಾವು ಭೇಟಿಯಾದದ್ದೆ ಆದರೆ<br>
ನಿನ್ನೊಂದಿಗೆ ಏನು ಮಾತಾಡಲಿ?<br>
ಮೌನ, ಕಣ್ಣೀರುಗಳಿಂದಲೇ?

ಬೈರನ್ನನ 'ಚೈಲ್ಡ್ ಹ್ಯಾರೊಲ್ಡ್ಸ್ ಪಿಲ್ಗ್ರಿಮೇಜ್' ಕಾವ್ಯ ಪ್ರತಿಯೊಬ್ಬನ ಮೇಜನ್ನು ಅಲಂಕರಿಸಿದವು. ಸ್ಪೇನಿನಲ್ಲಿ ನಡೆಯುತ್ತಿದ್ದ ಯುದ್ಧದ ಬಗೆಗೆ ಮಾತನಾಡುವ ಬದಲು ನವೋದಿತ ಕವಿಯ ಬಗೆಗೆ ಜನ ಮಾತನಾಡ ಲಾರಂಭಿಸಿದರು. ಆ ಕಾವ್ಯ ನಾಲ್ಕು ವಾರಗಳಲ್ಲಿ ಏಳು ಮುದ್ರಣ ಕಂಡಿತು. ಬೈರನ್ನನ ಶಬ್ದಗಳಲ್ಲಿಯೇ ಹೇಳುವುದಾದರೆ "ನಾನು ರಾತೋರಾತ್ರಿ ಪ್ರಖ್ಯಾತನಾಗಿಬಿಟ್ಟೆದ್ದೆ. ಪ್ರತಿಯೊಬ್ಬನಿಗೂ/ಳಿಗೂ ಅವನನ್ನು ಭೇಟಿಯಾಗುವ ತವಕ. ಬೈರನ್ ವಾಸಿಸುತ್ತಿದ್ದ ಸೇಂಟ್ ಜೇಮ್ಸನ ಓಣಿಯಲ್ಲಿ ಅವನಿಗೆ ಆಮಂತ್ರಣ ನೀಡಲು ಬರುತ್ತಿದ್ದ ಕುದುರೆ ಗಾಡಿಗಳಿಂದಾಗಿ ಸಂಚಾರಕ್ಕೆ ಅಡ್ಡಿಯಾಗುತ್ತಿತ್ತು. ಒಂದು ಗೋಷ್ಠಿಯಲ್ಲಿ ಅವನಿಗೆ ಇಬ್ಬರು ಅಭಿಮಾನಿ ಹೆಂಗಳೆಯರು ಭೇಟಿಯಾದರು. ಅವರು ಅವರ ಜೀವನದಲ್ಲಿ ಮುಂದೆ ನಾಟಕೀಯ ಪರಿಣಾಮ ಬೀರಿದರು.

ಒಬ್ಬಳು ಲೇಡಿ ಕ್ಯಾರೋಲಿನ್ ಲ್ಯಾಂಬ್, ಅವಳು ಪಟೇಲನೊಬ್ಬನ ಮಗಳು, ಲಾರ್ಡನೊಬ್ಬನ ಸೊಸೆ, ಮೋಹಕ ಚೆಲುವೆ. ಅವಳಿಗೆ 'ಚೈಲ್ಡ್ ಹ್ಯಾರೊಲ್ಡ್' ಪ್ರತಿಯೊಂದನ್ನು ಯಾರೋ ಓದಲು ಕೊಟ್ಟಿದ್ದರು. "ಅದನ್ನು ನಾನು ಓದಿದೆ. ಅವನಿಗೆ ಮಾರು ಹೋದೆ. ಅವನು ಕುಂಟ, ತನ್ನ ಉಗುರುಗಳನ್ನು ಯಾವಾಗಲೂ ಕಚ್ಚುತ್ತಿರುತ್ತಾನೆ ಎಂದು ಗೆಳತಿಯೊಬ್ಬಳು ಛೇಡಿಸಿದಾಗ ಅವನು ಈಸೋಪನಷ್ಟು ಕುರೂಪಿ ಇದ್ದರೂ ನಾನವನ ಪರಿಚಯ ಮಾಡಿಕೊಳ್ಳಲೇಬೇಕು," ಎಂದು ಹೇಳಿದಳು ಆಕೆ. ಆದರೂ ಮೊದಲ ಸಲ ಭೇಟಿಯಾದಾಗ ಯಾವ ಮಾತನ್ನೂ ಆಡದೆ ಅವನತ್ತ ನೋಡಿ ಅಲ್ಲಿಂದ ಕಾಲ್ತೆಗೆದಳು. ತನ್ನ ಖಾಸಗಿ ದಿನಚರಿಯಲ್ಲಿ ಅವಳು ಬೈರನ್ನನನ್ನು ಹೀಗೆ ವರ್ಣಿಸಿದ್ದಾಳೆ: "ದುಷ್ಟ, ಹುಚ್ಚ, ಅಪಾಯಕಾರಿ."

ಅವನನ್ನು ಸೆಳೆಯುವ ಉಪಾಯವೆಂದರೆ ತಾತ್ಸಾರವೆಂದು ನಿರ್ಧರಿಸಿದಳು ಲೇಡಿ ಕ್ಯಾರೋಲಿನ್ ಲ್ಯಾಂಬ್. ಆದರೆ ಕೆಲವು ದಿನಗಳ ನಂತರ ಅವನನ್ನು ಕಂಡಾಗ ಕರಗಿಹೋದಳು. ತಾನು ಅವಳನ್ನು ಮೆಲ್ಬೋರ್ನ್ ಹೌಸಿನಲ್ಲಿ ಭೇಟಿಯಾಗಬಹುದೆ? ಎಂದು ಕೇಳಿದ್ದ ಬೈರನ್ ಮಾರು ದಿನ ಭೇಟಿಯಾದ.

೧೮೧೨ರ ಉನ್ಮಾದದ ಬೇಸಗೆಯಲ್ಲಿ ಅವಳು ಅದಕ್ಕನುಗುಣವಾಗಿ ವರ್ತಿಸಿದಳು. ಅವಳು ತನ್ನ ಭಾವನೆಗಳನ್ನು ನಿಯಂತ್ರಿಸಲಾಗಲಿ ಮರೆಮಾಚಲಾಗಲಿ ಅಸಮರ್ಥಳಾದ ಮಹಿಳೆ. ಯಾವುದೇ ಹೊಸ ಪ್ರಣಯಕ್ಕಾಗಿ ಸದಾಸಿದ್ಧಳು. ಬೈರನ್ ಕೂಡ ಎಚ್ಚರವಹಿಸುವಂತೆ ಅವಳಿಗೆ ಅರಿಕೆ ಮಾಡಿಕೊಳ್ಳಬೇಕಾಯಿತು. ಇಬ್ಬರ ಮಧ್ಯೆ ಪ್ರೇಮ ಪತ್ರಗಳು ಓಡಾಡಿದವು. ಅಲ್ಲದೆ ಇಬ್ಬರೂ ನಿತ್ಯ ಸಂತೋಷಕೂಟಗಳಲ್ಲಿ ಸಂಧಿಸುತ್ತಿದ್ದರು.

ಬೈರನ್ನನ ಭೇಟಿ ಆಗದಿದ್ದಾಗ ಅವಳು ಮೆಲ್ಬೋರ್ನ್ ಹೌಸಿಗೆ ಪರಿಚಾರಕನ ಪೋಷಾಕು ಧರಿಸಿ ಬರಲಾರಂಭಿಸಿದಳು. ಉದಾರ ಮನೋಭಾವದ ಉಚ್ಚ ವರ್ಗದ ಲಂಡನ್ನಿನ ಸಮಾಜಕ್ಕೆ ಇದನ್ನು ಸಹಿಸುವದು ಸಹ ದುಸ್ತರವಾಯಿತು. ಕ್ಯಾರೋಲಿನ್ನಳ ಹುಚ್ಚು ನಡತೆಗೆ ಎಲ್ಲೆಲ್ಲೂ ಗುಲ್ಲೆದ್ದಿತು. ಬೈರನ್ ಅವಳ ಸಿಡುಕಿನ, ಹೇಚುಂಟು ಮಾಡುವ ಪ್ರಸಂಗಗಳಿಂದ ಬೇಸತ್ತ. ೧೮೧೩ರಲ್ಲಿ ಒಂದು ಕೂಟದಲ್ಲಿ ಚಾಕುವಿನಿಂದ ತನ್ನನ್ನು ಗಾಸಿಗೊಳಿಸಿಕೊಂಡಳು. ಬಟ್ಟೆ ತುಂಬ ರಕ್ತ ಹರಿಸಿಕೊಂಡಳು. ಇದು ಮೂರ್ಖತನದ ಪರಾಕಾಷ್ಠೆ. ಪತ್ರಿಕೆಗಳಲ್ಲಿ ಈ ಬಗ್ಗೆ ನಾನಾ ನಮೂನೆಯ ಕತೆಗಳು ಪ್ರಕಟವಾದವು. ಸಾಮಾಜಿಕ ಅಪಖ್ಯಾತಿಯಿಂದ ಕ್ಯಾರೋಲಿನ್ನಳಿಗೆ ನಾಚಿಕೆಯಾಯಿತು. ಪತಿ ಅವಳನ್ನು ಲಂಡನ್ನಿನಿಂದ ಕರೆದುಕೊಂಡು ಹೋದ. ಬೈರನ್ನನಿಗೆ ಅವಳ ತೊಂದರೆ ತಪ್ಪಿತು.

ಮೆಲ್ಬೋರ್ನ್ ಹೌಸಿನಲ್ಲಿ ಬೈರನ್ ಭೆಟ್ಟಿಯಾದ ಇನ್ನೊಬ್ಬ ಮಹಿಳೆ ಭಿನ್ನ ಸ್ವಭಾವದವಳು. ಕ್ಯಾರೊಲಿನ್ ಅಲಂಕರಿಸಿಕೊಳ್ಳಲು ಎದ್ದು ಹೋಗಿದ್ದಾಗ ಅವಳ ಭೆಟ್ಟಿಯಾಯಿತು. ಆ್ಯನಬೆಲಾ ಮಿಲ್‌ಬ್ಯಾಂಕ್ ಆಕೆಯ ಹೆಸರು. ವಿಲಿಯಂ ಲ್ಯಾಂಬನ ಅಕ್ಕನ ಮಗಳಾಕೆ. ಜನಭರಿತ ಹಜಾರ







೩



೪

೧. ಆಗಸ್ಟಾ    ೨. ಕವಿ ಬೈರನ್    ೩. ಟೆರೆಸಾ ಗ್ವೀಚೋಲಿ    ೪. ಮೇರಿ ಚಾವರ್ಥ್









೧. ಲೇಡಿ ಕ್ಯಾರೊಲಿನ್ ಲ್ಯಾಂಬ್ ೨. ಕಡಲುಗಳ್ಳನ ವೇಷದಲ್ಲಿ ೩. ಆ್ಯನಬೆಲಾ ಮಿಲ್‌ಬ್ಯಾಂಕ್ಸ್ ೪. ಕ್ಲೇರ್ ಕ್ಲೇರ್‌ಮಾಂಟ್

ದಲ್ಲಿ ಒಬ್ಬಳೇ ಸೋಫಾದ ಮೇಲೆ ಕುಳಿತಿದ್ದಳು. ಅವರಿಬ್ಬರೂ ಮೊದಲು ಸಲಕ್ಕೇ ಮಾತಾಡಲಿಲ್ಲ. ಆದರೆ ಒಬ್ಬರನ್ನೊಬ್ಬರು ಗಮನಿಸಿದ್ದರು. ಅವನ ಕುಖ್ಯಾತಿ ಅವಳನ್ನು ತಲ್ಲಣಗೊಳಿಸಿದ್ದರೂ ಬೈರನ್ ದಾರಿ ತಪ್ಪಿದ ಒಳ್ಳೆಯ ಮನುಷ್ಯ, ಅವನನ್ನು ಉಳಿಸುವುದು ಸಾಧ್ಯ ಎಂದು ಅವಳು ಬಗೆದಿದ್ದಳು. ಆ್ಯನಬೆಲಾಳಂತಹ ತತ್ವಶಾಸ್ತ್ರ, ಗಣಿತ, ಪ್ರೌಢಸಾಹಿತ್ಯ ಓದಿದ್ದ ವಿಚಾರವಂತ ಮಹಿಳೆಯೊಂದಿಗೆ ಗೆಳೆತನಕ್ಕೆ ಬೈರನ್ನನ ಕಾರ್ಯಕ್ರಮದಲ್ಲಿ ಆಸ್ಪದವಿರಲಿಲ್ಲ. ಆದರೆ ಅವಳು ಅಪಾರ ಸಂಪತ್ತಿಗೆ ವಾರಸುದಾರಳಾಗುವವಳಿದ್ದಳು: ಅಂಥ ವಾರಸುದಾರಳನ್ನು ವರಿಸಿ ತನ್ನ ಚಿಲ್ಲಾಪಿಲ್ಲಿಯಾದ ಆರ್ಥಿಕ ಸ್ಥಿತಿಯಿಂದ ಪಾರಾಗುವ ಹಂಚಿಕೆಯನ್ನು ಆತ ಮಾಡಿದ. ಕ್ಯಾರೋಲಿನಳೊಂದಿಗೆ ಪ್ರಕ್ಷುಬ್ಧ ಪ್ರೇಮ ಪ್ರಕರಣ ಕೊನೆಗೊಂಡಾಗ ಬೈರನ್ ಆ್ಯನಬೆಲಾಳೊಂದಿಗೆ ಅವಳ ಕಕ್ಕ ಲೇಡಿ ಮೆಲ್ಬೋರ್ನಳ ಮುಖಾಂತರ ಮದುವೆಯ ಪ್ರಸ್ತಾಪ ಮಾಡಿದ. ಕ್ಯಾರೊಲಿನಳ ಅತ್ತೆಯೂ ಆಗಿದ್ದ ಲೇಡಿ ಮೆಲ್ಬೋರ್ನಳಿಗೆ ಈ ಅಪಾಯಕರ ತರುಣ ಒಂದು ನೆಲೆಗೆ ಹತ್ತುವುದ ಬೇಕಿತ್ತು. ಆದರೆ ಆ್ಯನಬೆಲಾ ಈ ಪ್ರಸ್ತಾಪವನ್ನು ತಿರಸ್ಕರಿಸಿದಳು. ಬೈರನ್ ಆ್ಯನಬೆಲಾಳೊಂದಿಗೆ ಪತ್ರವ್ಯವಹಾರ ಮುಂದುವರಿಸಿದ. ಸೆಪ್ಟೆಂಬರ್ ೧೮೧೪ರಲ್ಲಿ ಪುನಃ ಪ್ರಸ್ತಾಪ ಮಾಡಿದ. ಈ ಸಲ ಅವಳು ಒಪ್ಪಿಗೆ ನೀಡಿದಳು.

ಬೈರನ್ ಮತ್ತು ಆ್ಯನಬೆಲಾರ ವೈವಾಹಿಕ ಜೀವನದಲ್ಲಿ ಬಲು ಬೇಗ ವಿರಸ ಮೂಡಿತು. ಆ್ಯನಬೆಲಾ ಡಿಸೆಂಬರ್ ೨, ೧೮೧೫ ರಂದು ಹೆಣ್ಣು ಮಗುವನ್ನು ಹೆತ್ತಳು. ಬೈರನ್ನನಿಗೆ ಬುದ್ಧಿಭ್ರಮಣೆಯಾಗಿದೆಯೆಂದು ಅವಳು ದೃಢವಾಗಿ ನಂಬಿದ್ದಳು. ಅದನ್ನು ಸಿದ್ಧಪಡಿಸಲು ಡಾಕ್ಟರನ್ನು ಹುಚ್ಚಿನ ಲಕ್ಷಣಗಳನ್ನು ಪಟ್ಟಿ ಮಾಡಿ ಹೇಳಿದಳು. ಡಾಕ್ಟರರು ಅವಳ ಶಂಕೆಯನ್ನು ಸ್ವೀಕರಿಸಲಿಲ್ಲ. ಜನವರಿ ೧೮೧೬ರಲ್ಲಿ ತನ್ನ ಸುಲ್ಲಿದ್ದ ಗಂಡನನ್ನು ತೊರೆದು ಆ್ಯನಬೆಲಾ ಅಟ್ಟದಿಂದ ಕೆಳಗಿಳಿದು ಬಂದು ಅವಳಿಗಾಗಿ ಕಾಯುತ್ತಿದ್ದ ಕುದುರೆಗಾಡಿಯಲ್ಲಿ ಕುಳಿತು ಕೂಸಿನೊಂದಿಗೆ ಹೊರಟುಹೋದಳು. ಫೆಬ್ರುವರಿ ಎರಡರಂದು ಬೈರನ್ನನ ವಕೀಲನ ಪತ್ರ ಬಂತು. ಆ್ಯನಬೆಲಾ ಮತ್ತು ಅವಳ ತಾಯಿ ತಂದೆಗಳಿಗೆ ವಿವಾಹವಿಚ್ಛೇದನ ಬೇಕಾಗಿದ್ದುದು ಅವರಿಗಿನ ವಿಷಯ. ಲಂಡನ್ನಿನ ತುಂಬೆಲ್ಲ ಅವರ ಬಗೆಗೆ ಗುಜುಗುಜು. ಬೈರನ್ ನಿರ್ಧಾರ ಬದಲಿಸುವಂತೆ ಆ್ಯನಬೆಲಾಳಿಗೆ ಪತ್ರ ಬರೆದು ಗೋಗರೆದ. ಆದರೆ ಆ್ಯನಬೆಲಾಳ ಹೃದಯ ಕರಗಲಿಲ್ಲ.

ಬೈರನ್ ಹೆಚ್ಚು ಹೆಚ್ಚು ಕುಖ್ಯಾತನಾದಂತೆ ಮಹಿಳೆಯರು ಅವನನ್ನು ಹೆಚ್ಚು ಹೆಚ್ಚು ಆರಾಧಿಸತೊಡಗಿದರು. ಅದು ಎಷ್ಟರ ಮಟ್ಟಿಗೆ ಅಂಧಾರಾಧನೆಯಾಗಿತ್ತೆಂದರೆ ತನ್ನ ಪತಿಯನ್ನು ತ್ಯಜಿಸಿದ್ದಕ್ಕಾಗಿ ಆ್ಯನಬೆಲಾಳನ್ನು ಯುರೋಪಿನ ಅರ್ಧದಷ್ಟು ಮಹಿಳೆಯರು ಹಳಿದರು. ನಿಜ ಹೇಳಬೇಕೆಂದರೆ ಮಹಿಳೆಯರು ತಾವಾಗಿಯೇ ಬೈರನ್ನನನ್ನು ಅರಸಿ ಬಂದು ತಮ್ಮನ್ನು ಅರ್ಪಿಸಿಕೊಳ್ಳುತ್ತಿದ್ದರು. ಅನುಭವಿ ಬೇಟೆಗಾರನಂತೆ ನಿರಾಯಾಸವಾಗಿ ಅವನು ಅವರನ್ನು ತನ್ನ ಪ್ರಣಯಜಾಲದಲ್ಲಿ ಸೆರೆಹಿಡಿಯುತ್ತಿದ್ದ. ಪ್ರಥಮ ಆ ದಿನಗಳಲ್ಲಿ ಕ್ಲೇರ್ ಕ್ಲೇರ್‌ಮಾಂಟಳೊಂದಿಗೆ ಮನಸ್ಸಿಲ್ಲದ ಪ್ರಣಯ ಜರುಗಿದುದು ಇದಕ್ಕೊಂದು ನಿದರ್ಶನ.

೧೮೧೬ರ ಮಾರ್ಚಿನಲ್ಲಿ ಒಂದು ದಿನ ಅಪರಿಚಿತ ಮಹಿಳೆಯಿಂದ ಒಂದು ಪತ್ರ ಬಂತು. ಅದರ ಒಕ್ಕಣೆ ಹೀಗಿತ್ತು: "ಸಂಪೂರ್ಣ ಅಪರಿಚಿತಳಾದವಳೊಬ್ಬಳು ನಿಮಗೆ ಬರೆಯುವ ಸ್ವಾತಂತ್ರ್ಯ ವಹಿಸುತ್ತಿರುವಳು. ನಿಮ್ಮ ಕರುಣೆಯನ್ನೇ ಅವಲಂಬಿಸಿದ ಸ್ತ್ರೀಯೊಬ್ಬಳು ತುಡಿಯುತ್ತಿರುವ ಹೃದಯದಿಂದ ನಿಮ್ಮನ್ನು ಅನೇಕ ವರ್ಷಗಳಿಂದ ಪ್ರೇಮಿಸುತ್ತಿದ್ದಾಳೆಂದು ನಿವೇದಿಸಿಕೊಂಡರೆ ನೀವು ಅವಳನ್ನು ಕೈಬಿಡುವಿರಾ ಇಲ್ಲವೆ ಗೋರಿಯ ಹಾಗೆ ಸುಮ್ಮನಿರುವಿರಾ?" ಇದು ಕೇವಲ ಸೋಗೆಂದು ಬಲ್ಲ ಬೈರನ್ ಈ ಪತ್ರವನ್ನು ಕಡೆಗಣಿಸಿದ. ಅವಳು ಮತ್ತೆ ಬರೆದಳು. "ಬೈರನ್ನನೊಂದಿಗೆ ಮಹತ್ವದ ಕೆಲಸದ

ಬಗ್ಗೆ ಸಮಾಲೋಚಿಸುವುದಕ್ಕಾಗಿ ಸ್ತ್ರೀಯೊಬ್ಬಳನ್ನು ಗುಪ್ತವಾಗಿ ಬರಮಾಡಿಕೊಳ್ಳಲು ಇಂದು ಸಂಜೆ ಏಳು ಗಂಟೆ ಅನುಕೂಲವೊ ಹೇಗೆ ತಿಳಿಸಬೇಕಾಗಿ ಕೋರಿಕೆ."

ಜಾಗರೂಕತೆಗಿಂತ ಕುತೂಹಲದ ಕೈಯೇ ಮೇಲಾಯಿತು. ಬೈರನ್ ಉತ್ತರ ಬರೆದ. ಯಾವುದೋ ವ್ಯಕ್ತಿ ಅದರಲ್ಲೂ ಅಪರಿಚಿತಳಾದವಳು ತನ್ನೊಂದಿಗೆ ಭೇಟಿಯಾಗಲು ಇಷ್ಟೊಂದು ಮಹತ್ವವನ್ನೇಕೆ ನೀಡುತ್ತಿರುವಳೆಂಬುದು ಲಾರ್ಡ ಬೈರನ್ನನಿಗೆ ತಿಳಿಯದು. ಆದರೂ ಅವನು ನಿಶ್ಚಿತ ಸಮಯಕ್ಕೆ ಮನೆಯಲ್ಲಿದ್ದ. ಅಂದು ಸಂಜೆ ಆ ಹುಡುಗಿ ೧೩ ಪಿಕಡೆಲಿ ಟೆರೆಸಿಗೆ ಬಂದಳು. ಅವಳ ಪ್ರೇಮ ಹಳೆಯದಲ್ಲವೆಂದು ಬೈರನ್ ಮೊದಲ ನೋಟದಲ್ಲಿಯೇ ಕಂಡುಕೊಂಡ. ಅವಳ ವಯಸ್ಸು ಹದಿನೆಂಟಕ್ಕೆ ಕಡಿಮೆಯಿದ್ದರೂ ಅನುಭವ ಕಡಿಮೆಯಿರಲಿಲ್ಲ. ನೋಡಲೂ ಅಷ್ಟು ಆಕರ್ಷಕಳಾಗಿರಲಿಲ್ಲ. ಆದರೆ ಅವಳ ಉತ್ಕಟತೆ ಅವನ ಮೇಲೆ ಮಾಡಿದ ನಿರ್ಧಾರಿತ ಆಕ್ರಮಣಕ್ಕೆ ತಕ್ಕುದಾಗಿತ್ತು.

ಬೈರನ್ನನ ಖಾಸಗಿ ಜೀವನ ಪತ್ರಿಕೆಗಳ ಗ್ರಾಸವಾಗಿ ಮುಂದುವರಿಯಿತು. ಅವನು ಗೋಷ್ಠಿಗಳಲ್ಲಿ ಇನ್ನೂ ಭಾಗವಹಿಸುತ್ತಿದ್ದ. ಆದರೆ ಮೊದಲಿನ ಸಂಭ್ರಮ ಇರಲಿಲ್ಲ. ಈ ಮೊದಲು ಅವನನ್ನು ಆತುರದಿಂದ ಸುತ್ತುವರಿಯುತ್ತಿದ್ದವರು ಈಗ ಮುಖ ತಿರುಗಿಸುತ್ತಿದ್ದರು. ಅವನು ಪ್ರವೇಶಿಸುತ್ತಲೆ ಎದ್ದು ಹೊರಟು ಬಿಡುತ್ತಿದ್ದರು. ಆದರೂ ಅಭಿಮಾನಿಗಳಿಗೆ ಕೊರತೆಯಿರಲಿಲ್ಲ. ಕುಮಾರಿ ಮರ್ಸರ ಎಲ್‌ಫಿನಸ್ಟನ್ನಳ ಸದ್ಭಾವನೆಯನ್ನು ಅವನು ಎಂದಿಗೂ ಮರೆಯಲಿಲ್ಲ. ಒಂದು ಗೋಷ್ಠಿಯಲ್ಲಿ ಅವಳು ಅವನಿದ್ದೆಡೆ ಬಂದು ಸ್ನೇಹಪೂರಿತ ಮುಗುಳ್ನಗೆ ಬೀರಿ. "ನೀನು ನನ್ನನ್ನು ಲಗ್ನವಾಗಿದ್ದರೆ ಹೀಗಾಗುತ್ತಿರಲಿಲ್ಲ," ಎಂದಳು.

ಕ್ಲೇರಳೊಂದಿಗಿನ ಪ್ರಕರಣ ಕೊನೆಗೊಂಡಿರಲಿಲ್ಲ ಅಥವಾ ಅವಳೇ ಅವನನ್ನು ಹಾಗೆಯೇ ಗೊಟ್ಟಿರಲಿಲ್ಲ. ಇಬ್ಬರೂ ಸೇರಿ ನಗರದಿಂದ ದೂರ ಹೋಗಿ ಸ್ವಚ್ಛಂದವಾಗಿ ಸಮಯ ಕಳೆದು ಮರುದಿನ ಬೆಳಿಗ್ಗೆ ಹಿಂತಿರುಗಿದರಾಯಿತೆಂಬ ಧೂರ್ತತನದ ಸೂಚನೆಯನ್ನು ಅವಳಿತ್ತಳು. ಬೈರನ್ ಅವಳ ಆಮಂತ್ರಣವನ್ನು ಸ್ವೀಕರಿಸಿದನೋ ಇಲ್ಲವೋ ತಿಳಿಯದು. ಆದರೆ ಒಂದು ಮಾತಂತೂ ನಿಜ. ಇಂಗ್ಲೆಂಡಿನಲ್ಲಿ ಕಳೆದ ಕೊನೆಯ ಅಸ್ತವ್ಯಸ್ತ ದಿನಗಳಲ್ಲಿ ಬೈರನ್ ಈ ಪರಿ ಗಂಟು ಬಿದ್ದವಳಲ್ಲದೆ ಇನ್ನೊಮ್ಮೆ ಎಂದೂ ಭೆಟ್ಟಿಯಾಗುವ ಸಂಭವವಿರದ ಆ ಹುಡುಗಿಗೆ ವಶನಾದ.

ಅವನ ಎಣಿಕೆ ತಪ್ಪಾಯಿತು. ಕ್ಲೇರ್ ಅವನ ಬೆನ್ನು ಬಿಡಲಿಲ್ಲ. ಜಿನೆವಾದಲ್ಲಿ ಮತ್ತೆ ಹಿಂಬಾಲು ಬಿದ್ದಳು. ಅವಳು ಶೆಲಿ ಮತ್ತು ಮಲ ಸೋದರಿ ಮೇರಿ ಗಾಡ್ವಿನ್ನರೊಂದಿಗೆ ಅಲ್ಲಿಗೆ ಬಂದಿದ್ದಳು. ಕಾಮೋದ್ರಿಕ್ತಳಾಗಿದ್ದ ಕ್ಲೇರ್ ಬೈರನ್ನನಿಗೆ ನಾಚಿಕೆಬಿಟ್ಟು ಅಂಟಿಕೊಂಡಳು. ತಾನಿಳಿದಿರುವ ಹೊಟೆಲಿನ ಕೋಣೆಗೆ ಬರುವಂತೆ ಗುಪ್ತ ಆಮಂತ್ರಣಗಳನ್ನು ಕಳಿಸಿದಳು. ಏನೇ ಆಗಲಿ, ಆ ಹುಡುಗಿ ಆತನನ್ನು ಸಂಧಿಸಲು ಎಂಟು ನೂರು ಮೈಲು ಪಯಣಿಸಿದ್ದಳು. ಇತ್ತೀಚೆಗೆ ಆತನೂ ಪ್ರೇಮದ ಅಭಾವದಿಂದ ಕೊರಗುತ್ತಿದ್ದ. ಗೆಲುವಾಗಿರಲು ಕೊಂಚ ಪ್ರಣಯಬೇಕಿತ್ತು. ಇವು ತರುವಾಯ ಆಗಸ್ಟಾಳಿಗೆ ಬರೆಯುತ್ತ ಬೈರನ್ ತನ್ನ ಸಮರ್ಥನೆಗೆ ನೀಡಿದ ಕಾರಣಗಳು. ಆದರೆ ಕ್ಲೇರಳ ಕಾಟ ವಿಪರೀತವಾಯಿತು. ಅವನು ಅವಳೊಂದಿಗೆ ಒಬ್ಬನೇ ಇರದಂತೆ ಉಪಾಯ ಮಾಡಹತ್ತಿದ.

ಆಗಿನ ಕುಟುಂಬ ನಿಯಂತ್ರಣ ಪೂರ್ವ ಕಾಲದಲ್ಲಿ ತಮ್ಮ ಹೃದಯವನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳಲಾರದ ಜನ ಅದರಿಂದಾಗುವ ಪರಿಣಾಮಗಳನ್ನು ನಿಯಂತ್ರಿಸಲಾರದವರಾಗಿದ್ದರು. ಅತ್ಯಂತ ತಾತ್ಪೂರ್ತಿಕ ಮತ್ತು ಮೇಲು ಮೇಲಿನ ಸಂಬಂಧ ಕೂಡ ಹೇಳಲಾಗದ ಪರಿಣಾಮ ಸೃಷ್ಟಿಸಬಲ್ಲದಾಗಿತ್ತು. ಕ್ಲೇರ್ ಗರ್ಭಿಣಿಯಾದಳು. ಬೈರನ್ ಜನಿಸುವ ಕೂಸಿನ ಪೋಷಣೆಯ ಜವಾಬ್ದಾರಿ ವಹಿಸಲಿಚ್ಛಿಸಿದ. ಆಗಸ್ಟಾ ಅದನ್ನು ಪೋಷಿಸಲಿ ಎಂದು ಸೂಚಿಸಿದ. ಕ್ಲೇರ್ ಒಪ್ಪಲಿಲ್ಲ. ಜನಿಸಿ ಹನ್ನೆರಡು

ಲೋಕಾಭಿರಾಮವಾದ ಸಂಭಾಷಣೆಯಲ್ಲಿ ತೊಡಗಿದರು. ಆವರೆ ಆಮದೆ ಬೇರೆ. ಪತಿ ವಚನವಿತ್ತ ಐದು ನಿಮಿಷಗಳು ಎಂದೋ ಗತಿಸಿದ್ದವು. ಗಂಡ ಬಂದು ನೆನಪಿಸಿದಾಗ ಅವಳು ಸ್ವಪ್ನದಿಂದ ಹೊರಬಂದಂತೆ ಹೊರಡಲಿದ್ದಳು. ಅದಾವುದೋ ಅವ್ಯಕ್ತ ಶಕ್ತಿ ಅವಳನ್ನು ಬೈರನ್ನನೆಡೆಗೆ ಸೆಳೆದಿತ್ತು.

ಗ್ವಿಚೋಲಿ ಮಧ್ಯಾಹ್ನ ನಿದ್ರೆಗೈಯುತ್ತಿದ್ದಾಗ ಅವರು ದಿನಾಲು ಭೇಟಿಯಾಗತೊಡಗಿದರು. ದೋಣಿಗನೊಬ್ಬ ಟೆರೆಸಾಳನ್ನು ಬೈರನ್ ಇದ್ದಲ್ಲಿಗೆ ಕರೆತರುತ್ತಿದ್ದ. ಮಧ್ಯಾಹ್ನದ ಅನುಪಸ್ಥಿತಿಗೆ ಗಂಡನೆದುರು ಟೆರೆಸಾ ನೀಡಿದ ನೆಪವೆಂದರೆ ತಮ್ಮ ಮನೆತನದ ಉಪಾಧ್ಯಾಯಿನಿ ಸಿಲ್ವೆಸ್ಟ್ರಿನಿಯ ಮನೆಗೆ ಫ್ರೆಂಚ್ ಕಲಿಯಲು ಹೋಗುತ್ತಿರುವೆನೆಂಬುದು. ಬಲು ರಮ್ಯವಾಗಿ ದಿನಗಳು ಉರುಳಿದವು. ಕೌಂಟ್ ಗ್ವಿಚೋಲಿಯನ್ನು ರ್‍ಯಾವೆನಾಕ್ಕೆ ಕರೆದೊಯ್ದಾಗ ಸುಂದರ ಸ್ವಪ್ನವೊಂದಕ್ಕೆ ತೆರೆಬಿತ್ತು. ಜೂನಿನಲ್ಲಿ ಬೈರನ್ ರ್‍ಯಾವೆನಾಕ್ಕೆ ಹೋದಾಗ ಟೆರೆಸಾ ತೀವ್ರ ಅನಾರೋಗ್ಯದಿಂದ ಬಳಲುತ್ತಿದ್ದಳು. ಬೈರನ್ನನ ವಿಯೋಗದಿಂದ ಅದು ಉಲ್ಬಣಿಸಿತ್ತು. ಅವನ ಸಹವಾಸದಲ್ಲಿ ಬೇಗ ಚೇತರಿಸಿಕೊಂಡಳು. ಅವರ ಬಗೆಗೆ ಬೀದಿ ಮಾತು ಹದ್ದಿತು. ಗ್ವಿಚೋಲಿ ಟೆರೆಸಾಳನ್ನು ಬೈರನ್ನನಿಂದ ದೂರ ಕರೆಯಲು ಸಿದ್ಧನಾದಾಗ ಅವಳು ಅತ್ತು ಅತ್ತು ಜಡ್ಡು ತಂದುಕೊಂಡಳು. ಉಪಾಯಗಾಣದೆ ಬೈರನ್ನನ್ನು ಪುನಃ ಆಮಂತ್ರಿಸಬೇಕಾಯಿತು. ಗ್ವಿಚೋಲಿ ಅವಳಿಂದ ವಿಚ್ಛೇದನ ಪಡೆದ ಟೆರೆಸಾ ತನ್ನ ತಂದೆಯೊಂದಿಗೆ ಇರತೊಡಗಿದಳು. ಮುಂದಿನ ಮೂರು ವರ್ಷ ಬೈರನ್ ಟೆರೆಸಾ ಪರಸ್ಪರ ವಿವಾಹಿತರಂತೆಯೇ ಜೀವಿಸಿದರು.

ದೀರ್ಘ ಕಾಲದವರೆಗೆ ಬೈರನ್ನನ ಮನಸ್ಸು ಟೆರೆಸಾಳಿಗಾಗಿ ಪ್ರೇಮ ಮತ್ತು ಗ್ರೀಸಿಗಾಗಿ ಪ್ರೇಮ ಎರಡರ ಮಧ್ಯೆ ತುಯ್ದಾಡಿತು. ಕೊನೆಗೂ ಗ್ರೀಸ್ ಗೆದ್ದಿತು. ತುರ್ಕಿ ಆಕ್ರಮಣದಿಂದ ಗ್ರೀಸ್ ಅನ್ನು ಸ್ವತಂತ್ರಗೊಳಿಸುವ ಹೋರಾಟದಲ್ಲಿ ಧುಮ್ಮಿಕ್ಕುವ ಬಹು ದಿನದ ಆಕಾಂಕ್ಷೆಯನ್ನು ಈಗ ಬೈರನ್ ಕಾರ್ಯಗತಗೊಳಿಸಿದ. ಅವನು ಯಾವುದೋ ಕ್ಷುಲ್ಲಕ ರೋಗದಿಂದ ನರಳಿ ಮಡಿಯಲಿಚ್ಛಿಸಿರಲಿಲ್ಲ. ಅವನ ನಾಟಕೀಯ ಸ್ವಭಾವಕ್ಕೆ ತೋಪಿನ ಗುಂಡುಗಳು ಮತ್ತು ಝಳಪಳಿಸುವ ಕತ್ತಿಗಳ ಮಧ್ಯೆ ವೀರನ ಸಾವು ಹೆಚ್ಚು ಇಷ್ಟವಾಗಿತ್ತು. ಗ್ರೀಸ್ ತಲಪಿದಾಗ ಬೈರನ್ನನಿಗೆ ವೀರೋಚಿತ ಸ್ವಾಗತ ನೀಡಿ ಅವನನ್ನು ಗ್ರೀಸಿನ ವಿಮೋಚಕನೆಂದು ಹಾಡಿ ಹರಸಲಾಯಿತು.

ಬೈರನ್ ೬೦೦ ಗ್ರೀಕ್ ಕಾಲಾಳುಗಳ ಪಡೆಗೆ ಅಧಿಕಾರಿಯಾದ. ಅವರಲ್ಲಿ ಶಿಸ್ತು ತರಲ, ಅವರಿಗೆ ಸೈನಿಕ ತರಬೇತಿ ನೀಡಲು ಹೆಣಗಿದ. ಮೃತ್ಯುಛಾಯೆ ಹಿಂಬಾಲಿಸಿತು. ಅವನು ಸಾವಿಗೆ ಅಂಜಲಿಲ್ಲ. ಒಂದು ದಿನ ಮಳೆಯಲ್ಲಿ ನೆನೆದುದೆ ನೆಪವಾಗಿ ಶೀತಜ್ವರದಿಂದ ಮಲಗಿದವ ಮೇಲೇಳಲಿಲ್ಲ. ಅವನು ಆದೆ ಆಗ ೩೬ ವರ್ಷ ದಾಟಿದ್ದ. ಆದರೆ ಅವನ ಜೀವನದ ಗತಿ ಬಲು ವೇಗವಾಗಿತ್ತಾದ್ದರಿಂದ ಅವನು ಹೆಚ್ಚು ವಯಸ್ಸಾದವನಂತೆ ಕಂಡ. ಒಂದು ವಾರ ಹಾಗೂ ಹೀಗೂ ಹಾಸಿಗೆಯಿಂದಲೇ ವ್ಯವಹಾರ ನೋಡಿಕೊಂಡ. ಆ ಮೇಲೆ ಚಿತ್ತಭ್ರಮೆಯಾಯಿತು. ತುರ್ಕರ ವಿರುದ್ಧ ತಾನು ಸೈನ್ಯದ ಮುಂಚೂಣಿಯಲ್ಲಿ ಹೋರಾಡುತ್ತಿರುವಂತೆ ಕಲ್ಪಿಸಿಕೊಳ್ಳುತ್ತಿದ್ದ. ಏಪ್ರಿಲ ೧೮ರ ಸಂಜೆ "ನಾನು ನಿದ್ರೆ ಮಾಡಬಯಸುತ್ತೇನೆ," ಎಂದು ಮೆಲುನುಡಿದವನು ಪ್ರಜ್ಞಾಹೀನ, ಸ್ಥಿತಿ ತಲಪಿದ. ೨೪ ಘಂಟೆಗಳ ತರುವಾಯ ಸದಾ ತಳಮಳಿಸುತ್ತಿದ್ದ ಅದ್ಭುತ ಪ್ರೇಮಿಯ ಹೃದಯ ಚಿರಶಾಂತಿಯನ್ನು ಪಡೆಯಿತು.

(ಈ ಲೇಖನದೊಟ್ಟಿಗಿರುವ ಫೋಟೋಗಳನ್ನು ಶ್ರೀ ಶಶಿ ಸಾಲಿ, ಧಾರವಾಡ ಇವರು ಒದಗಿಸಿದ್ದಾರೆ.)



339-11

# ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ವ್ಯಾಪಕ ಕಾರ್ಯಕ್ರಮ

ಕರ್ನಾಟಕದಲ್ಲಿ ಸಣ್ಣ ಕೈಗಾರಿಕೆ, ಗುಡಿ ಕೈಗಾರಿಕೆ, ಕೈಮಗ್ಗ ಮತ್ತು ಕರಕುಶಲ ಕೈಗಾರಿಕೋದ್ಯಮಗಳ ಅಭಿವೃದ್ಧಿಗಾಗಿ ಹೊಸ ಉತ್ತೇಜಕ ವಾತಾವರಣ ಕಲ್ಪಿತವಾಗಿದೆ.

೧೯೮೪-೮೫ನೇ ಸಾಲಿಗಾಗಿ ಸಣ್ಣ ಹಾಗೂ ಗೃಹ ಕೈಗಾರಿಕೆಗಳ ಅಭಿವೃದ್ಧಿ ಸಾಧಿಸಲು ಅನೇಕ ಆಶಾದಾಯಕವಾದ ಹೊಸ ಯೋಜನೆಗಳನ್ನು ರೂಪಿಸಲಾಗಿದೆ.

ಈ ಯೋಜನೆಗಳು, ಆಸಕ್ತ ಕೈಗಾರಿಕೋದ್ಯಮಿಗಳಿಗೆ ಆರ್ಥಿಕ ಸಹಾಯ ಮತ್ತು ತಾಂತ್ರಿಕ ಜ್ಞಾನವನ್ನು ಸಹ ಒದಗಿಸುತ್ತವೆ.

**ಈ ಯೋಚನೆಗಳು:**

೧. ೧೯೮೫ನೇ ಡಿಸೆಂಬರ ತಿಂಗಳ ವೇಳೆಗೆ ೩೬ ಕೋಟಿ ರೂ. ವೆಚ್ಚದಲ್ಲಿ ೧೫೧೦ ಕೈಗಾರಿಕಾ ಶೆಡ್ಡುಗಳನ್ನು ನಿರ್ಮಿಸಲಾಗುವದು. ಕಳೆದ ೨೦ ವರ್ಷಗಳಲ್ಲಿ ೧೨೦ ಕೋಟಿ ರೂ. ವೆಚ್ಚದಲ್ಲಿ ೨೦೦೦ ಕೈಗಾರಿಕಾ ಶೆಡ್ಡುಗಳನ್ನು ಮಾತ್ರ ನಿರ್ಮಿಸಲಾಗಿತ್ತು.

೨. ಔಷಧಿಗಳು, ಚರ್ಮ ಮತ್ತು ಕೈಗಾರಿಕಾ ಸಲಕರಣೆಗಳು ಮುಂತಾದವುಗಳಿಗೆ ಸಕ್ರಿಯ ಕೈಗಾರಿಕಾ ಎಸ್ಟೇಟುಗಳನ್ನು ಸ್ಥಾಪಿಸಲಾಗುವದು.

೩. ಸಣ್ಣ ಕೈಗಾರಿಕೆಗಳ ವ್ಯಾಪಾರ ನಿಗಮದ ನಿರ್ಮಾಣ.

೪. ಕೈಮಗ್ಗ ತಾಂತ್ರಿಕ ಸಂಸ್ಥೆಯ ಸ್ಥಾಪನೆ.

೫. ರಾಜ್ಯದ ನಾರು ಅಭಿವೃದ್ಧಿ ನಿಗಮದ ಸ್ಥಾಪನೆ.

೬. ಚರ್ಮ ತಾಂತ್ರಿಕ ಸಂಸ್ಥೆಯ ಸ್ಥಾಪನೆ.

೭. ಪ್ರಾಥಮಿಕ ಸಹಕಾರಿ ಕೈಮಗ್ಗ ಸಂಘಗಳ ಎಲ್ಲ ನೇಕಾರ ಸದಸ್ಯರುಗಳಿಗೂ ಈಗ ಅನ್ವಯವಾಗುತ್ತಿರುವ ಉಳಿತಾಯ ಕಾಣಿಕೆ ನಿಧಿ ಯೋಜನೆಯನ್ನು (Contributory thiift fund scheme) ಕೈಗಾರಿಕಾ ಅಭಿವೃದ್ಧಿ ನಿಗಮಕ್ಕೆ ವಿಸ್ತರಿಸುವುದು.

೮. ವಿದೇಶಗಳಲ್ಲಿ ವಾಸಿಸುತ್ತಿರುವ ಭಾರತೀಯರಿಗಾಗಿಯೇ ಪ್ರತ್ಯೇಕ ಕೈಗಾರಿಕಾ ವಲಯಗಳ ಅಭಿವೃದ್ಧಿ.

**ಕರ್ನಾಟಕ ವಾರ್ತೆ**

ಡಿಐಪಿ ೧೨೨೯/೮೪

# ಮರುಭೂಮಿಯಲ್ಲೊಂದು ಸಾಹಸಗಾಥೆ

**ಅನುವಾದ : ಆರ್. ಜಿ. ದೇಸಾಯಿ**

ಸುಮಾರು ನಲವತ್ತು ವರುಷಗಳ ಹಿಂದೆ ಆಲ್ಪ್ಸ ಪರ್ವತವು ಫ್ರಾನ್ಸಿನ ಪ್ರಾವ್ಹೆನ್ಸ್ ಪ್ರಾಂತದಲ್ಲಿ ಕಾಲು ಚಾಚಿದ ಭಾಗದಲ್ಲಿ ನಾನು ಕಾಲ್ನಡಿಗೆಯ ಪ್ರವಾಸವನ್ನು ಕೈಗೊಂಡಿದ್ದ. ಆ ಕಾಲದಲ್ಲಿ ಆ ಭಾಗದಲ್ಲಿ ಕೆಲವು ಕಾಡು ಕಂಟಿಗಳನ್ನುಳಿದು ಮತ್ತೇನೂ ಬೆಳೆಯುತ್ತಿದ್ದಿಲ್ಲ.

ಮೂರು ದಿನಗಳ ಪ್ರವಾಸದ ನಂತರ ನಾನು ಅತ್ಯಂತ ಬರಡಾದ ಪ್ರದೇಶಕ್ಕೆ ಬಂದೆ. ಒಂದು ಹಾಳು ಹಳ್ಳಿಯ ಬಳಿ ಬಿಡಾರ ಹಾಕಿದೆ. ಅಲ್ಲಿ ಗುಂಪು ಗುಂಪಾದ ಕೆಲವು ಮನೆಗಳು ಕಂಡು ಬಂದವು. ಹಿಂದಿನ ದಿನವೆ ನನ್ನ ಬಳಿಯಲ್ಲಿದ್ದ ನೀರು ತೀರಿ ಹೋಗಿತ್ತು. ಸಮೀಪದಲ್ಲಿ ಬಾವಿ ಅಥವಾ ಝರಿ ಇರಬಹುದೆಂದು ಆಶೆಯುಂಟಾಯಿತು. ಅಲ್ಲಲ್ಲಿ ವಿಚಾರಿಸಿದಾಗ ನಿಜವಾಗಿಯೂ ಒಂದು ಝರಿ ಇರುವುದು ತಿಳಿದುಬಂತು. ಆದರೆ ಅದು ಬತ್ತಿ ಹೋಗಿತ್ತು. ಇದ್ದ ಐದಾರು ಮನೆಗಳಿಗೆ ಸೂರೇ ಇರಲಿಲ್ಲ. ಆಗಲೋ ಈಗಲೋ ಬೀಳುತ್ತವೆನ್ನುವ ಗೋಪುರಗಳಿದ್ದ ಸಣ್ಣ ಚರ್ಚುಗಳು ಮಾತ್ರ ಅಲ್ಲಿದ್ದವು. ಸುತ್ತ ಮುತ್ತಲೂ ಜೀವನದ ಸುಳಿವೇ ಇರಲಿಲ್ಲ.

ಜೂನ್ ತಿಂಗಳ ಒಂದು ದಿನ. ಎಲ್ಲೆಡೆಯೂ ಉಜ್ವಲ ಸೂರ್ಯ ಪ್ರಕಾಶ ಬಿದ್ದಿತ್ತು. ಗಾಳಿ ಜೋರಾಗಿ ಬೀಸುತ್ತಿತ್ತು. ಭೋಜನದಲ್ಲಿ ನಿರತವಾದ ಸಿಂಹವನ್ನು ಕೆಣಕಿದರೆ ಅದು ಗರ್ಜಿಸುವಂತೆ ಗಾಳಿಯು ಶವಗಳಂತಿದ್ದ ಆ ಮನೆಗಳ ಮೇಲೆ ಬೀಸುತ್ತ ಗುರುಗುಡುತ್ತಿತ್ತು. ನಿರ್ವಾಹವಿಲ್ಲದೆ ನಾನು ಆ ಸ್ಥಳವನ್ನು ಬಿಡಬೇಕಾಯಿತು.

ಐದು ಗಂಟೆ ತಿರುಗಾಡಿದರೂ ಇನ್ನೂ ನೀರು ಸಿಕ್ಕಿಲ್ಲ. ನೀರು ಸಿಗುವ ಆಶೆಯನ್ನು ಹುಟ್ಟಿಸುವ ಯಾವ ಕುರುಹುಗಳೂ ಕಾಣಿಸಲಿಲ್ಲ. ದೂರ ದೃಷ್ಟಿಸಿದಾಗ ಒಂದು ಕಪ್ಪು ಆಕೃತಿ ಕಂಡಿತು. ಅದು ಗಿಡದ ಬೊಡ್ಡೆಯಾಗಿರಬಹುದೆಂದು ಊಹಿಸಿ ಹತ್ತಿರ ಹೋದೆ. ಆದರೆ ಅದು ಬೊಡ್ಡೆಯಾಗಿರದೆ ಕುರುಬನಾಗಿದ್ದ. ಅವನ ಸುತ್ತಲೂ ಸುಡುತ್ತಿರುವ ನೆಲದ ಮೇಲೆ ಮೂವತ್ತು ಕುರಿಗಳು ಇದ್ದವು.

**ಮೂಲ: ('೧೯೭೭ರ ಜುಲೈ 'Sri Aurobindo's Action' ಮಾಸಪತ್ರಿಕೆಯಲ್ಲಿ ಅನಾಮಧೇಯರೊಬ್ಬರು ಬರೆದ ಲೇಖನ)**

ಅತನು ತನ್ನ ಕಮಂಡಲಿನಂಥ ಪಾತ್ರೆಯಿಂದ ನನಗೆ ಕುಡಿಯಲು ನೀರು ಕೊಟ್ಟು, ಅನಂತರ ತನ್ನ ಗುಡಿಸಲಿಗೆ ಕರೆದುಕೊಂಡು ಹೋದ.

ಅವನ ಮಾತುಗಳು ಅತ್ಯಂತ ಮಿತವಾಗಿದ್ದವು. ಏಕಾಂತವಲ್ಲಿ ಇರುವವರ ರೀತಿಯೇ ಹೀಗೆ. ಅವನಲ್ಲಿ ಆತ್ಮವಿಶ್ವಾಸ ಸ್ವಲ್ಪ ಹೆಚ್ಚಾಗಿಯೆ ಇತ್ತೆಂದು ನನಗೆ ಅನಿಸಿತು. ಅವನು ಒಂದು ಕಲ್ಲಿನ ಕಟ್ಟಡದ ಭಗ್ನಾವಶೇಷವನ್ನು ತನ್ನ ಸ್ವಂತ ಪ್ರಯತ್ನದಿಂದ ಸದೃಢವಾದ ಮನೆಯನ್ನಾಗಿ ಪರಿವರ್ತಿಸಿದ್ದ.

ಅಲ್ಲಿ ಎಲ್ಲವೂ ಅಚ್ಚುಕಟ್ಟಾಗಿತ್ತು. ಪಾತ್ರೆಗಳು ಬೆಳಗಲ್ಪಟ್ಟಿದ್ದವು. ನೆಲವನ್ನು ಸ್ವಚ್ಛವಾಗಿ ಉಡುಗಲಾಗಿತ್ತು. ಒಲೆಯ ಮೇಲೆ ಸಾರು ಕುದಿಯುತ್ತಿತ್ತು. ಆ ಕುರುಬ ಸ್ವಚ್ಛವಾಗಿ ಮುಖಕ್ಷೌರ ಮಾಡಿಕೊಂಡಿದ್ದ. ಸಾರನ್ನು ಇಬ್ಬರೂ ಹಂಚಿಕೊಂಡು ಸವಿದೆವು. ನನ್ನ ಚಿಲುಮೆಯನ್ನು ಅವನಿಗೆ ಕೊಟ್ಟಾಗ ತಾನು ತಂಬಾಕು ಸೇದುವುದಿಲ್ಲ ಎಂದು ಹೇಳಿದ.

ಆ ರಾತ್ರಿಯನ್ನು ನಾನು ಅಲ್ಲಿಯೆ ಕಳೆಯುವುದೆಂದು ಮೊದಲೇ ನಿರ್ಧರಿಸಲಾಗಿತ್ತು. ಏಕೆಂದರೆ ಅತ್ಯಂತ ಸಮೀಪದ ಹಳ್ಳಿಗೆ ಕೂಡ ಒಂದೂವರೆ ದಿನದ ದಾರಿಯಿತ್ತು. ಆ ಪರ್ವತದ ಇಳಿಜಾರುಗಳಲ್ಲಿ ಹಳ್ಳಿಗಳು ಬಹಳ ದೂರದಲ್ಲಿದ್ದವೆಂಬುದು ನನಗೂ ಚೆನ್ನಾಗಿ ಗೊತ್ತಿತ್ತು. ಆ ಹಳ್ಳಿಗಳಲ್ಲಿ ಇದ್ದಲಿ ಮಾಡುವವರು ವಾಸಿಸುತ್ತಿದ್ದರು. ಅವರದು ಬಹಳ ಕಷ್ಟಕರವಾದ ಜೀವನ. ಹಳ್ಳಿಯ ಜನರು ಗುಂಪು ಗುಂಪಾಗಿ ಇರುತ್ತಿದ್ದರು. ಹವಾಮಾನವು ಬಹಳ ಕಠೋರವಾಗಿತ್ತು.

ಕುರುಬನು ಒಂದು ಚೀಲದ ತುಂಬಾ ಓಕ್ ಮರದ ಹಣ್ಣುಗಳನ್ನು ತಂದು ಮೇಜಿನ ಮೇಲೆ ಸುರುವಿ ಅವುಗಳನ್ನು ಏಕಾಗ್ರತೆಯಿಂದ ಪರೀಕ್ಷಿಸಹತ್ತಿದ. "ನಾನೂ ಒಂದಿಷ್ಟು ಸಹಾಯ ಮಾಡಲೆ?" ಎಂದು ಕೇಳಿದಾಗ ಆತ, "ಬೇಡ. ಇದು ನನ್ನ ಕೆಲಸ," ಎಂದು ಚುಟುಕಾಗಿ ಹೇಳಿದ. ಅವನು ಅಷ್ಟು ಜಾಗರೂಕತೆಯಿಂದ ಕಾರ್ಯ ಮಾಡುತ್ತಿರುವದನ್ನು ನೋಡಿ ನಾನು ಆಗ್ರಹ ಮಾಡಲಿಲ್ಲ. ಇದಿಷ್ಟೆ ನಮ್ಮ ಸಂಭಾಷಣೆ. ನೂರು ಉತ್ತಮ ಹಣ್ಣುಗಳನ್ನು ಆಯ್ದ ಮೇಲೆ ಅವನು ಮಲಗಿಕೊಂಡ.

ಈ ಮನುಷ್ಯನ ಜೊತೆಗೆ ಇದ್ದಾಗ ಶಾಂತಿಯ ಅನುಭವವಾಗುತ್ತಿತ್ತು. "ಇನ್ನೊಂದು ದಿನ ಇಲ್ಲಿ ವಿಶ್ರಾಂತಿ ತೆಗೆದುಕೊಳ್ಳಬಹುದೆ?" ಎಂದು ಮಾರು ದಿನ ಕೇಳಿದೆ. ಅದು ಅವನಿಗೆ ಸ್ವಾಭಾವಿಕವೇ ಅನಿಸಿತು. ನಿಜ ಹೇಳಬೇಕೆಂದರೆ ನನಗೆ ವಿಶ್ರಾಂತಿ ಅವಶ್ಯವಿದ್ದಿಲ್ಲ. ಅವನ ಬಗ್ಗೆ ಹೆಚ್ಚು ತಿಳಿದುಕೊಳ್ಳಬೇಕೆಂದೇ ನಾನು ಹಾಗೆ ಕೇಳಿದೆ. ಮರುದಿನ ದಡ್ಡಿಯ ಬಾಗಿಲನ್ನು ತೆರೆದು ಕುರಿಗಳನ್ನು ಮೇಯಿಸಲು ಅಡವಿಗೆ ಒಯ್ದ. ಹೊರಡುವ ಮುಂಚೆ ತಾನು ಆರಿಸಿಟ್ಟ ಓಕ್ ಗಿಡದ ಹಣ್ಣುಗಳನ್ನು ಒಂದು ನೀರು ತುಂಬಿದ ಪಾತ್ರೆಯಲ್ಲಿ ಹಾಕಿದ.

ಅವನು ತನ್ನ ಸಂಗಡ ನಾಲ್ಕೈದು ಅಡಿಗಳಷ್ಟು ಉದ್ದವಿದ್ದ ಒಂದು ದಪ್ಪ ಕಬ್ಬಿಣದ ಸಲಾಕೆಯನ್ನು ಒಯ್ದುದ್ದನ್ನು ನೋಡಿದೆ. ಅವನು ಹೋದ ಹಾದಿಗೆ ಸಮಾಂತರವಾದ ಮತ್ತೊಂದು ಹಾದಿಯಿಂದ ನಾನೂ ಹೊರಟೆ. ಕುರಿಗಳು ಮೇಯುವ ಸ್ಥಳ ಒಂದು ಕೊಳ್ಳದಲ್ಲಿ ಇತ್ತು. ಆ ಸಣ್ಣ ಕುರಿ ಹಿಂಡನ್ನು ನಾಯಿಯ ರಕ್ಷಣೆಯಲ್ಲಿ ಬಿಟ್ಟು ನಾನು ನಿಂತಿದ್ದ ದಿನ್ನೆಯತ್ತ ಬಂದ. ಬೇರೆ ಕೆಲಸವಿರದಿದ್ದರೆ ತನ್ನ ಜೊತೆಗೆ ಬರಬಹುದೆಂದು ಹೇಳಿ ಸುಮಾರು ನೂರು ಯಾರ್ಡು ದೂರದಲ್ಲಿದ್ದ ದಿನ್ನೆಯ ಕಡೆಗೆ ಹೊರಟ.

ಅಲ್ಲಿ ಅವನು ತನ್ನ ಸಲಾಕೆಯಿಂದ ನೆಲದಲ್ಲಿ ಒಂದು ರಂಧ್ರವನ್ನು ಮಾಡಿದ. ಅದರಲ್ಲಿ ಒಂದು ಹಣ್ಣನ್ನು ಇಟ್ಟು ಮತ್ತೆ ಮಣ್ಣಿನಿಂದ ಅದನ್ನು ಮುಚ್ಚಿದ. ಅವನು ಓಕ್ ವೃಕ್ಷವನ್ನು ನೆಡುತ್ತಿದ್ದಾನೆ ಎನ್ನುವುದು ಆಗ ಗೊತ್ತಾಯಿತು. "ಈ ಭೂಮಿ ನಿಮ್ಮದೆ?" ಎಂದು ಕೇಳಿದೆ. ಅಲ್ಲವೆಂದು ಉತ್ತರ ಬಂದಿತು. ಅದು ಯಾರ ಭೂಮಿ ಎಂಬುದು ಅವನಿಗೆ ಗೊತ್ತಿರಲಿಲ್ಲ. ಹೀಗೆಯೆ ತಾನು ತಂದ ನೂರು ಹಣ್ಣುಗಳನ್ನು ಅತ್ಯಂತ ಕಾಳಜಿಯಿಂದ ಊರಿದ.

ಮಧ್ಯಾಹ್ನದ ಊಟದ ನಂತರ ಮತ್ತೆ ಗಿಡ ನೆಡುವುದನ್ನು ಪ್ರಾರಂಭಿಸಿದ.

ನಾನು ಆಗ್ರಹದಿಂದ ಅನೇಕ ಪ್ರಶ್ನೆಗಳನ್ನು ಕೇಳಿದೆ. ಆಗ ಅವನಿಂದ ತಿಳಿದದ್ದಿಷ್ಟು. ಮೂರು ವರ್ಷಗಳಿಂದ ಆತ ಗಿಡಗಳನ್ನು ನೆಡುತ್ತಿದ್ದ. ಈಗಾಗಲೇ ಒಂದು ಲಕ್ಷ ಗಿಡಗಳನ್ನು ನೆಟ್ಟಿದ್ದ. ಅವುಗಳಲ್ಲಿ ಇಪ್ಪತ್ತು ಸಾವಿರದಷ್ಟು ಅಂಕುರಿಸಿದ್ದವು. ಅವುಗಳಲ್ಲಿ ಅರ್ಧದಷ್ಟು ಇಲಿಗಳು ಅಥವಾ ಯಾವುದೇ ಅನಿರೀಕ್ಷಿತ ಗಂಡಾಂತರಗಳಿಂದ ನಾಶವಾಗಬಹುದು. ಏನೂ ಇಲ್ಲದ ಮರುಭೂಮಿಯಲ್ಲಿ ಕೊನೆಗೆ ಒಂದು ಸಾವಿರದಷ್ಟು ಓಕ್ ಗಿಡಗಳಾದರೂ ಉಳಿಯುತ್ತವೆಯಲ್ಲ ಎಂದು ಅವನು ಹೇಳಿದ.

ನೋಡಲಿಕ್ಕೆ ಆತ ಎಪ್ಪತ್ತು ವರ್ಷದವನ ಹಾಗೆ ಕಾಣುತ್ತಿದ್ದ. ವಯಸ್ಸನ್ನು ಕೇಳಿದಾಗ ೫೫ ಎಂದು ಹೇಳಿದ. ಅವನ ಹೆಸರು ಎಲ್ಝಿಯಾರ್ಡ್ ಬೂಫಿಯರ್. ಕೆಳಗೆ ಬಯಲಿನಲ್ಲಿ ಅವನದೊಂದು ಹೊಲವಿತ್ತು. ಅಲ್ಲಿ ಒಕ್ಕಲುತನ ಮಾಡಿಕೊಂಡಿದ್ದ ಒಬ್ಬನೇ ಮಗ ತೀರಿಹೋದ. ನಂತರ ಅವನ ಪತ್ನಿಯೂ ತೀರಿಕೊಂಡಳು. ಆಗ ಆತ ಈ ನಿರ್ಜನ ಸ್ಥಳಕ್ಕೆ ಬಂದ. ತನ್ನ ಕುರಿಗಳು ಮತ್ತು ತನ್ನ ನಾಯಿಯೊಡನೆ ವಿರಾಮವಾಗಿ ಜೀವಿಸುವದರಲ್ಲಿ ಅವನಿಗೆ ತೃಪ್ತಿ. ಗಿಡಗಳಿಲ್ಲದ್ದರಿಂದ ಈ ಭೂಮಿ ಹಾಳಾಗುತ್ತಿದೆ ಎಂದೂ ಬೇರೆ ಏನೂ ಅವಸರದ ಕೆಲಸ ಇಲ್ಲದ್ದರಿಂದಲೂ ಈ ಕೆಲಸವನ್ನು ಕೈಕೊಂಡಿದ್ದ.

ಮೂವತ್ತು ವರ್ಷಗಳಲ್ಲಿ ಈ ಒಂದು ಸಾವಿರ ಓಕ್ ಗಿಡಗಳು ಅದ್ಭುತವಾಗಿ ಬೆಳೆಯಬಹುದೆಂದು ನಾನು ಹೇಳಿದೆ. "ದೇವರು ನನಗೆ ಸಾಕಷ್ಟು ಆಯುಷ್ಯವನ್ನು ದಯಪಾಲಿಸಿದರೆ ಮೂವತ್ತು ವರ್ಷಗಳಲ್ಲಿ ಇನ್ನೂ ಬಹಳಷ್ಟು ಗಿಡಗಳನ್ನು ನೆಡುವೆ. ಆಗ ಇವೆಲ್ಲವೂ ಮಹಾಸಾಗರದಲ್ಲಿ ಒಂದು ಹನಿಯಂತೆ ಆಗಬಹುದು," ಎಂದು ಸಹಜವಾಗಿ ಎಂಬಂತೆ ಹೇಳಿದ.

ಇದಲ್ಲದೆ ಅವನು ಬೀಚ್ ಗಿಡಗಳನ್ನು ಬೆಳೆಸುವ ಪದ್ಧತಿಯನ್ನೂ ಅಭ್ಯಸಿಸುತ್ತಿದ್ದ. ಬೀಚ್ ಕಾಯಿಗಳಿಂದ ಸಸಿಗಳನ್ನು ತಯಾರಿಸಿ ತನ್ನ ಮನೆಯ ಹತ್ತಿರ ಬೇಲಿಯಿಂದ ರಕ್ಷಿತವಾದ ಸ್ಥಳದಲ್ಲಿ ಬೆಳೆಸುತ್ತಿದ್ದ. ಬರ್ಚ್ ಗಿಡಗಳನ್ನು ಬೆಳೆಸುವ ಬಗ್ಗೆಯೂ ಆಲೋಚಿಸುತ್ತಿದ್ದ.

ಮರುದಿನ ನಾನು ಅವನಿಂದ ಬೀಳ್ಕೊಂಡೆ.

ಮರು ವರುಷ (೧೯೧೪) ಪ್ರಥಮ ಜಾಗತಿಕ ಯುದ್ಧ ಪ್ರಾರಂಭವಾಯಿತು. ಮುಂದಿನ ಐದು ವರುಷ ಯುದ್ಧದಲ್ಲಿ ತೊಡಗಿಬಿಟ್ಟ ಸೈನಿಕನಿಗೆ ಮರಗಳ ಬಗ್ಗೆ ಯೋಚಿಸಲು ವೇಳೆ ಸಿಗುವುದಾದರೂ ಎಲ್ಲಿ? ನಿಜ ಹೇಳಬೇಕೆಂದರೆ, ಆ ಕಾರ್ಯ ನನಗಷ್ಟು ಹಿಡಿಸಲಿಲ್ಲ. ಸ್ಟ್ಯಾಂಪ್ ಸಂಗ್ರಹದಂತೆ ಅದೊಂದು ಹವ್ಯಾಸವೆಂದು ಅದನ್ನು ಮರೆತುಬಿಟ್ಟಿದ್ದೆ.

ಯುದ್ಧ ಮುಗಿಯಿತು. ಆಗ ನನ್ನಲ್ಲಿ ಕೊಂಚ ಪೆನ್‌ಶನ್ ಹಣ ಇತ್ತು. ಸ್ವಲ್ಪ ಸಮಯ ತಾಜಾ ಹವೆಯನ್ನು ಉಸಿರಾಡಿಸಬೇಕೆಂದು ಖಯಾಲಿ ಬಂತು. ನಾನು ಮತ್ತೆ ಮರುಭೂಮಿಯತ್ತ ನಡೆದೆ.

ಆ ಹಳ್ಳಿಗಾಡು ಪ್ರದೇಶ ಬದಲಾಗಿದ್ದಿಲ್ಲ. ಅವರೂ ಆ ಹಾಳು ಬಿದ್ದ ಹಳ್ಳಿಯ ಆಚೆಗೆ ಗುಡ್ಡದ ಓರೆಯ ಮೇಲೆ ಜಮಖಾನೆಯಂತೆ ಹಾಸಲ್ಪಟ್ಟ ಬೂದಿ ಬಣ್ಣದ ಮಂಜಿನಂತೆ ಏನೋ ಕಾಣಿಸಿತು. ಮೊನ್ನೆಯಿಂದ ಏಕೋ ಆ ಮರ ಹಚ್ಚುವ ಕುರುಬ ಮೇಲಿಂದ ಮೇಲೆ ನೆನಪಿಗೆ ಬರುತ್ತಿದ್ದ. ಯುದ್ಧ ಕಾಲದಲ್ಲಿ ಬಹಳ ಜನರು ಸಾಯುವದನ್ನು ಕಂಡಿದ್ದೆ. ಆ ಕುರುಬನೂ ಸತ್ತಿರಬಹುದೆಂಬ ವಿಚಾರ ಸುಳಿಯಿತು. ಆದರೆ ಅವನ ಸ್ಥಳಕ್ಕೆ ಹೋದ ಮೇಲೆ ಅವನು ಇನ್ನೂ ಜೀವಂತವಿದ್ದದ್ದು ತಿಳಿಯಿತು. ಈಗ ಆತ ತನ್ನ ಉದ್ಯೋಗವನ್ನು ಬದಲಿಸಿದ್ದ. ಅವನ ಬಳಿ ನಾಲ್ಕೇ ಕುರಿಗಳಿದ್ದವು. ಕುರಿ ಹಿಂಡಿನ ಬದಲು ನೂರು ಜೇನು ಹುಟ್ಟುಗಳಿದ್ದವು. ಕುರಿಗಳು ತಾನು ನೆಟ್ಟ ಸಸಿಗಳನ್ನು ತಿಂದುಬಿಡುತ್ತವೆ ಎಂದು ಅವುಗಳನ್ನು ಮಾರಿದ್ದ.

೧೯೧೦ರಲ್ಲಿ ನೆಟ್ಟ ಓಕ್ ಗಿಡಗಳು ಈಗ ಹತ್ತು ವರುಷದವುಗಳಾಗಿದ್ದವು. ನಮ್ಮಿಬ್ಬರಿ

ಗಿಂತ ಎತ್ತರವಾದ ಅವುಗಳನ್ನು ನೋಡುತ್ತ ವಿಸ್ಮಯದಿಂದ ನಾನು ಮೂಕನಾದೆ. ಅವನೂ ಮಾತನಾಡುತ್ತಿರಲಿಲ್ಲ. ಕಾರಣ ಮೌನವಾಗಿಯೇ ಅವನ ಅರಣ್ಯದಲ್ಲಿ ಅಡ್ಡಾಡುತ್ತ ನಾವು ಇಡೀ ದಿನವನ್ನು ಕಳೆದೆವು. ಅರಣ್ಯವು ಹನ್ನೊಂದು ಕಿಲೋಮೀಟರ್ ಉದ್ದ ಮೂರು ಕಿಲೋಮೀಟರಿನಷ್ಟು ಅಗಲವಾಗಿತ್ತು. ಇದೆಲ್ಲವೂ ಯಾವ ತಾಂತ್ರಿಕ ಸಹಾಯವೂ ಇಲ್ಲದೆ ಒಬ್ಬನೇ ವ್ಯಕ್ತಿಯ ಕೈಗಳಿಂದ ಸಾಧ್ಯವಾದದ್ದು ಎಂಬುದನ್ನು ನೆನೆಸಿದರೆ ವಿನಾಶವನ್ನುಳಿದು ಬೇರೆ ಕ್ಷೇತ್ರಗಳಲ್ಲಿ ಮಾನವನು ಪರಮಾತ್ಮನಂತೆ ಕಾರ್ಯ ಮಾಡಬಲ್ಲನೆಂದು ಅನಿಸಿದ್ದು ಸಹಜವೆ. ತನ್ನ ಯೋಜನೆಯನ್ನು ಮುಂದುವರೆಸಿ ಆರ್ದ್ರತೆಯಿದ್ದ ಕೊಳ್ಳಗಳಲ್ಲಿ ಬೀಚ್ ಮರಗಳನ್ನು ನೆಟ್ಟಿದ್ದ. ಅವು ನನ್ನ ಹೆಗಲ ಎತ್ತರಕ್ಕೆ ಬೆಳೆದಿದ್ದವು. ದೃಷ್ಟಿ ನಿಲುಕುವವರೆಗೆ ಅವು ವಿಸ್ತಾರವಾಗಿ ಹರಡಿದ್ದವು. ತರುಣಿಯರಂತೆ ಕೋಮಲವಾಗಿದ್ದವು. ಆದರೆ ದೃಢವಾಗಿ ನೆಲೆಸಿದ್ದವು.

ಒಂದು ಪ್ರಕಾರದ ಸರಪಳಿ ಪ್ರತಿಕ್ರಿಯೆಯಂತೆ ಸೃಷ್ಟಿ ಕಾರ್ಯ ನಡೆದಂತೆ ತೋರುತ್ತಿತ್ತು. ಆದರೆ ಬೂಫಿಯರ್ ಇದಾವುದರ ಬಗೆಗೂ ಯೋಚಿಸದೆ ತನ್ನ ಕಾರ್ಯವನ್ನು ದೃಢ ನಿರ್ಧಾರದಿಂದ ಮುಂದುವರೆಸಿದ್ದ. ನಾವು ಹಳ್ಳಿಯ ಕಡೆಗೆ ಹೋದಾಗ ಎಷ್ಟೋ ವರುಷಗಳ ವರೆಗೆ ಒಣಗಿದ್ದ ಹಳ್ಳಗಳಲ್ಲಿ ನೀರು ಹರಿಯುತ್ತಿರುವುದನ್ನು ಕಂಡೆ. ಗಾಳಿಯೂ ಬೀಜಗಳನ್ನು ಪಸರಿಸುತ್ತದೆಯಲ್ಲವೆ? ನೀರು ಮತ್ತೆ ಬಂದ ನಂತರ ಅನೇಕ ಪ್ರಕಾರದ ಕಂಟಿಗಳು ಬೆಳೆಯ ಹತ್ತಿದವು. ಹುಲ್ಲು, ಗದ್ದೆಗಳು, ತೋಟಗಳು, ಹೂಗಳು ಇವೆಲ್ಲವುಗಳ ಜೊತೆಗೆ ಜೀವಂತ ಇರುವದಕ್ಕಾಗಿ ಒಂದು ಉದ್ದೇಶ ಪುನಃ ಕಾಣಿಸಿಕೊಂಡಿತು. ಈ ಪರಿವರ್ತನೆ ಅತ್ಯಂತ ನಿಧಾನವಾಗಿ, ಸಹಜವಾಗಿ ಬಂದಿತ್ತು. ಮೊಲ, ಕಾಡುಹಂದಿಗಳನ್ನೂ ಬೆನ್ನಟ್ಟಿ ಗುಡ್ಡವೇರಿದ ಬೇಟೆಗಾರರು ಸಣ್ಣ ಸಣ್ಣ ಗಿಡಗಳು ಒಮ್ಮೆಲೆ ಮೇಲೆದ್ದುದನ್ನು ಕಂಡರು. ಆದರೆ ಇದೇನೋ ಭೂಮಿಯ ವೈಚಿತ್ರ್ಯ ಎಂದು ಸುಮ್ಮನಿದ್ದರು. ಆದ್ದರಿಂದಲೆ ಬೂಫಿಯರನ ಕಾರ್ಯಕ್ಕೆ ಯಾರೂ ಅಡ್ಡ ಬರಲಿಲ್ಲ. ಜನರು ಅವನನ್ನು ಕಂಡುಹಿಡಿದಿದ್ದರೆ ಬಹುಶಃ ವಿರೋಧಿಸುತ್ತಿದ್ದರು.

ಈ ಅಪರೂಪದ ವ್ಯಕ್ತಿಯ ಬಗ್ಗೆ ಸರಿಯಾದ ಕಲ್ಪನೆ ಮಾಡಿಕೊಳ್ಳಬೇಕಾದರೆ ಅವನು ಸಂಪೂರ್ಣ ಏಕಾಂತದಲ್ಲಿ ಕಾರ್ಯ ಮಾಡುತ್ತಿದ್ದನೆಂಬುದನ್ನು ಮರೆಯಕೂಡದು. ಏಕಾಂತತೆಯು ಎಷ್ಟು ಪೂರ್ಣವಾಗಿತ್ತೆಂದರೆ ಜೀವನದ ಕೊನೆ ಕೊನೆಗೆ ಅವನು ಮಾತನಾಡುವ ರೂಢಿಯನ್ನೇ ಕಳೆದುಕೊಂಡುಬಿಟ್ಟಿದ್ದ.

೧೯೩೩ರಲ್ಲಿ ಓರ್ವ ಅರಣ್ಯಾಧಿಕಾರಿಯು ಬಂದು ಅವನಿಗೆ ಒಂದು ಸರಕಾರಿ ಆಜ್ಞೆಯ ನೋಟೀಸನ್ನು ಕೊಟ್ಟ. ಮನೆಯ ಹೊರಗೆ ಉರಿ ಹಚ್ಚಬಾರದು. ಅದು ಈ ನೈಸರ್ಗಿಕ ಅರಣ್ಯದ ಬೆಳವಣಿಗೆಗೆ ಗಂಡಾಂತರಕಾರಿ ಎಂಬುದು ಆ ಆಜ್ಞೆಯ ಆಶಯವಾಗಿತ್ತು. 'ಅರಣ್ಯವು ತನ್ನಷ್ಟಕ್ಕೆ ತಾನೆ ಬೆಳೆದುದನ್ನು ನಾನು ಕೇಳಿದ್ದು ಇದೇ ಮೊದಲ ಸಲ'ವೆಂದು ಆ ಅಧಿಕಾರಿ ಹೇಳಿದ. ಆಗ ಬೂಫಿಯರನು ತನ್ನ ಗುಡಿಸಲಿನಿಂದ ಹನ್ನೆರಡು ಕಿಲೋಮೀಟರ್ ದೂರದಲ್ಲಿ ಬರ್ಚ್ ಗಿಡಗಳನ್ನು ನೆಡುವವನಿದ್ದ. ದಿನಾಲು ಅಷ್ಟು ದೂರ ಹೋಗಿ ಬರುವುದನ್ನು ತಪ್ಪಿಸಲು ಗಿಡ ನೆಡುವ ಸ್ಥಳದಲ್ಲಿಯೆ – ಆಗ ಅವನ ವಯಸ್ಸು ೭೫ – ಒಂದು ಕಲ್ಲಿನ ಕೋಣೆಯನ್ನು ಕಟ್ಟಿಸುವ ಯೋಜನೆ ಹಾಕಿಕೊಂಡಿದ್ದ. ಮರು ವರುಷ ಅದನ್ನು ತಾನೇ ಕಟ್ಟಿಕೊಂಡ.

೧೯೩೫ರಲ್ಲಿ ಈ 'ನೈಸರ್ಗಿಕ ಅರಣ್ಯ'ವನ್ನು ಪರೀಕ್ಷಿಸಲು ಸರಕಾರದ ಒಂದು ದೊಡ್ಡ ಪ್ರತಿನಿಧಿ ಮಂಡಲವೆ ಬಂದಿತು. ಅರಣ್ಯ ಇಲಾಖೆಯ ಇಬ್ಬರು ಹಿರಿಯ ಅಧಿಕಾರಿಗಳು ಮತ್ತು ಕೆಲವು ವಿಶೇಷಜ್ಞರು ಅದರಲ್ಲಿ ಇದ್ದರು. ಬಹಳಷ್ಟು ವ್ಯರ್ಥ ಮಾತುಗಳು. ಏನಾದರೂ ಮಾಡಬೇಕೆಂದು ನಿರ್ಧರಿಸಿದರು. ಆದರೆ ಸುದೈವದಿಂದ ಏನೂ 'ಮಾಡಲಿಲ್ಲ'. ಅವರು ಬಂದದ್ದು ಒಂದು ರೀತಿಯಲ್ಲಿ ಒಳ್ಳೆಯದೆ ಆಯಿತು. ಸರಕಾರವು ಇಡೀ ಅರಣ್ಯವನ್ನು ತನ್ನ ರಕ್ಷಣೆಯಲ್ಲಿ

ತೆಗೆದುಕೊಂಡು ಇದ್ದಲಿಗಾಗಿ ಕಟ್ಟಿಗೆ ಸುಡುವುದನ್ನು ನಿಷೇಧಿಸಿತು.

ಆ ಪ್ರತಿನಿಧಿ ಮಂಡಲದಲ್ಲಿ ನನ್ನ ಗೆಳೆಯನೊಬ್ಬನಿದ್ದ. ಅವನಿಗೆ ನಾನು ಅರಣ್ಯದ ಗುಟ್ಟನ್ನು ಹೇಳಿದೆ. ಮರುವಾರ ಅವನ ಜೊತೆಗೆ ಬೂಫಿಯರನನ್ನು ನೋಡಲು ಹೋದೆ. ಪರೀಕ್ಷೆ ನಡೆದ ಸ್ಥಳದಿಂದ ಹತ್ತು ಕಿಲೋಮೀಟರ್ ದೂರದಲ್ಲಿ ಬೂಫಿಯರ್ ಕೆಲಸದಲ್ಲಿ ಮಗ್ನನಾಗಿದ್ದ. ನಾನು ಕಾಣಿಕೆ ಎಂದು ಮೊಟ್ಟೆಗಳನ್ನು ಒಯ್ದಿದ್ದೆ. ಮಧ್ಯಾಹ್ನದ ಊಟವನ್ನು ಮೂವರೂ ಹಂಚಿಕೊಂಡೆವು. ಅನಂತರ ಮೌನವಾಗಿ ನಿಸರ್ಗವನ್ನು ನೋಡುತ್ತ ಎಷ್ಟೋ ಗಂಟೆಗಳನ್ನು ಕಳೆದೆವು. ಹಿಂದೆ ೧೯೧೩ರಲ್ಲಿ ಮರುಭೂಮಿಯಿದ್ದ ಸ್ಥಳ ಈಗ ಇಪ್ಪತ್ತೈದು ಅಡಿಗಳಷ್ಟು ಎತ್ತರದ ಗಿಡಗಳಿಂದ ಆಚ್ಛಾದಿಸಲ್ಪಟ್ಟಿತ್ತು. ಪ್ರಶಾಂತ ಪರಿಸರ. ನಿಯಮಿತ ಶ್ರಮ, ಚೈತನ್ಯದಾಯಿಯಾದ ಪರ್ವತದ ಹವೆ, ಮಿತವ್ಯಯ, ಎಲ್ಲಕ್ಕಿಂತ ಹೆಚ್ಚಾಗಿ ಆತ್ಮದಲ್ಲಿ ಶಾಂತಿ–ಇವೆಲ್ಲವುಗಳು ಅವನಿಗೆ ಆರೋಗ್ಯವನ್ನು ಕೊಟ್ಟಿದ್ದವು.

ಹೊರಡುವದಕ್ಕಿಂತ ಮೊದಲು ನನ್ನ ಗೆಳೆಯ ಆ ಭೂಮಿಗೆ ಯೋಗ್ಯವಾದ ಮರಗಳ ಬಗ್ಗೆ ಒಂದು ಸೂಚನೆಯನ್ನು ಮಾಡಿದ. ಅಲ್ಲಿಂದ ಹೊರಟು ಒಂದು ತಾಸಿನ ವರೆಗೆ ಕ್ರಮಿಸಿದ ಮೇಲೆ ಅವನು, "ಬೇರೆ ಯಾವ ಮನುಷ್ಯನಿಗಿಂತಲೂ ಅವನಿಗೆ ಹೆಚ್ಚು ಜ್ಞಾನವಿದೆ. ಸುಖಿಯಾಗಿರಲು ಅದ್ಭುತ ಹಾದಿಯನ್ನು ಹುಡುಕಿದ್ದಾನೆ," ಎಂದ.

ಆ ಅರಣ್ಯವನ್ನಲ್ಲದೆ ಬೂಫಿಯರನ ಆನಂದವನ್ನೂ ರಕ್ಷಿಸಿದ್ದಕ್ಕಾಗಿ ಈ ಅಧಿಕಾರಿಗೆ ಕೃತಜ್ಞತೆ ಸಲ್ಲಬೇಕು. ಈ ಕೆಲಸಕ್ಕಾಗಿ ಮೂವರು ರೇಂಜರರನ್ನು ಆತ ಕಳಿಸಿದ. ಇದ್ದಲಿ ಮಾಡುವವರು ನೀಡಬಹುದಾದ ಮಾದ್ಯದ ಶೀಶೆಗಳನ್ನು ಅವರು ಮುಟ್ಟಬಾರದೆಂದು ಅವರಿಗೆ ಆ ಬಗ್ಗೆ ಮೊದಲೆ ಎಚ್ಚರಿಕೆಯನ್ನು ನೀಡಿದ್ದ.

ಬೂಫಿಯರನ ಕಾರ್ಯಕ್ಕೆ ಬಗೆಗಿನ ಬದೆ



ಒಂದು ಗಂಭೀರ ಗಂಡಾಂತರ ಎರಡನೆಯ ಮಹಾಯುದ್ಧದ ಸಮಯಕ್ಕೆ ಬಂದಿತು. ಆಗ ಮೋಟಾರುಗಳಿಗೆ ಇದ್ದಲಿಯ ಗ್ಯಾಸನ್ನು ಉಪಯೋಗಿಸಹತ್ತಿದರು. ಆದ್ದರಿಂದ ಕಟ್ಟಿಗೆಯ ತೀವ್ರ ಕೊರತೆಯುಂಟಾಯಿತು. ೧೯೧೦ರಲ್ಲಿ ನೆಟ್ಟ ಗಿಡಗಳನ್ನು ಮೊದಲು ಕಡಿಯಹತ್ತಿದರು. ಆದರೆ ಆ ಪ್ರದೇಶವು ರೇಲ್ವೆ ಮಾರ್ಗದಿಂದ ಬಹಳ ದೂರವಿದ್ದುದರಿಂದ ಆ ಕೆಲಸವನ್ನು ಬಿಟ್ಟುಕೊಟ್ಟರು. ಪ್ರಥಮ ಮಹಾಯುದ್ಧವನ್ನು ಬೂಫಿಯುರನು ದುರ್ಲಕ್ಷಿಸಿದಂತೆ ಎರಡನೆಯ ಯುದ್ಧವನ್ನೂ ದುರ್ಲಕ್ಷಿಸಿದನು.

ಎಲ್‌ಝಿಯಾರ್ಡ್ ಬೂಫಿಯುರನನ್ನು ನಾನು ಕೊನೆಯ ಸಲ ಕಂಡದ್ದು ೧೯೪೫ರ ಜೂನ್ ತಿಂಗಳಲ್ಲಿ. ಆಗ ಅವನ ವಯಸ್ಸು ೮೭. ಮರುಭೂಮಿಯ ಮಾರ್ಗದಿಂದಲೇ ನಾನು ಹೊರಟೆ. ಆಗ ಆ ಗುಡ್ಡಕ್ಕೆ ಒಂದು ಬಸ್ಸು ಹೋಗುತ್ತಿತ್ತು. ಬಸ್ ಹತ್ತಿ ವ್ಹಾಗೋರ್ನೆನ್ಸ್ ಎಂಬ ಹಳ್ಳಿಗೆ ಬಂದೆ. ೧೯೧೩ರಲ್ಲಿ ೧೦-೧೨ ಮನೆಗಳ ಈ ಹಳ್ಳಿಯಲ್ಲಿ ಮೂವರೆ ನಿವಾಸಿಗಳಿದ್ದರು. ಅವರು ಅತ್ಯಂತ ಕೀಳು ಸ್ಥಿತಿಯಲ್ಲಿದ್ದು ಮರಣದ ದಾರಿ ಕಾಯುತ್ತಿದ್ದರು.

ಈಗ ಎಲ್ಲವೂ ಬದಲಾಗಿತ್ತು– ಹವೆ ಕೂಡ. ಆಗ ರೊಯ್ಯೆಂದು ಬೀಸುತ್ತಿದ್ದ ಒಣಗಾಳಿಯ ಬದಲು ಈಗ ಸುಗಂಧವನ್ನು ಹೊತ್ತ ಮಂದ ಮಾರುತವು ಬೀಸುತ್ತಿತ್ತು. ಹೊಂಡದಲ್ಲಿ ನೀರು ಬೀಳುತ್ತಿರುವ ಸಪ್ಪಳ ಕೇಳಿಸಿತು. ಅಲ್ಲಿ ಒಂದು ಕಾರಂಜಿಯು ರಚಿತವಾಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ನನ್ನ ಹೃದಯವನ್ನು ಹಿಡಿದದ್ದೇನರೆ ಕಾರಂಜಿಯ ಬದಿಯಲ್ಲಿ ಒಂದು ನಿಂಬೆ ಗಿಡವನ್ನು ಹಚ್ಚಿದ್ದರು. ನಿಂಬೆ ಗಿಡ ಪುನರೋದಯದ ಸಂಕೇತ.

ಹೌದು, ಆ ಹಳ್ಳಿಯಲ್ಲಿ ಆಶೆಯು ಪುನರಾಗಮನವಾಗಿತ್ತು. ಅವಶೇಷಗಳನ್ನು ತೆಗೆದು ಹಾಕಿ ಐದು ಮನೆಗಳನ್ನು ಕಟ್ಟಿದ್ದರು. ಇಪ್ಪತ್ತೆಂಟು ನಿವಾಸಿಗಳಿದ್ದರು. ಅವರಲ್ಲಿ ಎಂಟು ಜನ ನವವಿವಾಹಿತರೂ ಇದ್ದರು, ಹೊಸ ಮನೆಗಳ ಸುತ್ತಲೂ ಕಾಯಿಪಲ್ಲೆ, ಹೂಗಳ ತೋಟಗಳಿದ್ದವು. ಈಗ ಈ ಹಳ್ಳಿಯಲ್ಲಿ ವಾಸಿಸಬೇಕೆಂದು ಇಚ್ಛೆಯುಂಟಾಗುತ್ತಿತ್ತು.

ಆ ಸ್ಥಳದಿಂದ ನಾನು ನಡೆಯುತ್ತ ಹೋದೆ. ಗುಡ್ಡದ ಕೆಳ ಮಟ್ಟದ ಇಳಿಜಾರಿನಲ್ಲಿ ಬಾರ್ಲಿ, ರಾಗಿ, ಮುಂತಾದವುಗಳ ಚಿಕ್ಕ ಹೊಲಗಳಿದ್ದವು. ಕೊಳ್ಳಗಳಲ್ಲಿ ಹುಲ್ಲುಗದ್ದೆಗಳು ಹಸಿರು ಬಣ್ಣಕ್ಕೆ ತಿರುಗಹತ್ತಿದ್ದವು.

ಅಂದಿನಿಂದ ಕೇವಲ ಎಂಟು ವರುಷಗಳ ಅವಧಿಯಲ್ಲಿ ಆ ಇಡೀ ಹಳ್ಳಿಗಾಡು ಆರೋಗ್ಯ, ಸಮೃದ್ಧಿಗಳಿಂದ ಬೆಳಗಹತ್ತಿತ್ತು. ಹಿಂದಿನ ಒಣಗಿದ ಹಳ್ಳಗಳು ತುಂಬಿ ಹರಿಯುತ್ತಿದ್ದವು. ಅವುಗಳಿಂದ ನೀರಾವರಿ ಮಾಡಿ ಹೊಲಗಳಿಗೆ ನೀರುಣ್ಣಿಸಹತ್ತಿದರು. ಮಾರ್ಗಗಳಲ್ಲಿ ತರುಣ ತರುಣಿಯರು ನಗುತ್ತ ಕೆಲೆಯುತ್ತ ವನಭೋಜನಕ್ಕೆಗಳಿಗೆ ಹೋಗುವದನ್ನು ಕಾಣಬಹುದಾಗಿತ್ತು. ಬಯಲು ಪ್ರದೇಶದಲ್ಲಿ ಭೂಮಿಯ ಬೆಲೆ ಬಹಳ ದುಬಾರಿ. ಅಲ್ಲಿಯ ಜನರು ಇಲ್ಲಿ ಬಂದು ನೆಲೆಸಿದರು. ತಮ್ಮೊಡನೆ ಯೌವನ, ಹುರುಪು, ಕ್ರೀಡಾಪ್ರವೃತ್ತಿ ಮುಂತಾದವುಗಳನ್ನು ತಂದರು. ಹತ್ತು ಸಾವಿರಕ್ಕಿಂತಲೂ ಹೆಚ್ಚು ಜನರ ಸುಖಕ್ಕೆ ಈ ರೀತಿ ಎಲ್‌ಝಿಯಾರ್ಡ್ ಬೂಫಿಯುರನೆ ಕಾರಣನಾದ.

ಒಬ್ಬನೆ ವ್ಯಕ್ತಿ ಕೇವಲ ತನ್ನ ಭೌತಿಕ ಮತ್ತು ನೈತಿಕ ಬಲದಿಂದ ಸುಸಜ್ಜಿತನಾಗಿ ಮರುಭೂಮಿಯೊಳಗಿಂದ ನಂದನವನವೆ ಮೇಲೇಳುವಂತೆ ಮಾಡಿದ್ದನ್ನು ಯೋಚಿಸಿದಾಗ, ಏನೇ ಆಗಲಿ, ಮಾನವತೆ ಸ್ತುತ್ಯ ಎನಿಸುತ್ತದೆ. ಆದರೆ ಈ ಮಹಾ ಕಾರ್ಯವನ್ನು ಸಾಧಿಸಲು ಅವಶ್ಯವಿದ್ದ ಆತ್ಮದ ಅಪಾರ ಹಿರಿಮೆ, ಪರೋಪಕಾರ ಬುದ್ಧಿ, ದೃಢ ಸಂಕಲ್ಪಗಳನ್ನು ಎಣಿಸುವಾಗ ಆ ವೃದ್ಧ ಅಶಿಕ್ಷಿತ ಒಕ್ಕಲಿಗನ ಬಗ್ಗೆ ಅಪಾರ ಗೌರವದಿಂದ ತಲೆಬಾಗುತ್ತದೆ.

ಎಲ್‌ಝಿಯಾರ್ಡ್ ಬೂಫಿಯುರ್ ೧೯೪೭ ರಲ್ಲಿ ಶಾಂತಿಯಿಂದ ಮರಣ ಹೊಂದಿದ. ✦




**ವೇದಕಾಲಗಳಲ್ಲಿ ಜನ ಕುಡಿಯುತ್ತಿದ್ದರು. ದೇವತೆಗಳು ಕುಡಿಯುತ್ತಿದ್ದ (ಈಗಲೂ ಕುಡಿಯುತ್ತಿರಬಹುದಾದ) ಸೋಮರಸ ಬಹುಪಾಲು ಮದ್ಯವೇ... ಆದರೆ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕುಡಿತ – ವಿಶೇಷತಃ ಇತ್ತೀಚೆ – ಬೆಳೆಯುತ್ತಿರುವ ಭಯಾನಕ ಪ್ರಮಾಣ ಯಾವ ಸ್ಥಿರಚಿತ್ತವುಳ್ಳವನನ್ನೂ ಧೃತಿಗೆಡಿಸಬಹುದಾಗಿದೆ. ನಿಷ್ಣಾತ ವೈದ್ಯರಾದ ಡಾ. ಚಂದ್ರಪ್ಪಗೌಡರು ಇಲ್ಲಿ ಅದರ ಇತಿಮಿತಿಗಳನ್ನೆಲ್ಲ ಸಾದ್ಯಂತ ಚರ್ಚಿಸಿದ್ದಾರೆ. ಇದು ನೀವು ಓದಲೇಬೇಕಾದ ಬರಹ.**

ಕ್ಯಾನ್ಸರ್ ಮತ್ತು ಹೃದಯರೋಗಗಳಿಂದ ಮಾನವಕುಲಕ್ಕೆ ಈಗ ಆಗುತ್ತಿರುವ ಹಾನಿಯನ್ನು ಬಿಟ್ಟರೆ ಕುಡಿತದಿಂದಾಗುವ ಕೇಡುಗಳಿಗೇ ಅಗ್ರ ಮಾನ್ಯತೆಯಿದೆ.

ಹಿಂದೆ ಕೆಲವೇ ಜನರ ಅಪರೂಪದ ಹವ್ಯಾಸವಾಗಿದ್ದ ಕುಡಿತ ಈಗ ಬಹು ಜನರ ನಿತ್ಯದ ಸಾಮಾಜಿಕ ಪ್ರತಿಷ್ಠೆಯ ಪ್ರತೀಕವಾಗಿದೆ. ಈ ಅಭ್ಯಾಸದಲ್ಲಿ ತೊಡಗುವವರ ವಯಸ್ಸು, ವರ್ಗ ಮತ್ತು ರೀತಿ ನೀತಿಗಳಲ್ಲೂ ಗಮನಾರ್ಹ ಬದಲಾವಣೆಗಳಾಗಿವೆ. ಬೆಂಗಳೂರಲ್ಲಿ ಮೂರು ವರ್ಷಗಳ ಹಿಂದೆ ಜರುಗಿದ ಕಳ್ಳಭಟ್ಟಿ ದುರಂತ ಈ ಸಮಸ್ಯೆಗೆ ಜ್ವಲಂತ ಸಾಕ್ಷಿ.

ಎಲ್ಲಾ ಮದ್ಯಸಾರಗಳ ಮೂಲವಸ್ತು ಇಥನಾಲ್ ಅಥವಾ ಈಥೈಲ್ ಆಲ್ಕೋ

ಹಾಲ್. ದ್ರಾಕ್ಷಿ, ಬಾಳೇಹಣ್ಣು, ಬೆಲ್ಲ, ಸಕ್ಕರೆ ಕಾಕಂಬಿ, ಬೀಟ್‌ರೂಟ್; ಅಕ್ಕಿ, ಬಾರ್ಲಿ, ಕೋಟ್ಸ್ ಮುಂತಾದ ಪಿಷ್ಟ ಹೆಚ್ಚಾಗಿರುವ ಅಥವಾ ಸಕ್ಕರೆಯಾಗಿ ಮಾರ್ಪಾಟಾಗಬಹುದಾದ ವಸ್ತುಗಳಿರುವ ಸಾಮಗ್ರಿಗಳಿಂದ ಆಲ್ಕೋಹಾಲನ್ನು ತಯಾರಿಸುತ್ತಾರೆ. ಅವುಗಳನ್ನೇ ಕೊಳೆಹಾಕಿ ಕೆಲವು ಜಾತಿಯ ಕಿಣ್ವ ಅಥವಾ ಯೀಸ್ಟ್‌ಗಳ ಕ್ರಿಯೆಯಿಂದ ಹುದುಗೇಳುವಂತೆ ಮಾಡುವುದರಿಂದ ಅಲ್ಕೋಹಾಲ್ ಉತ್ಪತ್ತಿಯಾಗುತ್ತದೆ. ಅದರ ಉತ್ಪಾದನೆಯ ಮಟ್ಟ ಶೇಕಡಾ ೧೨ ರಿಂದ ೧೪ಕ್ಕೆ ಬಂದಾಗ ಮುಂದೆ ಆಲ್ಕೋಹಾಲ್ ಬಿಡುಗಡೆಯಾಗದೆ ಸ್ಥಗಿತಗೊಳ್ಳುತ್ತದೆ. ಕಡಿಮೆ ಪ್ರಮಾಣದ ಅಲ್ಕೋಹಾಲ್ ಇರುವ ವೈನ್, ಬೀರ್ ಸೈಡರ್, ಮುಂತಾದವು ಈ ರೀತಿಯಲ್ಲಿ ತಯಾರಾಗುತ್ತವೆ. ಹೆಚ್ಚಿನ ಪ್ರಮಾಣದ ಅಲ್ಕೋಹಾಲ್ ಇರುವ ವಿಸ್ಕಿ, ರಮ್, ಬ್ರಾಂಡಿ, ಸರಾಯಿ, ಮೊದಲಾದವುಗಳನ್ನು ಮೊದಲು ಹೇಳಿದ ಕೊಳೆಯ ಮಿಶ್ರಣಗಳನ್ನು ಭಟ್ಟಿಯಿಳಿಸುವುದರ ಮೂಲಕ ತಯಾರಿಸಲಾಗುತ್ತದೆ. ಇವುಗಳ ತಯಾರಿಕೆ ಮತ್ತು ಮಾರಾಟಗಳ ಮೇಲೆ ಸರಕಾರ ಕಟ್ಟುನಿಟ್ಟಾದ ಹತೋಟಿ ಇರಿಸಿದೆ. ಆದರೂ ಸಮಾಜ ಘಾತುಕರು ಉಪಯೋಗಿಸುವ "ಕೊಳೆ"ಯಿಂದ ಹೆಚ್ಚಿನ ಇಳುವರಿ ಬರಿಸಲು ನವಸಾಗರ, ಮೈಲು ತುತ್ತೆ, ಕೊಳೆತ ಪ್ರಾಣಿಗಳ ಮಾಂಸ, ಮಲ ಮೂತ್ರಗಳನ್ನು ಸೇರಿಸಿ ಕಳ್ಳ ಭಟ್ಟಿ ತಯಾರಿಸುವುದೂ ಉಂಟು. ತಾಳೆ ಜಾತಿಗೆ ಸೇರಿದ ತೆಂಗು, ಭಗನೆ, ಈಚಲು ಇತ್ಯಾದಿ ಮರಗಳ ಕಾಂಡಗಳ ಜೀವರಸವನ್ನೇ ಹೊರಗಿಳಿಸಿ ಹುದುಗೇಳುವಂತೆ ಮಾಡುತ್ತಾರೆ. ಇವೇ ಶೇಂದಿ, ಮಾದಿ, ಹೆಂಡ, ಟಾಡಿ ಮುಂತಾದವು.

ಹೆಚ್ಚಿನ 'ಮತ್ತು' ಬರುವಂತೆ ಮಾಡಲು ಕ್ಲೋರಾಲ್ ಹೈಡ್ರಾಸ್ ಎಂಬ ನಿದ್ರಾಜನಕ ಮದ್ದನ್ನು ಗುಟ್ಟಾಗಿ ಸೇರಿಸುವ ದುಷ್ಕರ್ಮಿಗಳೂ ಇದ್ದಾರೆ. ಇದಕ್ಕಿಂತ ಮಿಗಿಲಾಗಿ ಕೈಗಾರಿಕಾ ಕ್ಷೇತ್ರದಲ್ಲಿ ಬಳಸುವ ಮೀಥೈಲ್ ಆಲ್ಕೋಹಾಲ್ ಅಥವಾ ಮೆಥನಾಲ್ ಮತ್ತು ಫ್ರೆಂಚ್ ಪಾಲಿಶ್ ನಂತಹ ವಿಷಕಾರಕಗಳನ್ನೂ ಸೇರಿಸುವ ಹೇಯ ಕೃತ್ಯವನ್ನೂ ಎಸಗುವವರಿದ್ದಾರೆ. ಬೆಂಗಳೂರಿನ ದುರಂತಕ್ಕೆ ಈ ವಸ್ತುಗಳ ಸೇರುವಿಕೆಯೇ ಕಾರಣ ಎಂದು ತಿಳಿದುಬಂದಿದೆ. ಸುಮಾರು ೨೫೦ ಕ್ಕಿಂತಲೂ ಹೆಚ್ಚು ಜನ ಈ ದುರಂತದಲ್ಲಿ ಅಸು ನೀಗಿದರಲ್ಲದೆ, ಬದುಕಿದ ನೂರಾರು ಜನ ಕಣ್ಣು ಕಳೆದುಕೊಂಡರು. ಈ ಭಯಂಕರ ದೃಷ್ಟಾಂತದ ನಂತರವೂ ಅಂತಹ ಪ್ರಕರಣಗಳು ಅಲ್ಲಲ್ಲಿ ಜರುಗುತ್ತಿರುವುದು ಶೋಚನೀಯ.

## ಜೀರ್ಣಿಸುವ ಬಗೆ

ಆಲ್ಕೋಹಾಲ್‌ನ ಅಣು ಅತ್ಯಂತ ಚಿಕ್ಕದಾಗಿದ್ದು ಸೇವಿಸಿದ ಎರಡು ಮೂರು ನಿಮಿಷಗಳಲ್ಲೇ ಅದು ನೇರವಾಗಿ ರಕ್ತಗತವಾಗುತ್ತದೆ. ಹೆಚ್ಚಿನ ಆಲ್ಕೋಹಾಲ್ ಪ್ರಮಾಣವಿರುವ ವಿಸ್ಕಿ. ರಮ್‌ಗಳನ್ನು ಕುಡಿದಾಗ ರಕ್ತಗತವಾಗುವ ಪ್ರಮಾಣವೂ ಅಧಿಕ. ಆಹಾರದ ಜೊತೆ ಸೇವಿಸಿದಾಗ ಆಲ್ಕೋಹಾಲ್ ಮಂದಗತಿಯಲ್ಲಿ ರಕ್ತಗತವಾಗಬಹುದು.

ಜಠರ ಮತ್ತು ಕರುಳಿನಿಂದ ರಕ್ತಗತವಾದ ಆಲ್ಕೋಹಾಲ್ ಅತ್ಯಲ್ಪ ಸಮಯದಲ್ಲೇ ಶರೀರದ ಎಲ್ಲಾ ಅಂಗಾಂಗಗಳನ್ನೂ ತಲಪುತ್ತದೆ. ಹೆಚ್ಚು ರಕ್ತಸಂಚಾರವಿರುವ ಮಿದುಳು ಮತ್ತು ಯಕೃತ್ತುಗಳಲ್ಲಿ ಅದು ಶೇಖರವಾಗುವ ಪ್ರಮಾಣ ಅತಿ ಹೆಚ್ಚು.

ನಾವು ಸೇವಿಸುವ ಆಹಾರ ಪದಾರ್ಥಗಳು ಅವುಗಳ ಗುರಿಯ ಅಂಗಾಂಗಗಳ ಕ್ರಿಯೆಗೆ ಬೇಕಾಗುವ ವಸ್ತುಗಳಾಗಿ ಪರಿವರ್ತನೆಗೊಳ್ಳುವ ವಿಧಾನಕ್ಕೆ ಜೀವದ್ರವ್ಯಕ್ರಿಯೆ (Metabolism) ಎನ್ನಲಾಗುತ್ತದೆ. ಯಕೃತ್ತಿನಲ್ಲಿ ಆಲ್ಕೋಹಾಲ್ ಜೀವದ್ರವ್ಯ ಕ್ರಿಯೆಗೊಳಪಡುವುದಂ ಒಂದು ಜಟಿಲವಾದ ಕ್ರಿಯೆ. ಈ ಕ್ರಿಯೆಯಿಂದ ಅದು ಅಂತಿಮವಾಗಿ ನೀರು ಮತ್ತು ಇಂಗಾಲದ ಡೈ ಆಕ್ಸೈಡ್ ಆಗಿ ಪರಿವರ್ತನೆಹೊಂದುತ್ತದೆ. ಇತರ ಆಹಾರಾಂಶಗಳಂತೆ ಆಲ್ಕೋಹಾಲ್ ದೇಹದಲ್ಲಿ ಶೇಖರಣೆಯಾಗುವುದಿಲ್ಲ. ರಕ್ತಗತವಾದ

ಆಲ್ಕೋಹಾಲ್ ಎಷ್ಟೇ ಸಮಯವಾದರೂ ಯಕೃತ್ತಿನಲ್ಲೇ ಜೀವದ್ರವೀಕೃತವಾಗಬೇಕಾಗುವದರಿಂದ ಯಕೃತ್ತಿಗೆ ಬಹಳ ಶ್ರಮವಾಗುತ್ತದೆ.

ಶಕ್ತಿ ಜನಕವಾದ ಸಕ್ಕರೆಯಿಂದ ತಯಾರಾಗುವ ಆಲ್ಕೋಹಾಲ್ ದೇಹದ ಕಾರ್ಯಚಟುವಟಿಕೆಗಳಿಗೆ ಅವಶ್ಯಕವಾದ ಕ್ಯಾಲೋರಿಗಳನ್ನು ಒದಗಿಸುತ್ತದೆ. ಒಂದು ಗ್ರಾಮ್ ಪಿಷ್ಟ ಪದಾರ್ಥದಿಂದ ೪ ಕ್ಯಾಲೋರಿ ಉತ್ಪತ್ತಿಯಾದರೆ, ಅದೇ ಪ್ರಮಾಣದ ಆಲ್ಕೋಹಾಲ್‌ನಿಂದ ೭ ಕ್ಯಾಲೋರಿ ಬಿಡುಗಡೆಯಾಗುತ್ತದೆ. ಈ ಕಾರಣದಿಂದ ಆಲ್ಕೋಹಾಲ್‌ನ್ನು ಆಹಾರವೆಂದು ಪರಿಗಣಿಸಬೇಕೆನ್ನುವ ವಾದವೂ ಇದೆ. ಆದರೆ ಶರೀರದ ಅವಶ್ಯಕತೆಗೆ ಬೇಕಾಗುವ ೩೦೦೦ ಕ್ಯಾಲೋರಿಗಳನ್ನು ಆಲ್ಕೋಹಾಲ್ ಸೇವನೆಯಿಂದ ಪಡೆಯಬೇಕಾದರೆ ಅವರು ಕುಡಿಯಬೇಕಾದ ಆಲ್ಕೋಹಾಲ್‌ನ ಪ್ರಮಾಣದಬಗ್ಗೆ ಯೋಚಿಸಿ. ಅಷ್ಟನ್ನು ಸೇವಿಸುವುದರಿಂದಾಗುವ ದುಷ್ಪರಿಣಾಮದಿಂದ ಯಾರೂ ಬದುಕಲಾರರು.

ಇವೇ ರೀತಿ ಆಲ್ಕೋಹಾಲ್‌ನ ಚೇತೋಹಾರಿ, ಶಾಮಕ ಮತ್ತು ನಿದ್ರಾಜನಕ ಗುಣಗಳಿಗಾಗಿ ಅದನ್ನು ಔಷಧವನ್ನಾಗಿ ಬಳಸಬೇಕೆಂದೂ ಕೆಲವರು ಹೇಳುತ್ತಾರೆ. ಆದರೆ ಆಲ್ಕೋಹಾಲ್ ಸೇವನೆಯ ಗೀಳಿನಿಂದ ಈಗಾಗುತ್ತಿರುವ ಹಾನಿಯನ್ನು ನೋಡಿದರೆ ಈ ಹೇಳಿಕೆ ಮೂರ್ಖತನದ್ದೆನಿಸುತ್ತದೆ.

## ಮದ್ಯಪಾನ ಅಭ್ಯಾಸದ ಬೆಳವಣಿಗೆ

ಒಬ್ಬ ವ್ಯಕ್ತಿಯಲ್ಲಿ ಮದ್ಯಪಾನದ ಅಭ್ಯಾಸದ ಬೆಳವಣಿಗೆಗೆ, ಅವನಿರುವ ಸಮಾಜದಲ್ಲಿ ಮದ್ಯಪಾನದ ಬಗೆಗೆ ಇರಬಹುದಾದ 'ಉದಾರ' ಅಥವಾ 'ನಿಕೃಷ್ಟ' ಭಾವನೆ, ಕುಟುಂಬ ಮತ್ತು ಸಂಬಂಧಿಗಳ ಕುಡಿತದ ಅಭ್ಯಾಸ ಮತ್ತು ಕೆಲವು ವೈಯುಕ್ತಿಕ ಅನಿವಾರ್ಯಗಳೂ ಪ್ರಭಾವ ಬೀರುತ್ತವೆ. ಪಾಶ್ಚಿಮಾತ್ಯರಲ್ಲಿ ಕುಡಿತದ ಬಗಗೆ ಇರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳು ನಮ್ಮಲ್ಲಿಗಿಂತ ಉದಾರ ಭಾವನೆಯುವಾಗಿದ್ದು, ಅಲ್ಲಿ ಕುಡಿಯುವವರ ಸಂಖ್ಯೆ ಹೆಚ್ಚು. ಈಚೆಗೆ ನಮ್ಮಲ್ಲಿಯೂ ಅಂತಹ ಉದಾರತೆ ಬೆಳೆಯುತ್ತಿದ್ದು ಕುಡಿತಕ್ಕೀಡಾಗುವವರ ಸಂಖ್ಯೆಯೂ ಏರುತ್ತಿರುವುದೂ ದುರದೃಷ್ಟಕರ.

ಮಾನಸಿಕ ಉದ್ವೇಗ, ಕಷ್ಟ ಮತ್ತು ದುಃಖಕರ ಸನ್ನಿವೇಶಗಳು ಕೆಲವರನ್ನು ಕುಡಿತದ ಮೊರೆಹೋಗುವಂತೆ ಮಾಡುತ್ತವೆ. ಮದ್ಯಸಾರದ ತಯಾರಿಕೆ ಮತ್ತು ವಿತರಣೆಯ ಉದ್ಯೋಗದಲ್ಲಿರುವವರಿಗೆ ಅದು ಸುಲಭವಾಗಿ ದೊರೆಯುವ ಅವಕಾಶವಿರುವುದರಿಂದ ಅಂತಹರು ಬಹು ಬೇಗ ಮದ್ಯಪಾನಾಭ್ಯಾಸಕ್ಕೆ ಳಿಯುತ್ತಾರೆ.

ಮದ್ಯಪಾನದ ಗೀಳು ಬೆಳೆದವರಲ್ಲಿ ಕೆಲವು ವೈಯುಕ್ತಿಕ ವೈಶಿಷ್ಟ್ಯಗಳನ್ನು ಕಾಣಬಹುದು. ಮೊಟ್ಟ ಮೊದಲು ಮದ್ಯಪಾನ ಮಾಡಿದ ಕೆಲವರಲ್ಲಿ ಅದರಿಂದುಂಟಾಗುವ ಆಹ್ಲಾದಕರ ಭಾವನೆ, ಚೇತೋಹಾರಿ ಮತ್ತು ಶಾಮನಿಕ ಗುಣಗಳಿಂದ ಪ್ರಭಾವಿತರಾಗಿ ಮೊದಲು ಅಂತಹ ಅನುಭವಗಳ ಪರಿಚಯವಿಲ್ಲದ್ದರಿಂದ ಅದು ತಮಗಿದ್ದ "ಕೊರತೆ"ಯೆಂದೇ ಭಾವಿಸುತ್ತಾರೆ. ಮದ್ಯಪಾನದಿಂದ ಆ 'ಕೊರತೆ' ನೀಗಿ ಯಥಾಸ್ಥಿತಿಯ ಭಾವನೆಯ ಅನುಭವ ಪಡೆಯಲು ಪದೇ ಪದೇ ಕುಡಿಯುವುದಕ್ಕಾರಂಭಿಸುತ್ತಾರೆ.

ಹಲವು ತಲೆಮಾರುಗಳಿಂದ ಕುಡಿಯುತ್ತಿದ್ದವರ ಸಂತತಿಯಲ್ಲಿ ಕೆಲವರು ಕುಡಿತದ ಗೀಳನ್ನು ಬೆಳೆಸಿಕೊಂಡವರಿದ್ದಾರೆ. ಚಿಕ್ಕಂದಿನಿಂದಲೂ ಅಂತಹರನ್ನು ಕುಡಿತದ ಪರಿಸರದಿಂದ ಬೇರ್ಪಡಿಸಿ ಸಾಕಿದ್ದರೂ, ಮುಂದೆ ಕುಡಿಯುವ ಅವಕಾಶ ದೊರೆತರೆ ಅವರಲ್ಲೂ ಕುಡಿತದ ಗೀಳು ಬೆಳೆದ ಹಲವಾರು ನಿದರ್ಶನಗಳಿವೆ. ಇದರಿಂದ ಕುಡಿತದ ಚಟ ಆನುವಂಶಿಕವಾಗಬಹುದೆಂಬ ಶಂಕೆಯಿದೆ.

ಮದ್ಯಪಾನದಿಂದ ಶರೀರದ ಮೇಲೆ ದುಷ್ಪರಿಣಾಮಗಳುಂಟಾಗುತ್ತವೆಂಬುದು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿರುವ ವಿಷಯವೇ ಆಗಿದೆ. ಆದರೊಂದಿಗೆ ಕುಡಿತದ ದುಷ್ಪ್ರಭಾವ

ಕುಡುಕರ ಕುಟುಂಬದ ಮೇಲೆ, ಅವರ ಕತ್ತಲಿನ ಸಮಾಜದ ಮೇಲೆ ಆಗುವುದೂ ಸರ್ವವೇದ್ಯ. ಅವರ ಆರೋಗ್ಯದ ಮೇಲೆ ಉಂಟಾಗುವ ಅನಿಷ್ಟ ಪರಿಣಾಮಗಳನ್ನು ಸಂಗ್ರಹವಾಗಿ ಹೇಳುವುದಾದರೆ ಬಾಯಿ, ತಲೆ, ನಾಲಿಗೆ, ಗಂಟಲು ಮತ್ತು ಧ್ವನಿಯ ಪೆಟ್ಟಿಗೆಗಳ ಕ್ಯಾನ್ಸರಿನ ಪ್ರಮಾಣ ಕುಡುಕರಲ್ಲಿ ಹೆಚ್ಚು. ಜಠರ ಮತ್ತು ಕರುಳಿನ ಒಳ ಪೊರೆಗಳು ಉರಿತಕ್ಕೊಳ್ಳಪಡುವುದು ಇವರಲ್ಲಿ ಬಹಳ. ಅಲ್ಲದೆ ಯಕೃತ್ತು, ಮೇದೋಜೀರಕ ಹಾಗು ಹೃದಯಗಳಿಗೆ ಸಂಬಂಧ ಪಟ್ಟ ರೋಗಗಳಿಗೆ ಕುಡಿತ ಎಷ್ಟು ಮಟ್ಟಿಗೆ ಕಾರಣವಾಗಬಹುದೆಂಬ ಬಗ್ಗೆ ಜಗತ್ತಿನ ವೈದ್ಯವಲಯಗಳಲ್ಲಿ ಸಾಕಷ್ಟು ಚರ್ಚೆಯಾಗಿದೆ, ಆಗುತ್ತಲೂ ಇದೆ.*

ಯಕೃತ್ತು ಆಲ್ಕೋಹಾಲ್‌ನ ವಿನಾಶದ ಕೇಂದ್ರವಾದರೆ ಮಿದುಳು ಅದರ ವ್ಯಾಪಕ ದುಷ್ಪರಿಣಾಮಗಳ ಬಯಲೆನ್ನಬಹುದು.

ಮಿದುಳಿನಲ್ಲಿ ಮದ್ಯಪಾನದ ಕೆಲವು ಪರಿಣಾಮಗಳು ತಕ್ಷಣ ಕಾಣಿಸಿಕೊಂಡರೆ, ಉಳಿದವು ನಿಧಾನವಾಗಿ ವಿಕಾಸಗೊಳ್ಳುತ್ತವೆ. ಮತ್ತು ಕೆಲವು ಪೌಷ್ಟಿಕಾಂಶಗಳ ಕೊರತೆಯಿಂದುಂಟಾದರೆ. ಇನ್ನೂ ಕೆಲವು ಕುಡಿಯು-ವುದನ್ನು ನಿಲ್ಲಿಸಿದ ನಂತರ ಪ್ರಕಟವಾಗುತ್ತವೆ.

## ಪೌಷ್ಟಿಕಾಂಶಗಳ ಕೊರತೆ

ಬಹಳ ಕಾಲದಿಂದ ಮದ್ಯಪಾನ ನಿರತರಾದವರಲ್ಲಿ ಆಹಾರ ಸೇವನೆ ತೀರಾ ಕಡಿಮೆಯಾಗಿ 'ಬಿ' ಗುಂಪಿನ ಜೀವ ಸತ್ವಗಳ ಕೊರತೆ ಉಂಟಾಗುತ್ತದೆ. ಅವರಲ್ಲೂ ಥಯಾಮಿನ್ ಅಂದರೆ ಕೊರತೆಯ ಪರಿಣಾಮ ನರಮಂಡಲದಲ್ಲಿ ಅತಿ ಹೆಚ್ಚು. ಅದರಿಂದುಂಟಾಗುವ "ದೂರದಂಚಿನ ನರದುರಿತ" (Peripheral Neuritis) ನಿಂದ ಪಾದ, ಕೈಕಾಲು ಬೆರಳುಗಳಿಗೆ ಜೋಮು ಹಿಡಿದಂತಾಗುತ್ತದೆ. ಕಡಿಮೆ ಸ್ಪರ್ಶಜ್ಞಾನದ ತೊಂದರೆಯು ಉಂಟಾಗಬಹುದು. ಈ ಕಾರಣದಿಂದಲೇ ಕಾಲಿನ ಮಾಂಸ ಖಂಡಗಳೂ ದುರ್ಬಲವಾಗಿ ನೇರ ನಿಲ್ಲಲು ಮತ್ತು ನಡೆಯಲು ಕಷ್ಟವಾಗುತ್ತದೆ (Ataxia). ಕಣ್ಣಿನ ನರಗಳ ದೌರ್ಬಲ್ಯದಿಂದ ಕಣ್ಣುಗಳು ಪದೇ ಪದೇ ಅದುರಲಾರಂಭಿಸುತ್ತವೆ. (Ophthalmoplegia).

## ಜ್ಞಾಪಕ ಶಕ್ತಿಯ ಅವ್ಯವಸ್ಥೆ

ಕೆಲವರಿಗೆ ಬಹಳ ಹಿಂದಿನ ಘಟನೆಗಳ ನೆನಪಿರಬಹುದಾದರೂ ಇತ್ತೀಚಿನ ಘಟನೆಗಳ ಜ್ಞಾಪಕವಿಲ್ಲದಂತಾಗುತ್ತದೆ. ಕಾಲ ಮತ್ತು ಜಾಗದ ಪರಿವೆ ಅವರಿಗಿರುವುದಿಲ್ಲ. ಅವರ ನಡೆವಳಿಕೆ ಮತ್ತು ಮಾತುಕತೆಗಳಲ್ಲಿ ಅವ್ಯವಸ್ಥೆ ಎದ್ದು ಕಾಣುತ್ತದೆ. "ಕಾರ್ಸಕಾಫ್ ಮತಿ ವಿಕಲತೆ" ಎಂದು ಕರೆಯಲ್ಪಡುವ ಈ ಬದಲಾವಣೆಗಳಿಗೆ 'ಬಿ' ಗುಂಪಿನ ಜೀವಸತ್ವಗಳ ಕೊರತೆಯೇ ಕಾರಣ.

## ಬುದ್ಧಿಭ್ರಮಣೆ

ಜ್ಞಾಪಕಶಕ್ತಿ ಮತ್ತು ಬುದ್ಧಿವಂತಿಕೆಯ ಕೇಂದ್ರವಾದ ಮಿದುಳಿನ ಬಹಿರ್ವಲಯ (ಕಾರ್ಟೆಕ್ಸ್)ದಲ್ಲಿ ಆಲ್ಕೋಹಾಲ್ ಹೆಚ್ಚು ಶೇಖರಣೆಯಾಗಿ ಬಹಳ ಕಾಲದಿಂದ ಕುಡಿಯುವವರಲ್ಲಿ, ಅಲ್ಲಿಯ ನರಕೋಶಗಳು ಹೆಚ್ಚಿನ ಸಂಖ್ಯೆಯಲ್ಲಿ ನಾಶವಾಗುತ್ತವೆ. ಅಂತಹವರ ಜ್ಞಾಪಕ ಶಕ್ತಿ ಮತ್ತು ಬುದ್ಧಿವಂತಿಕೆ ಕುಂದುತ್ತ 'ಮಂದ ಮತಿ' (Paranoia) ಗಳಾಗಿ, ಮುಂದೆ ಕೆಲವರು ಹುಚ್ಚಾಸ್ಪತ್ರೆಗಳಲ್ಲಿ ತಮ್ಮ ಜೀವನ ದೂಡಬೇಕಾಗ ಬಹುದು.

## ಮಾನಸಿಕ ವ್ಯತ್ಯಾಸಗಳು

ಬಹಳ ಕಾಲದ ಕುಡಿತದಿಂದ ಕೆಲವರಲ್ಲಾಗುವ ಮಾನಸಿಕ ವ್ಯತ್ಯಾಸಗಳು, ವಿನಾಕಾರಣ ನಗುವುದು ಅಳುವುದು, ರೇಗಾಡುವುದು, ಇದ್ದಕ್ಕಿದ್ದಂತೆ ಪ್ರಕಟವಾಗುತ್ತವೆ. ಸತ್ಯಸಂಧತೆ, ವಿನಯಶೀಲತೆಗೆ ಹೆಸರಾದವರು, ಸುಳ್ಳು,

---

* 'ಅತಿಪಾನ ಏಕೆ ಬೇಡ?- ಎಚ್. ಡಿ. ರಮೇಶ್ ,'ಕಸ್ತೂರಿ' ಅಕ್ಟೋಬರ್, ೧೯೮೩, ಪುಟ ೬೯ ನೋಡಿ.

ವಂಚನೆಗಳಿಗೆ ಪ್ರಸಿದ್ಧರಾಗುತ್ತಾರೆ. ಸಿಡು, ನಾಜೂಕು, ಅಚ್ಚುಕಟ್ಟುತನ, ಚಾಕ್ಯಚಕ್ಯತೆಗಳು ಮಾಯವಾಗುತ್ತವೆ. ಕುಟುಂಬದವರಲ್ಲಿ ಅನುಮಾನ ಪ್ರವೃತ್ತಿ ಬೆಳೆಯುತ್ತದೆ. ಮಾದ್ಯಸಾರತೆಯಿಂದತ ನಗುಂಟಾದ ಲೈಂಗಿಕ ದೌರ್ಬಲ್ಯದಿಂದ ಹೆಂಡತಿಯ ಶೀಲವನ್ನೇ ಶಂಕಿಸಿ ವೃಥಾ ಹಿಂಸಿಸುವವರೂ ಇದ್ದಾರೆ. ಈ ದೆಸೆಯಿಂದ ಕೊಲೆಗಳಾದ ಪ್ರಸಂಗಗಳೂ ಇವೆ.

ಮದ್ಯಪಾನಾಭ್ಯಾಸದಿಂದ ಇಷ್ಟೆಲ್ಲಾ ಮಾನಸಿಕ ವ್ಯತ್ಯಾಸಗಳಾಗುವುದಾದರೂ, ಅದರ ಸೇವನೆಯಿಂದ ಕಲ್ಪನಾ ಶಕ್ತಿ ವೃದ್ಧಿಯಾಗುತ್ತದೆ. ಭಾವುಕತೆ ವಿಕಾಸಗೊಳ್ಳುತ್ತದೆ ಎಂಬ ಅಭಿಪ್ರಾಯ ಪ್ರಚಲಿತವಿದೆ. ಕುಡಿತದ ಅಭ್ಯಾಸವಿದ್ದ ಹಲವಾರು ಸಾಹಿತಿಗಳು, ಕಲಾವಿದರ ಸಾಧನೆಗಳ ಉದಾಹರಣೆಯಿತ್ತು ಅಂಥವರ ಸಾಧನೆಗಳಿಗೆ ಈ ಪಾನೀಯಗಳೇ ಕಾರಣವೇ ಹೊರತು, ಅವರಲ್ಲಿದ್ದ ಪ್ರತಿಭೆಯಲ್ಲವೆಂದು ವಾದಿಸುವವರೂ ಇಲ್ಲದಿಲ್ಲ.

## ಹಿಂದೆಗೆವ ಲಕ್ಷಣಗಳು

ಕುಡಿತದ ಗೀಳಿನವರು ಕುಡಿತವನ್ನು ಹಠಾತ್ತಾಗಿ ನಿಲ್ಲಿಸಿದಾಗ ಕೆಲವು ವಿಚಿತ್ರ ಲಕ್ಷಣಗಳು ಪ್ರಕಟವಾಗುತ್ತವೆ. ಅವುಗಳಲ್ಲಿ "ನಡುಕ ಸನ್ನಿ" (Delerium Tremors) ಮುಖ್ಯವಾದುದು.

ಕುಡಿತವನ್ನು ನಿಲ್ಲಿಸಿದಾಗ ಅಥವಾ ನಿಲ್ಲಿಸಬೇಕಾದ ಸನ್ನಿವೇಶಗಳ ಸೂಚನೆಗಳಾದಾಗಲೂ ನಡುಕ ಸನ್ನಿಯ ಚಿಹ್ನೆಗಳು ಪ್ರಕಟವಾಗುತ್ತವೆ. ಅವರಲ್ಲಿ ಮೊದಲು ಮುಖ ಕೆಂಪಡರಿ, ಆತಂಕ ಮತ್ತು ಭಯಗೊಂಡವರಂತೆ ಕಾಣಿಸುತ್ತಾರೆ. ಕೈಕಾಲುಗಳು ನಡುಗಲಾರಂಭಿಸುತ್ತವೆ. ಬೆಳಿಗ್ಗೆ ಹಾಸಿಗೆಯಿಂದ ಏಳಮಾಗಲೇ ನಡುಕ ಸುರುವಾಗಿ ಕೆಲವರಿಗೆ ಬಟ್ಟೆ ತೊಡಲು ಅಥವಾ ಲೋಟ ಹಿಡಿದು ಕುಡಿಯಲೂ ಸಾಧ್ಯವಾಗಲಾರದು. ಆಶ್ಚರ್ಯದ ಸಂಗತಿಯೆಂದರೆ ಅವರ ತಕ್ಷಣ ಮದ್ಯಪಾನ ಮಾಡಿದರೆ ನಡುಕ ಮಾಯವಾಗುತ್ತದೆ! ಕೆಲವರಿಗೆ ಮೈಮೇಲೆ ಇರುವೆ, ತಿಗಣೆ ಅಥವಾ ಚೇಳು ಹರಿದಂತಾದ ಭ್ರಮೆಯಿಂದ, ಮೈಯನ್ನೆಲ್ಲಾ ಪರಚಿಕೊಳ್ಳುತ್ತಿರುತ್ತಾರೆ. ಕಾಲ ಮತ್ತು ಜಾಗದ ಪರಿವೆ ಇಲ್ಲದೆ ಒಂದು ಜಾಗದಿಂದ ಇನ್ನೊಂದೆಡೆಗೆ ಪಲಾಯನ ಮಾಡುತ್ತಿರುತ್ತಾರೆ. ಅವರೆ ಅಲ್ಲಿಗೆ ಹೇಗೆ ಅಥವಾ ಯಾವಾಗ ಬಂದೆನೆಂಬುದರ ಪರಿವೆ ಅವರಿಗಿರುವುದಿಲ್ಲ. ಕೆಲವರು ವಿನಾಕಾರಣ ಕೂಗಾಟ, ಕಿರುಚಾಟ ಹಿಂಸಾಚಾರದಲ್ಲೂ ತೊಡಗುತ್ತಾರೆ. ಒಟ್ಟಿನಲ್ಲಿ ಅವರು ತಮ್ಮದೇ ಆದ ಕಲ್ಪನಾ ಲೋಕದಲ್ಲಿ ವಿಹರಿಸುತ್ತಿರುತ್ತಾರೆ. ನಾಲ್ಕೈದು ದಿನ ಈ ರೀತಿಯಲ್ಲಿದ್ದು, ನಂತರ ಸುಸ್ತಾಗಿ ಕೆಲ ದಿನ ಮಲಗಲೂಬಹುದು. ಅವರಲ್ಲಿ ಮೊದಲಿದ್ದ ಇತರ ಕಾಯಿಲೆಗಳು ಈ ಸಮಯದಲ್ಲಿ ಉಲ್ಬಣಗೊಂಡು ಹೆಚ್ಚಿನ ತೊಂದರೆಯಾಗಬಹುದು. ನಡುಕಸನ್ನಿ ಹಿಡಿದವರನ್ನು ಆಸ್ಪತ್ರೆಗಳಿಗೆ ಸೇರಿಸಿ ಕ್ರಮಾವರಿತ ಚಿಕಿತ್ಸೆ ಕೊಡಿಸುವುದು ಅಗತ್ಯ. ಕುಡಿತವನ್ನು ಕ್ರಮೇಣ ನಿಲ್ಲಬೇಕಾಗುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಸಹಾನುಭೂತಿ ಪೂರ್ವಕ ಮೇಲ್ವಿಚಾರಣೆ ಅವಶ್ಯ.

ಕುಡಿತವನು ಹಠಾತ್ತಾಗಿ ನಿಲ್ಲಿಸುವವರಲ್ಲಿ ಅನೇಕರಿಗೆ ಮಲರೋಗ ಉಂಟಾಗಬಹುದು. ರಕ್ತದಲ್ಲಿ ಸಕ್ಕರೆಯ ಅಂಶ ಕಡಿಮೆಯಾಗುವುದೇ ಇದಕ್ಕೆ ಕಾರಣವೆನ್ನಲಾಗಿದೆ.

## ಗರ್ಭಿಣಿಯರ ಕುಡಿತದಿಂದ ಭ್ರೂಣದಲ್ಲಾಗುವ ವ್ಯತ್ಯಾಸಗಳು

ಗರ್ಭಿಣಿಯರು ಕುಡಿಯುವದರಿಂದ ಭ್ರೂಣದಲ್ಲಾಗುವ ಪರಿಣಾಮ– "ಭ್ರೂಣ ಮದ್ಯಸಾರತೆಯ ಲಕ್ಷಣಾವಳಿ"(Foetal Alcoholic Syndrome)ಯನ್ನು ಕಳೆದ ದಶಕದಲ್ಲಿ ಗುರುತಿಸಲಾಯಿತು. ಕುಡಿಯುವ ಗರ್ಭಿಣಿಯರಿಗೆ ಜನಿಸುವ ಶಿಶುಗಳಲ್ಲಿ ಶೇಕಡಾ ೩೦–೪೦ ಕ್ಕೆ ಸಂಜಾತ ನ್ಯೂನತೆಗಳಿರುವುದಲ್ಲದೆ, ಅಕಾಲಿಕ ಗರ್ಭಸ್ರಾವ ಮತ್ತು ದಿನ ತುಂಬದ ಹೆರಿಗೆಗಳ ಪ್ರಮಾಣವೂ ಹೆಚ್ಚು.

ಕುಡಿಯುವ ಅಭ್ಯಾಸವಿರುವ ಗರ್ಭಿಣಿಯರಿಗೆ ಜನಿಸುವ ಶಿಶುಗಳ ಬೆಳವಣಿಗೆ ತೂಕ, ಉದ್ದ, ಮತ್ತು ಗಾತ್ರ ಇತರರಿಗೆ ಜನಿಸುವ ಕೂಸು

ಗಳಿಗಿಂತ ಶೇಕಡ ೪೦ ರಷ್ಟು ಕಡಿಮೆ ಇರುತ್ತದೆ. ತಲೆ ಮತ್ತು ಮುಖ ಕಿರಿದಾಗಿದ್ದು, ಮುಖದ ವರ್ಚಸ್ಸು ವಿಶಿಷ್ಟ ರೀತಿಯದ್ದಾಗಿರುತ್ತದೆ. ಮುಖ ಮಧ್ಯೆ ಚಪ್ಪಟೆ, ಅಗಲ ಮೂಗು ಸೇತುವೆ, ಉರ್ಧ್ವಾಭಿಮುಖವಾದ ಮೂಗಿನ ತುದಿ, ಅಗಲವಾದ ಮೇಲ್ತುಟಿಯ ಒಲ ಓಳಿ (Philthrum), ಮತ್ತು ರೆಪ್ಪೆಗಳ ಸಂದು ಕಿರಿದಾದ ಚಿಕ್ಕ ಕಣ್ಣುಗಳೇ ಆ ವೈಶಿಷ್ಟ್ಯಗಳು. ಭ್ರೂಣಾವಸ್ಥೆಯಲ್ಲಿ ಮಿದುಳಿಗೆ ಆಲ್ಕೋಹಾಲ್‌ನಿಂದ ಹಾನಿಯಾಗುವುದರಿಂದ ಮಕ್ಕಳು ದೊಡ್ಡವರಾದ ಮೇಲೆ ಮಂದ ಬುದ್ಧಿಯವರಾಗುವುದಲ್ಲದೆ ಅವರ ಬುದ್ಧಿಮತ್ತೆಯ ಲಬ್ಧ (I. Q.) ಸಹ ಇತರರಿಗಿಂತ ಬಹಳ ಕಡಿಮೆಯದಾಗಿರುತ್ತದೆ. ಸೀಳಿದ ತುಟಿ ಮತ್ತು ಅಂಗಗಳು, ಕೈಕಾಲುಗಳು ವೈಕಲ್ಯ, ಹೃದಯ ಮತ್ತು ಮೂತ್ರ ಜನಕಾಂಗಗಳ ಸಂಜಾತ ನ್ಯೂನತೆಗಳು ಇತರರಿಗಿಂತ ಶೇಕಡಾ ೩೦–೪೦ರಷ್ಟು ಜಾಸ್ತಿಯಾಗಿರುತ್ತದೆ.

ಕುಡಿತದ ಗೀಳಿನ ಗಂಡಸರಿಂದ ಜನಿಸುವ ಶಿಶುಗಳಿಗೆ ಇಂತಹ ನ್ಯೂನತೆಗಳಾಗುವ ಪುರಾವೆಗಳು ಇನ್ನೂ ದೊರೆತಿಲ್ಲವಾದರೂ ಪ್ರಯೋಗಶಾಲೆಯ ಪ್ರಾಣಿಗಳ ಕುಡಿತದಿಂದ ಜನಿಸಿದ ಮರಿಗಳಲ್ಲಿ 'ಗುಣ ಮುರಿಕೆ' (Mutation) ಯಾದ ನಿದರ್ಶನಗಳಿವೆ. ಪುರುಷರ ವೃಷಣದಲ್ಲಿ ಉತ್ಪತ್ತಿಯಾಗುವ ಪುಲ್ಲಿಂಗಕಾರಿ ಚೋದನಿಕೆ ಕುಡಿತದಿಂದ ಕ್ರಮೇಣ ಕಡಿಮೆಯಾಗುತ್ತಾ ಬಂದು ಅವನಲ್ಲಿ ಲೈಂಗಿಕ ದೌರ್ಬಲ್ಯವುಂಟಾಗುತ್ತದೆ.

ಕೆಲವು ಪಾಶ್ಚಿಮಾತ್ಯ ದೇಶಗಳಲ್ಲಿ ವಿಶಿಷ್ಟ ಯಂತ್ರಗಳನ್ನು ಬಳಸಿ, ಕುಡಿದ ವಾಹನ ಚಾಲಕರನ್ನು ಆಕ್ಷಣದಲ್ಲೇ ಶಿಕ್ಷೆಗೊಳಪಡಿಸುತ್ತಾರೆ. ಸ್ವೀಡನ್ ದೇಶದಲ್ಲಿ ವಾಹನ ಚಾಲಕ ಕುಡಿದಿರುವುದು, ಪತ್ತೆಯಾದರೆ, ವಿಚಾರಣೆ ಇಲ್ಲದೆ ಅವನು ಸೆರೆಮನೆಯ ಅತಿಥಿಯಾಗುವನಂತೆ. ಇಂಥ ಪದ್ಧತಿ ನಮ್ಮ ದೇಶದಲ್ಲೂ ಜಾರಿಗೆ ಬಂದರೆ ವಾಹನಾಪಘಾತಗಳ ಸಂಖ್ಯೆ ಗಮನಾರ್ಹವಾಗಿ ಕಡಿಮೆಯಾಗಬಹುದು.

## ಕುಡಿತದ ಹತೋಟಿ–ಸಲಹೆಗಳು

ಎಂದೂ ಕುಡಿಯದವರು, ಕುಡಿಯುವ ಅಭ್ಯಾಸ ಬೆಳೆಸದಿರುವಲ್ಲಿ ಅವರ ಕುಟುಂಬದವರು ಸಂಬಂಧಿಕರು, ಸ್ನೇಹಿತರು ಮತ್ತು ಪರಿಸರದ ಪಾತ್ರ ಅತಿ ಮುಖ್ಯ. ಅವರೆಲ್ಲ ಕುಡಿಯುವ ಅಭ್ಯಾಸದವರಾಗಿದ್ದರೆ ಎಂದೂ ಕುಡಿಯದವರೂ ಒಂದಲ್ಲ ಒಂದು ದಿನ ಕುಡಿತಕ್ಕಿಳಿಯುವುದರಲ್ಲಿ ಸಂದೇಹವಿಲ್ಲ. ಕುಡಿತದಿಂದ ಕೆಲವರಲ್ಲುಂಟಾಗುವ ಯಥಾಸ್ಥಿತಿ ಅಥವಾ ಹಿತಕರ ಭಾವನೆಯಿಂದ, ಒಂದು ಸಾರಿ ಕುಡಿದವರು ಪದೇ ಪದೇ ಕುಡಿಯುವ ಗೀಳಿಗಿಳಿಯುತ್ತಾರೆ. ಆದರಿಂದ ಎಂದೂ ಕುಡಿಯದವರಿಗೆ ಮೋಸ ಅಥವಾ ಒತ್ತಾಯದಿಂದ ಕುಡಿಸುವ ಪ್ರಯತ್ನ ಮಾಡಬಾರದು.

ಕುಡಿತದ ಅಭ್ಯಾಸ ಬೆಳೆಸಿಕೊಂಡವರಿಗೆ, ಅವರ ಬಂಧುಗಳು, ಸ್ನೇಹಿತರು ಮತ್ತು ಸಹ






ಪಾರಿಗಳು ಕುಡಿತದಿಂದಾಗುವ ದೈಹಿಕ, ಮಾನಸಿಕ ನೈತಿಕ ಹಾನಿಗಳ ಬಗೆಗೆ ಮಾಹಿತಿ ನೀಡಿ, ಕುಡಿತವನ್ನೇ ನಿಲ್ಲಿಸಲು ಸಹಾನುಭೂತಿಪೂರ್ವಕ ಪ್ರಯತ್ನಗಳನ್ನು ನಡೆಸಬೇಕು. ನಿಲ್ಲಿಸಲು ಸಾಧ್ಯವೇ ಆಗದವರು ಮಿತಿಯಿಂದ ಕುಡಿಯುವ ಹಾಗೆ ಮಾಡಬಹುದು.

ಕುಡಿತದ ಅಭ್ಯಾಸ ಬೇರೂರಿರುವವರಿಗೆ ಕೆಲವು ಮಾತ್ರೆಗಳನ್ನು ನೀಡಿ ಅವರಿಗೆ ಮದ್ಯಸಾರದ ಮೇಲೆ ಜುಗುಪ್ಸೆಯುಂಟಾಗುವಂತೆ ಮಾಡಲೂ ಸಾಧ್ಯ. ಅಂಟಾಬ್ಯೂಸ್ ಅಥವಾ ಎಸ್ಪರಾಲ್ ಮಾತ್ರೆಗಳನ್ನು ಅಂಥವರು ಸೇವಿಸಿದಾಗ ಕೆಲ ವಿಧದ ಅಹಿತಕರ ಅನುಭವಗಳುಂಟಾಗಿ ಕುಡಿತದ ಮೇಲಿನ ಉತ್ಸಾಹಾಕಾಂಕ್ಷೆ ಮಾಯವಾಗುತ್ತದೆ. ಅವುಗಳಿಂದ ಕೆಲವು ಗಂಭೀರ ಸ್ವರೂಪದ ದುಷ್ಪರಿಣಾಮಗಳಾಗುವುದರಿಂದ ವೈದ್ಯರ ಮೇಲ್ವಿಚಾರಣೆಯಲ್ಲಿ ಅವುಗಳ ಪ್ರಯೋಗ ನಡೆಯುವುದು ಒಳಿತು.

ಕುಡಿತದ ದಾಸರಾದವರಲ್ಲಿ ಅನೇಕರ ದೈಹಿಕ ಮಾನಸಿಕ ಆರೋಗ್ಯ ಕೆಟ್ಟಿರುವುದರ ಜೊತೆಗೆ, ಕೌಟುಂಬಿಕವಾಗ ಅವರ ಜೀವನ ಅಸ್ತವ್ಯಸ್ತವಾಗಿರುತ್ತದೆ. ಉದ್ಯೋಗ ಹಾಳಾಗಿರುತ್ತದೆ. ಕಾನೂನಿನ ಸಮಸ್ಯೆಗಳು ಕಾಡುತ್ತಿರುತ್ತವೆ ಸಾಮಾಜಿಕ ಸ್ಥಾನಮಾನ ಅಧೋಗತಿಗಿಳಿದು ಅವರು ಜೀವನದಲ್ಲಿ ಹತಾಶರಾಗಿರುತ್ತಾರೆ ಕುಡಿತವನ್ನೇ ತ್ಯಜಿಸಬೇಕೆಂಬ ಆಕಾಂಕ್ಷೆ ಅವರಿಗಿದ್ದರೂ ಬಿಡುವುದರಿಂದಾಗುವ ಪರಿಣಾಮಗಳಿಂದ ತ್ಯಜಿಸಲೂ ಅಸಹಾಯಕರಾಗಿರುತ್ತಾರೆ. ಅವರನು ಈ ಪರಿಸ್ಥಿತಿಯಿಂದ ಬಚಾಯಿಸಲು, ಅವರ ಸಂಬಂಧಿಗಳು, ಸ್ನೇಹಿತರು ಮತ್ತು ಇಡೀ ಸಮಾಜವೇ ಸಹಾನುಭೂತಿಯಿಂದ ಸಹಕರಿಸಬೇಕಾಗುತ್ತದೆ. ಈ ದಿಸೆಯಲ್ಲಿ ಇತ್ತೀಚಿನ ವರ್ಷಗಳಲ್ಲಿ ಯಶಸ್ವಿಯಾಗುತ್ತಿರುವ ಸಹಾನುಭೂತಿಪೂರ್ವಕ "ಗುಂಪು ಚಿಕಿತ್ಸೆ" ಉಲ್ಲೇಖಾರ್ಹ. ೧೯೩೫ರಲ್ಲಿ ಅಮೇರಿಕದ ಕುಡುಕರಿಬ್ಬರಿಂದ ಸಂಘಟಿಸಲ್ಪಟ್ಟ 'ಅನಾಮಿಕ ಮದ್ಯ ಚಾಳಿಗರ ಕೂಟ" (Alcoholics Anonymous) ಎಂಬ ಸಂಸ್ಥೆಯ ಕಾರ್ಯ ಈ ದಿಕ್ಕಿನಲ್ಲಿ ಪ್ರಶಂಸನೀಯ. ಈ ಗುಂಪಿಗೆ ಸೇರುವುದಕ್ಕೆ ಹಣಕಾಸಿನ ಅಗತ್ಯವಿಲ್ಲ. ಜಾತಿ ಕೋತಿಗಳಿಲ್ಲ, ರೀತಿ ನೀತಿಗಳ ನಿರ್ಬಂಧವಿಲ್ಲ. ಸೇರುವವರ ಪೂರ್ಣ ಹೆಸರಿನ ದಾಖಲೆಗಳಿಲ್ಲ. ಕುಡಿತವನ್ನು ತ್ಯಜಿಸಬೇಕೆಂಬ ಹಂಬಲ ಹೊಂದಿರುವುದೇ ಅವರಿಗಿರಬೇಕಾದ ಅರ್ಹತೆ. ಈ ಹಂಬಲವಿರುವವರೆಲ್ಲರೂ ಒಂದೆಡೆ ಸೇರಿ ಪ್ರತಿದಿನ ತಮ್ಮ ಸಮಸ್ಯೆಗಳ ಬಗೆಗೆ ವಿಚಾರ ವಿನಿಮಯ ಮಾಡುವುದು. ಅಗತ್ಯವಿದ್ದವರಿಗೆ ವೈದ್ಯಸಲಹೆ ಅಥವಾ ಆಧ್ಯಾತ್ಮಿಕ ತಿಳುವಳಿಕೆ ಕೊಟ್ಟು ಹಾಗೆ ಸೇರಿದ ಸಮಯದಲ್ಲಿ ಕುಡಿಯದಿರುವುದೇ ಹಲವರ ಬದುಕಿನ ದಿನಗಳ ಮಹತ್ವಪೂರ್ಣವಾಗಬಲ್ಲದು. ಬೆಂಗಳೂರು, ಮೈಸೂರು, ಮಂಗಳೂರು, ಸೇರಿದಂತೆ ಪ್ರಪಂಚದಾದ್ಯಂತ ಇಂತಹ ಸಾವಿರಾರು ಕೂಟಗಳು ದಿನ ನಿತ್ಯ ಸೇರುತ್ತಿವೆ. ಈಗೀಗ ಕುಡುಕರ ಹತ್ತಿರದ ಸಂಬಂಧಿಗಳೂ "ಅಲ್ ಅನಾನ್" (Al Anon) ಎಂಬ ಕೂಟಗಳನ್ನು ರಚಿಸಿಕೊಂಡು ತಮ್ಮ ಸಮಸ್ಯೆಗಳಿಗೂ ಪರಿಹಾರ ಕಂಡುಕೊಳ್ಳುತ್ತಿದ್ದಾರೆ. ಇತರ ಊರುಗಳಲ್ಲೂ ಈ ಕೂಟಗಳು ವಿರ್ಪಟ್ಟರೆ ಬಹಳಷ್ಟು ಜನ ಕುಡಿತದ ಹಿಡಿತದಿಂದ ವಿಮುಕ್ತರಾಗಲು ಸಾಧ್ಯ.

---

*** ಬೆಂಗಳೂರಿನಲ್ಲಿ ಈ ಎರಡೂ ವಿಧ ಪ್ರತಿ ಬುಧವಾರ ಸಂಜೆ ೭ ಗಂಟೆಗೂ, ಭಾನುವಾರ ಬೆಳಿಗ್ಗೆ ೧೧ ಗಂಟೆಗೂ ಸೇಂಟ್ ಮಾರ್ಕ್ಸ್ ರೋಡ್ ಕ್ಲಬ್‌ನಲ್ಲಿರುವ "ಆಶೀರ್ವಾದ" ಎಂಬೆಡೆಯಲ್ಲಿ ಸೇರುತ್ತವೆಂದು ಪತ್ರಿಕಾ ಪ್ರಕಟಣೆಯಿಂದ ತಿಳಿದುಬಂದಿದೆ.**

# ವಾಹನ ಅಪಘಾತಗಳು ಮತ್ತು ಪರಿಹಾರ

**ಸೀತಾರಾಮ ಪಾಟೀಲ** ಎಂ.ಎ., ಎಲೆಲ್.ಎಂ.
**ಎನ್. ಸುಮತಿ** ಬಿ. ಎ., ಎಲೆಲ್. ಬಿ

ಕಳೆದ ಕೆಲವೊಂದು ವರ್ಷಗಳಿಂದ ರಸ್ತೆ ಅಪಘಾತಗಳ ಪ್ರಮಾಣವು ಹೆಚ್ಚುತ್ತಲಿದೆ. ಇದಕ್ಕೆ ಕಾರಣಗಳು ವಿವಿಧ. ಎಷ್ಟೋ ಸಲ ಅಪಘಾತಗಳಿಗೆ ಚಾಲಕರ ಮದಿರಾ ಸೇವನೆಯೇ ಕಾರಣವೆಂದು ಸಾಮಾನ್ಯ ಜನರ ಗ್ರಹಿಕೆ. ಇದು ಸತ್ಯದಿಂದ ದೂರವಿಲ್ಲವಾದರೂ ಇದೊಂದೇ ಕಾರಣವಲ್ಲ. ರಸ್ತೆಗಳ ಮೇಲೆ ವಾಹನಗಳ ಚಲನ–ವಲನೆಯು ಈಗ ತುಂಬ ಹೆಚ್ಚಾಗಿದೆ. ಅದೇ ಪ್ರಮಾಣದಲ್ಲಿ ರಸ್ತೆಗಳ ಸುಧಾರಣೆಯಾಗಿಲ್ಲ. ರಾಷ್ಟ್ರೀಯ ಮಾರ್ಗಗಳನ್ನು ಬಿಟ್ಟರೆ ಉಳಿದಾವ ಮಾರ್ಗಗಳನ್ನೂ ಸಾಕಷ್ಟು ವ್ಯವಸ್ಥೆಯಲ್ಲಿ ಇಟ್ಟಿಲ್ಲ. ವಿವಿಧ ಮಾರ್ಗಗಳನ್ನು ವ್ಯವಸ್ಥೆಯಲ್ಲಿ ಇಡುವುದಕ್ಕಾಗಿ ಮಾಡಿದ ಭಿನ್ನ ಭಿನ್ನ ಆಡಳಿತ ಯಂತ್ರಗಳೇ ಇದಕ್ಕೆ ಕಾರಣವೆಂದರೆ ತಪ್ಪಾಗಲಿಕ್ಕಿಲ್ಲ. ಉದಾಹರಣೆಗೆ ಹೇಳಬೇಕೆಂದರೆ ರಾಷ್ಟ್ರೀಯ ಮಾರ್ಗಗಳನ್ನು ಉತ್ತಮ ಸ್ಥಿತಿಯಲ್ಲಿ ಇರುವ ಜವಾಬ್ದಾರಿಯು ಕೇಂದ್ರದ್ದು. ರಾಜ್ಯಗಳಲ್ಲಿಯ ಮಾರ್ಗಗಳ ಸುವ್ಯವಸ್ಥೆಯು ರಾಜ್ಯಗಳ ಮೇಲೆ ಅವಲಂಬಿಸಿದೆ. ಇನ್ನು ನಗರಗಳಲ್ಲಿಯ ಮಾರ್ಗಗಳ ವ್ಯವಸ್ಥೆಯು ಸ್ಥಳೀಯ ಸಂಸ್ಥೆಗಳ ಹೊಣೆ. ಹೀಗಿರುವಾಗ ಮಾರ್ಗಗಳು ದುರವಸ್ಥೆಯನ್ನು ಹೊಂದಿದರೆ ಆಶ್ಚರ್ಯದ ಮಾತೇನಲ್ಲ. ಈ ಪ್ರಶ್ನೆಯ ಪರಿಹಾರಕ್ಕೆ ಯೋಗ್ಯ ವಿಧಾನವನ್ನು ರೂಪಿಸುವ ಕಾಲ ಈಗ ಸನ್ನಿಹಿತವಾಗಿದೆ. ಭಾರತದಲ್ಲಿ ವಾಹನಗಳ ಸಂಖ್ಯೆ ಜಾಗತಿಕ ಪ್ರಮಾಣದಿಂದ ಕಡಿಮೆ ಇದ್ದರೂ ಅಪಘಾತಗಳ ಸಂಖ್ಯೆ ಮಾತ್ರ ತುಂಬ ಹೆಚ್ಚಿನದು.



ವ್ಯಂಗ್ಯಚಿತ್ರ 'ಇಲಸ್ಟ್ರೇಟೆಡ್ ವೀಕ್ಲಿ' ಕೃಪೆ



ರಸ್ತೆ ಅಪಘಾತದ ಭೀಕರ ನೋಟವೊಂದು. ಇಂಥ ಅಪಘಾತಕ್ಕೆ ಬಲಿಯಾಗುವವರು ಹೆಚ್ಚಾಗಿ ಅಮಾಯಕರೇ (ಎದುರು ಪುಟದಟದಲ್ಲಿಯ ಚಿತ್ರ ನೋಡಿ)

## ಅಪಘಾತಗಳು ಹಾಗೂ ಸದ್ಯದ ವಿಧಿ

ಯಾವುದೇ ಅಪಘಾತವಾದಾಗ ವಿಧಿಯು ವ್ಯಕ್ತಿಯಲ್ಲಿ ಎರಡು ಪ್ರಕಾರದ ಪರಿಣಾಮಗಳು ಆಗುತ್ತವೆ. ವಾಹನ ಚಾಲಕನ ಮೇಲೆ ದಂಡ ಸಂಹಿತೆಯ ಪ್ರಕಾರ ಆರಕ್ಷಕರು ಕ್ರಮ ಕೈಕೊಳ್ಳಬಲ್ಲರು. ಅಪಘಾತದಲ್ಲಿ ಮರಣ ಸಂಭವಿಸಿದ್ದರೆ ಧಾರಾ ೩೦೪ರ ಪ್ರಕಾರ ಚಾಲಕ ದಂಡ್ಯನಾಗುತ್ತಾನೆ. ಚಿಕ್ಕ ಪುಟ್ಟ ಗಾಯಗಳಾದಲ್ಲಿ ಧಾರಾ ೩೩೭ರ ಪ್ರಕಾರ ಆರೋಪ ಪತ್ರವನ್ನು ನ್ಯಾಯಾಲಯಕ್ಕೆ ಸಲ್ಲಿಸಬಹುದು. ನ್ಯಾಯಾಲಯಗಳಲ್ಲಿ ಸೂಕ್ತ ವಿಚಾರಣೆಯ ನಂತರ ಚಾಲಕನಿಗೆ ಯೋಗ್ಯ ಶಿಕ್ಷೆಯನ್ನು ಅಥವಾ ದಂಡವನ್ನು ನ್ಯಾಯಮೂರ್ತಿಗಳು ವಿಧಿಸಬಲ್ಲರು. ಆರೋಪಿಯು ಸ್ವಪ್ರೇರಣೆಯಿಂದ ತನ್ನ ಅಪರಾಧವನ್ನು ಒಪ್ಪಿಕೊಳ್ಳಬಹುದು. ಹೀಗೆ ಆದ ಪಕ್ಷದಲ್ಲಿ ಆತನಿಗೆ ನ್ಯಾಯಾಲಯವು ದಂಡವನ್ನು ಮಾತ್ರ ವಿಧಿಸಿ ಆತನನ್ನು ಮುಕ್ತಗೊಳಿಸಬಲ್ಲದು.

ಅಪಘಾತದಲ್ಲಿ ಸಿಕ್ಕು ಗಾಯಗೊಂಡ ಅಥವಾ ಮೃತ ವ್ಯಕ್ತಿಯ ವಾರಸುದಾರರಿಗೆ ವಿಧಿಯು ರೀತ್ಯಾ ಪರಿಹಾರವನ್ನು ವಾಹನಗಳ ಚಾಲಕನಾಗಲಿ ಅಥವಾ ಮಾಲೀಕನಾಗಲಿ ಕೊಡಬೇಕು. ಈ ಪರಿಹಾರ ಹಣವನ್ನು ನಿರ್ಣಯಿಸುವಲ್ಲಿ ಸಾಮಾಜಿಕ ನ್ಯಾಯದ ಈ ಯುಗದಲ್ಲಿ ನ್ಯಾಯಾಲಯಗಳು ಮಹತ್ವದ ಪಾತ್ರ ವಹಿಸುತ್ತಲಿವೆ. ಈ ಎಲ್ಲ ಕ್ರಮಗಳು ವಾಹನ ಅಪಘಾತ ವಿಧಿಯ ಪ್ರಕಾರವೇ ಜರಗುತ್ತವೆ. ಅಪಘಾತಗಳಲ್ಲಿ ಸಿಕ್ಕು ಗಾಯಗೊಂಡವರಿಗೆ ಹಾಗೂ ಇನ್ನಿತರ ರೀತಿಗಳಲ್ಲಿ ಹಾನಿಗೆ ಈಡಾದವರಿಗೆ ಯೋಗ್ಯ ಪರಿಹಾರವನ್ನು ನೀಡುವುದೇ ಈ ವಿಧಿಯ ಮುಖ್ಯ ಉದ್ದೇಶ. ಈ ವಿಧಿಯಲ್ಲಿ ಈಗ ಸಾಕಷ್ಟು ಸಂಶೋಧನೆಗಳಾಗಿ ನ್ಯಾಯವಿತರಣೆಯು ಸಾಕಷ್ಟು ಸುಲಭವಾಗಿದೆ. ತೀರ ಇತ್ತೀಚಿನ ಸಂಶೋಧನೆಯಿಂದಾಗಿ ಗಾಯಗೊಂಡವರಿಗೆ ರೂ. ೭,೫೦೦ ಹಾಗೂ ಮೃತರ ವಾರಸುದಾರರಿಗೆ ರೂ. ೧೫೦೦೦ ಗಳನ್ನು ನ್ಯಾಯಾಲಯಗಳು ನೇರವಾಗಿ ಕೊಡಿಸಬಲ್ಲವು.



## ನ್ಯಾಯಾಲಯಗಳಲ್ಲಿ ವಿಧಿ-ವಿಧಾನ

ಕೆಲವೊಂದು ವರ್ಷಗಳ ಹಿಂದೆ ನಡೆದ ಸಂಶೋಧನೆಯಿಂದಾಗಿ ಈಗ ರಾಜ್ಯಗಳಲ್ಲಿ ಈ ಪ್ರಕರಣಗಳ ನ್ಯಾಯವಿಚಾರಣೆಯನ್ನು ಜಿಲ್ಲಾ ಹಾಗೂ ಸತ್ರ ನ್ಯಾಯಾಧೀಶರಿಗೆ ಒಪ್ಪಿಸಿಕೊಟ್ಟಿದ್ದಾರೆ. ಇದಕ್ಕೂ ಮೊದಲು ಇಂಥ ಪ್ರಕರಣಗಳನ್ನು ಮೂಲ ದಾವೆಯೆಂದು ತಿಳಿದು ನಡೆಯಿಸಬಹುದಾಗಿತ್ತು. ಆಗ ನ್ಯಾಯಾಲಯಗಳಿಗಾಗಿ ಹತ್ತುವ ಖರ್ಚು (ಸ್ಟಾಂಪ್ ಡ್ಯೂಟಿ) ಬಹಳಷ್ಟು ಆಗುತ್ತಿತ್ತು. ಬಡವರಿಗೆ ಅಷ್ಟು ಹಣವನ್ನು ಕೊಟ್ಟು ನ್ಯಾಯಾಲಯಗಳ ಮೊರೆ ಹೋಗುವುದು ಆಗುತ್ತಿರಲಿಲ್ಲ. ಹೀಗಾಗಿ ಈ ಪ್ರಕಾರದ ಪ್ರಕರಣಗಳು ಕೂಡ ಕಡಿಮೆ ಇದ್ದವು. ಶಾಸನವು ಇಂಥ ಪರಿಸ್ಥಿತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ವಿಧಿಯಲ್ಲಿ ಸಂಶೋಧನೆಯನ್ನು ಮಾಡಲಾಗಿದೆ. ಈಗ ಅಪಘಾತಗಳ ಪ್ರಕರಣಗಳಿಗೆ ಹಚ್ಚಬೇಕಾದ ಸ್ಟಾಂಪ್ ಖರ್ಚು ಕೇವಲ ೧೦ ರೂಪಾಯಿಗಳು. ಇಷ್ಟು ಕೋರ್ಟ್ ಫೀ ಕೊಟ್ಟರೆ ಸಾಕು, ಪ್ರಕರಣದಲ್ಲಿ ಬೇಕಾದಷ್ಟು ಪರಿಹಾರಧನವನ್ನು ಕೇಳಬಹುದು.




ನ್ಯಾಯಾಲಯಗಳಲ್ಲಿ ಸಿದ್ಧ ಮಾಡುವ ವಿಷಯವೂ ಅತ್ಯಂತ ಸುಲಭವಿದೆ. ಚಾಲಕನು ನಿರ್ಲಕ್ಷ್ಯದಿಂದ ವಾಹನವನ್ನು ನಡೆಯಿಸಿದ್ದಾನೆಂದು ಸಿದ್ಧ ಮಾಡಿದರೆ ಸಾಕು, ಅರ್ಜಿದಾರನು ಪರಿಹಾರಕ್ಕೆ ಪಾತ್ರನಾಗುತ್ತಾನೆ. ಅಪಘಾತದಲ್ಲಿ ಮೃತನಾದ ವ್ಯಕ್ತಿಯು ಗಳಿಕೆಯ ಮೇಲೆ ಆತನ ಕುಟುಂಬವು ಅವಲಂಬಿಸಿದ್ದರೆ ಆ ವ್ಯಕ್ತಿಯು ಎಷ್ಟು ಗಳಿಸಬಹುದಾಗಿತ್ತೋ ಅದರ ಕೆಲವೊಂದು ಅಂಶಕ್ಕೆ ಪರಿಹಾರವು ಸಿಗುತ್ತದೆ. ಸರ್ವಸಾಮಾನ್ಯವಾಗಿ ನ್ಯಾಯಾಧೀಶರು ಮಾನವೀಯತೆಯ ದೃಷ್ಟಿಯಿಂದ ಇಂಥ ಪ್ರಕರಣಗಳನ್ನು ನೋಡುವುದರಿಂದ ಪರಿಹಾರ ಹಣವಿಲ್ಲದೆ ಹೋಗುವ ವ್ಯಕ್ತಿಗಳು ವಿರಳವೆಂದೇ ಹೇಳಬಹುದು. ಆದರೆ ಒಂದಾನೊಂದು ಕಾಲಕ್ಕೆ ಪರಿಸ್ಥಿತಿ ಹೀಗಿರಲಿಲ್ಲ.

### ಪರಿಹಾರ ಹಣವನ್ನು ನಿರ್ಧರಿಸುವ ರೀತಿ

ನ್ಯಾಯಾಧೀಶರು ಇಂಥ ಪ್ರಕರಣಗಳಲ್ಲಿ ಪರಿಹಾರಧನದ ಮೊತ್ತವನ್ನು ನಿರ್ಧರಿಸಲು ತಮ್ಮವೇ ಆದ ಕೆಲವೊಂದು ಸೂತ್ರಗಳನ್ನು ಅನುಸರಿಸುತ್ತ ಬಂದಿದ್ದಾರೆ. ಮೃತರ ಕುಟುಂಬಕ್ಕೆ ಮೃತನು ಕೊಡುತ್ತಿದ್ದ ಹಣವನ್ನು ಹನ್ನೆರಡರಿಂದ ಗುಣಿಸಿದರೆ ಆತನ ಮರಣದಿಂದಾಗಿ ಕುಟುಂಬಕ್ಕೆ ಆದ ವಾರ್ಷಿಕ ಹಾನಿಯು ಲಭ್ಯವಾಗುತ್ತದೆ. ಹೀಗೆ ಬಂದ ಸಂಖ್ಯೆಗೆ ೧೨ ರಿಂದ ೧೫ಕ್ಕೆ ಗುಣಾಕಾರ ಮಾಡಿದರೆ ಪರಿಹಾರ ಹಣದ ರಾಶಿಯು ಲಭ್ಯವಾಗುತ್ತದೆ. ಪರಿಹಾರ ಹಣದ ಮೂಲ ಉದ್ದೇಶವು ಇದರಿಂದ ಸಾಕಷ್ಟು ಮಟ್ಟಿಗೆ ಸಾರ್ಥಕವಾದಹಾಗಾಗುತ್ತದೆ. ಇನ್ನೊಂದು ವಿಧಾನವೆಂದರೆ ಮೃತನು ಗಳಿಸುತ್ತಿದ್ದ ಉತ್ಪನ್ನವನ್ನು ಆತನು ಬದುಕಬಹುದಾದ ವರ್ಷಗಳ ಸಂಖ್ಯೆಗೆ ನಿರ್ಧರಿಸಿ, ಹೀಗೆ ಬಂದ ಒಟ್ಟು ರಾಶಿಯಲ್ಲಿ ಪ್ರತಿಶತ ೩೦ ರಂತೆ ಕಡಿಮೆ ಮಾಡಬೇಕು. ಹೀಗೆ ಕೂಡ ಎಷ್ಟೋ ನ್ಯಾಯಾಧೀಶರು ನಿರ್ಧರಿಸುತ್ತಾರೆ. ಆದರೆ ಇದರ ರಹಸ್ಯವು

ಸುಲಭವಾಗಿ ತಿಳಿಯುವುದಿಲ್ಲ. ಇದಲ್ಲದೆ ಕೌಟುಂಬಿಕ ಹಾನಿ ಮತ್ತು ಖರ್ಚುಗಳು ವಿಶೇಷವಾಗಿ ಹಣದ ಮೊತ್ತವನ್ನು ಗೊತ್ತು ಮಾಡುತ್ತಾರೆ. ಚಿಕ್ಕಮಕ್ಕಳಿಗೆ ಮಾರ್ಗಗಳ ಬಗ್ಗೆ ಜ್ಞಾನವು ಕಡಿಮೆ ಇರುವುದರಿಂದ ಚಿಕ್ಕ ಮಕ್ಕಳು ಅಪಘಾತದಲ್ಲಿ ಮರಣಹೊಂದಿದರೆ ೮–೧೦ ಸಾವಿರ ರೂಪಾಯಿಗಳಷ್ಟು ಪರಿಹಾರ ಧನವು ಸಿಗುವುದು. ಅಲ್ಲದೆ ಕೆಲವೊಂದು ಪ್ರಕರಣಗಳಲ್ಲಿ ಆರೋಪಿಯು ತಪ್ಪು ಒಪ್ಪಿಕೊಂಡಾಗ ಪರಿಹಾರಧನವನ್ನು ಕೊಡಲೇಬೇಕು. ಇದು ಕರ್ನಾಟಕ ಉಚ್ಚ ನ್ಯಾಯಾಲಯದ ಮಹತ್ವದ ನಿರ್ಣಯ.

## ಪರಿಹಾರಧನವನ್ನು ಕೊಡುವರಾರು ?

ವಿಧಿಯನ್ವಯ ಎಲ್ಲ ವಾಹನಗಳೂ ವಿಮೆಯನ್ನು ಇಳಿಸಿರಲೇಬೇಕು. ಈಗ ಸಾಮಾನ್ಯ ವಿಮೆ ಕೂಡ ರಾಷ್ಟ್ರೀಕೃತವಾದ್ದರಿಂದ ಪ್ರಮುಖವಾಗಿ ನಾಲ್ಕು ಕಂಪನಿಗಳು ಮಾತ್ರ ಇವೆ. ಅವುಗಳಲ್ಲಿಯೇ ಸ್ಪರ್ಧೆಯಿದೆ. ಈ ವಿಮಾ ಕಂಪನಿಗಳು ಹಣವನ್ನು ಕೊಡುತ್ತವೆ. ನ್ಯಾಯಾಲಯದ ನಿರ್ಣಯವಾದ ನಂತರ ಆದಷ್ಟು ಬೇಗನೆ ಈ ಹಣವನ್ನು ವಿಮಾ ಕಂಪನಿಗಳು ನ್ಯಾಯಾಲಯಗಳಲ್ಲಿ ಜಮಾ ಮಾಡುತ್ತವೆ. ಅಪಘಾತ ಹೊಂದಿದ ವಾಹನದ ವಿಮಾ ಪಾಲಿಸಿಯು ಜಾರಿಯಲ್ಲಿ ಇದ್ದರೆ ಮಾತ್ರ ವಿಮಾ ಕಂಪನಿಗಳು ಹಣವನ್ನು ಕೊಡಲಿಕ್ಕೆ ಬಾಧ್ಯವಾಗುತ್ತವೆ. ಇಲ್ಲವಾದರೆ ವಾಹನಗಳ ಮಾಲಿಕನೇ ಆ ಹಣವನ್ನು ಕೊಡಬೇಕಾಗುತ್ತದೆ. ಆದ್ದರಿಂದ ಮಾಲಿಕರು ವಿಮಾ ಪಾಲಿಸಿಯ ಬಗ್ಗೆ ಸಾಕಷ್ಟು ಕಾಳಜಿಯನ್ನು ವಹಿಸಬೇಕು; ಕೊಡಬೇಕಾದ ಹಣವು ವೇಳೆಗೆ ಸರಿಯಾಗಿ ಕೊಡಲಿಲ್ಲವಾದರೆ ನ್ಯಾಯಾಲಯಗಳಿಗೆ ಪುನಃ ಒಂದು ಸೂಚಿಕಾಪತ್ರವನ್ನು ಸಲ್ಲಿಸಬೇಕಾಗುತ್ತದೆ. ಆಗ ನ್ಯಾಯಾಧೀಶರು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಆ ಹಣವನ್ನು ಬೇಗನೆ ವಸೂಲು ಮಾಡಲಿಕ್ಕೆ ಆದೇಶ ಕೊಡುತ್ತಾರೆ. ಇದಲ್ಲದೆ ರಾಷ್ಟ್ರೀಕೃತ ರಾಜ್ಯ ಪರಿವಹನ ಮಂಡಲಗಳು ತಮ್ಮದೇ ಆದ ಒಂದು ನಿಧಿ (ಪರಿಹಾರ ನಿಧಿ)ಯನ್ನು ಇಟ್ಟಿರುತ್ತವೆ. ಈ ನಿಧಿಯ ಮೂಲಕವಾಗಿ ಅಪಘಾತ ಪ್ರಕರಣಗಳಲ್ಲಿ ಹಣವನ್ನು ಕೊಡುತ್ತಾರೆ. ಹೀಗಾಗಿ ಹಣವನ್ನು ದೊರಕಿಸುವುದು ಕೂಡ ಸಾಕಷ್ಟು ಸುಲಭವಾದಂತಿದೆ.

## ಸಾರಾಂಶ ಮತ್ತು ಸುಧಾರಣೆ

ಇಷ್ಟೆಲ್ಲ ಸೌಲಭ್ಯಗಳನ್ನು ಕೊಟ್ಟಿದ್ದರೂ ಪ್ರತ್ಯಕ್ಷವಾಗಿ ನ್ಯಾಯನಿರ್ವಹಣೆಯ ಗತಿ ಕುರಿತ ಗತಿಯೆಂಬ ಆಪಾದನೆಯು ಮೇಲಿಂದ ಮೇಲೆ ಕೇಳಿಬರುತ್ತದೆ. ಇದಕ್ಕೆ ಬೇರೆ ಅನೇಕ ಕಾರಣಗಳು ಇರಬಹುದು. ಆದರೂ ಕೂಡ ಇದಕ್ಕೆ ಮಾರ್ಗವನ್ನು ಶೋಧಿಸಿ ತೆಗೆಯಲೇಬೇಕು. ಪ್ರಕರಣಗಳು ನಿರ್ದಿಷ್ಟ ಅವಧಿಯಲ್ಲಿ ನಿರ್ಣಯವಾಗಲೇಬೇಕೆಂಬ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಿದರೆ ಸಾಮಾನ್ಯ ಜನತೆಗೆ ಹೆಚ್ಚು ಅನುಕೂಲವಾಗುವುದು. ಇದರ ಜತೆಗೆ ಹಣವು ಸರಿಯಾಗಿ ವಿನಿಮಯವಾಗುವಂತೆ ಮಾಡಲು ಏನಾದರೊಂದು ಮಾರ್ಗವನ್ನು ವಿಧಿಸಲೇಬೇಕು. ಇದಕ್ಕೆ ಎಲ್ಲಕ್ಕಿಂತ ಹೆಚ್ಚಿನ ಪರಿಣಾಮಕಾರಿಯಾದ ಉಪಾಯವೆಂದರೆ ನ್ಯಾಯವಾದಿಗಳಲ್ಲಿ ಕರ್ತವ್ಯ ನಿರ್ವಹಣೆಯ ಬಗ್ಗೆ ಹೆಚ್ಚಿನ ಶಿಸ್ತು ಬೇಕು. ಅದರಿಂದ ಸಾಮಾನ್ಯ ಜನತೆಗೆ ನ್ಯಾಯವು ದೊರೆಯುವುದು.

ಕೆಲವೊಂದು ಪ್ರಕರಣಗಳಲ್ಲಿ ವಾಹನಗಳ ಚಾಲಕರು ಅಪಘಾತ ಮಾಡಿ ಓಡಿ ಹೋಗಿಬಿಡುತ್ತಾರೆ. ವಾಹನಗಳ ಸಂಖ್ಯೆಯಾಗಲಿ ಅಥವಾ ಅವರ ಬಗ್ಗೆ ಮಾಹಿತಿಯಾಗಲಿ ಸಿಗುವದಿಲ್ಲ. ಇಂಥ ಪ್ರಕರಣಗಳಲ್ಲಿ ಶಾಸನವೇ ಪರಿಹಾರ ಹಣವನ್ನು ಕೊಡಬೇಕು. ಇದರಿಂದಾಗಿ ಸಾಮಾಜಿಕ ನ್ಯಾಯದ ಕಲ್ಪನೆಯು ಸಾಮಾನ್ಯವಾಗಿ ಎಲ್ಲರನ್ನೂ ತಲುಪಲು ಸಾಧ್ಯವಾಗುತ್ತದೆ.



-೭೦-

## ಬೆಳಕಿನಿಂದ ಶುಭ, ಜಾಡನಿಂದ ಕೋವಿದ

ಶುಭ ಎನ್ನುತ್ತೇವೆ. ಈ ಶಬ್ದದಲ್ಲಿ ಈಗ ಮತ್ತು ಮುಂದೆ ಒಳಿತು ಆಗತ್ತದೆಂಬ ಅರ್ಥ ಧ್ವನಿಸುತ್ತದೆ. ಆದರೆ **ಶುಭ** ಎಂಬುದು **ಶುಭ್** ಎಂಬ ಧಾತುವಿನಿಂದ ಹುಟ್ಟಿದ್ದೆಂದು ನಿರುಕ್ತಕಾರರು ಹೇಳುತ್ತಾರೆ. ಅದರ ಪ್ರಾಥಮಿಕ ಅರ್ಥ ತೊಳಗು, ಬೆಳಗು, ಹೊಳೆ, ಪ್ರಕಾಶಿಸು ಎಂದು. ಶುಭ್ರ ಎಂಬುದೂ ಇದೇ ಧಾತುವಿನ ಮಗು; ಎಂದರೆ ಶುಭಕ್ಕೂ ಬೆಳಕು, ಸ್ವಚ್ಛತೆಗೂ ಇರುವ ಸಂಬಂಧ ತಿಳಿಯುತ್ತದೆ. ಪುರಾತನ ಮಾನವನಿಗೆ ಕತ್ತಲ ಮೇಲಿದ್ದ ಭಯ ಎಷ್ಟೆಂದರೆ ಬೆಳಕೇ ಶುಭ ಎಂದು ಅವನು ಭಾವಿಸುತ್ತಿದ್ದ. ಎಲ್ಲ ಒಳ್ಳೆ ಕಾರ್ಯಗಳು ದೀಪದ ಸನ್ನಿಧಾನದಲ್ಲಿ ಆಗಬೇಕು. ಮಂಗಳಾರತಿ ಎಂದರೆ ದೀಪಗಳನ್ನು ಸುಳಿಯುವುದು. ಶುಭ ಕಾರ್ಯದ ನಡುವೆ ದೀಪ ಆರಿದರೆ ಅದು ಕೆಟ್ಟದ್ದನ್ನು ಸೂಚಿಸುತ್ತದೆ. ಕುಲಕ್ಕೊಂದು "ದೀಪ"ವನ್ನು ಹಡೆಯುವುದಕ್ಕಾಗಿ ಮೊದಲ ಸಲ ಧರ್ಮಪತ್ನಿಯನ್ನು ಕೂಡುವುದನ್ನು ಶೋಭನ ಪ್ರಸ್ತವೆನ್ನುತ್ತಾರೆ.

**ಭಾಗ್ಯ** ಎಂಬುದು ಕೂಡ ಮೂಲದಲ್ಲಿ ಬೆಳಕಿಗೇ ಸಂಬಂಧಿಸಿದ್ದೆಂದು ಅನುಮಾನಿಸಬಹುದು. **ಭಗ** ಉಳ್ಳದ್ದು **ಭಾಗ್ಯ**. **ಭಜ್** ಧಾತುವಿನಿಂದ ಇದು ಹುಟ್ಟಿದ್ದು. ಅದಕ್ಕೆ ಪಡೆ, ಹೊಂದು ಇತ್ಯಾದಿ ಅರ್ಥಗಳಿದ್ದರೂ ಸೌಭಾಗ್ಯವನ್ನು ಕೊಡುವ ದೇವತೆಗೆ ಭಗ ಎಂಬ ಹೆಸರು ಇರುವುದನ್ನೂ ಈತ ಸೂರ್ಯನ ಒಂದು ರೂಪವೆಂದೂ ಗಮನಿಸಬೇಕು. ಈ ಭಗನು ಪ್ರಾಚೀನ ಪಾರಸೀಕರ **ಬಗ**, ಅವನೂ ಸೂರ್ಯನ ಅಂಶ. ಪ್ರಾಚೀನ ಪಾರಸೀಕರು **ಭಾಗ್ಯ**ವನ್ನು **ಬಕ್‌ಸ್ತ** (ಆಧುನಿಕ ಪರ್ಶಿಯನ್ **ಬಖ್ತ್**) ಎನ್ನುತ್ತಿದ್ದರು. ಹೀಗೆ ಭಗವಂತನೂ ಮೂಲದಲ್ಲಿ ತೇಜಸ್ಸುಳ್ಳವನು ಆಗಿರಬೇಕು. ಬೆಳಕೇ ಭಾಗ್ಯ.

**ಮಂಗಳ** ಎಂಬುದು ಶುಭಾರ್ಥಕವಾದ ಇನ್ನೊಂದು ಶಬ್ದ. ಆದರೆ ಶುಭಕ್ಕೆ ನಿಷ್ಪತ್ತಿ ಸುಲಭವಾಗಿ ಸಿಗುವಂತೆ ಮಂಗಳಕ್ಕೆ ಸಿಗುವುದಿಲ್ಲ. **ಮಂಗಳ** ಎಂಬುದು **ಮಂಗ್** ಧಾತುವಿನಿಂದ ಬಂದದ್ದೆಂದು ನಿರುಕ್ತ ಹೇಳಲಾಗುತ್ತದೆ; ಆ ಧಾತುವಿಗೆ **ಹೋಗು** ಎಂದರ್ಥವೆಂದೂ ಹೇಳುತ್ತಾರೆ. ಆದರೂ **ಮಂಗ್** ಕ್ರಿಯಾಪದವನ್ನು ಶುಭ ಇಲ್ಲವೇ ಹೋಗು ಎಂಬರ್ಥದಲ್ಲಿ ಎಲ್ಲಿಯೂ ಪ್ರಯೋಗಿಸಿದ್ದು ಸಿಗುವುದಿಲ್ಲ. **ಮಂಗಳ** ಎಂಬುದು **ಕುಜ** (Mars) ಗ್ರಹದ ಹೆಸರೂ ಹೌದು. ಕುಜನು ಕೆಂಪು ಗ್ರಹವೆಂಬುದು ಪ್ರತ್ಯಕ್ಷ. ಆದ್ದರಿಂದ ಮಂಗಳ ಶಬ್ದಕ್ಕೆ ಕೆಂಪು ಅಥವಾ ಅದಕ್ಕೆ ಸಮೀಪವಾದ ಅರ್ಥ ಇರಬಹುದೇ ಎಂದು ನೋಡುವುದು ಅಸಂಗತವಾಗದು. ಅರಿಸಿನದ ಬೇರಿಗೆ ದಕ್ಷಿಣ ದ್ರಾವಿಡ ಭಾಷೆಗಳಲ್ಲೆಲ್ಲ, **ಮಂಚಳ್**, **ಮಂಜಳ್** ಎಂಬ ಹೆಸರಿದೆ. ಅರಿಸಿನ ಪುಡಿಯ ಕಡು ಹಳದಿ ಬಣ್ಣಕ್ಕೂ ಅದೇ ಹೆಸರು ಸಲ್ಲುತ್ತದೆ. ಅದಕ್ಕಿಂತಲೂ ಕಡು ಹಳದಿಯಾದ ಕುಂಕುಮ ಕೇಸರಕ್ಕೂ ಕೆಲವೊಮ್ಮೆ **ಮಂಜಳ್** ಪದ ಪ್ರಯೋಗವಾಗುತ್ತದೆ. ಕಡು ಕಿತ್ತಳೆ ಬಣ್ಣದ ಬೀಜವೊಂದಕ್ಕೆ **ಮಂಚಟಿ ಮಂಜಟಿ** ಎಂಬ ಹೆಸರಿದೆ; (ಅದನ್ನು ಗುಲಗಂಜಿಯಂತೆ ಬಂಗಾರ ಮತ್ತು ರತ್ನ ತೂಗುವಲ್ಲಿ ಹಿಂದೆ ಬಳಸುತ್ತಿದ್ದರು). ಅರಿಸಿನ, ಸಿಂಧೂರ, ಅರಸಿನಕ್ಕೆ ಹತ್ತಿರವಾದ ಕೆಂಪು ಬಣ್ಣ ಮತ್ತು ಸ್ವತಃ ಅರಸಿನ ಪುಡಿ ಸೌಭಾಗ್ಯಕರವೆಂಬ ನಂಬಿಕೆ ಭಾರತದಲ್ಲೆಲ್ಲ ಇದೆ. ಮಂಗಳಮೂರ್ತಿ ಗಣಪತಿ **ಸಿಂಧೂರ** ವರ್ಣದವನು. ಅರಸಿನ-ಕುಂಕುಮ ಸೌಭಾಗ್ಯ ಚಿಹ್ನಗಳು. **ಉಮಾ** ಮತ್ತು **ಲಕ್ಷ್ಮಿ** ಮಂಗಳ ದೇವತೆಗಳೆಂದು ಪ್ರಸಿದ್ಧ. ಕೋಶಗಳನ್ನು ನೋಡಿದರೆ ಉಮಾ, ಲಕ್ಷ್ಮಿ ಎಂದೆರಡೂ ಶಬ್ದಗಳಿಗೂ **ಅರಸಿನ** ಬೇರೆಂಬ ಅರ್ಥವೂ ಇದೆ. ಹೀಗೆ ಅರಸಿನ ಬಣ್ಣದಿಂದಲೇ **ಶುಭಕ್ಕೆ ಮಂಗಳವೆಂಬ** ಶಬ್ದ ಬಂದಿದೆಯೆಂಬುದು ತರ್ಕಕ್ಕೆ ನಿಲ್ಲುವ ಮಾತು. **ಮಂಜಳ**ದಿಂದ **ಮಂಗಳ**ಕ್ಕೆ ಆದ ಬದಲಾವಣೆ ಸಹಜವಾದುದು. ಮಂಗಳ ಗ್ರಹದ ಹೆಸರೂ ಅದರ ಬಣ್ಣದಿಂದ ಬಂದಿದ್ದೇ ಇರಬೇಕು.

ಯಾವುದೊಂದು ಕೆಲಸವನ್ನು ಚೆನ್ನಾಗಿ **ಬಲ್ಲವರೆಂಬರ್ಥದ** ಬೇರೆ ಬೇರೆ ಶಬ್ದಗಳು ಗತ ಕಾಲದ ಬಗ್ಗೆ ಅರ್ಥಪೂರ್ಣವಾದ ತಿಳಿವಳಿಕೆಯನ್ನು ಕೊಡುತ್ತವೆ. ಕನ್ನಡದ **ಬಲ್ಲವನನ್ನೇ** ತೆಗೆದುಕೊಂಡರೆ **ಬಲ್ ವಲ್,** ಎಂಬವು **ಶಕ್ತಿಯನ್ನು** ಸೂಚಿಸುವ ಧಾತುವಾಗಿ ಹೆಚ್ಚು ಕಮ್ಮಿ ಎಲ್ಲ ಭಾಷೆಗಳಲ್ಲಿ ಸಮಾನವಾಗಿವೆ. ಶಕ್ತಿಯುಳ್ಳವನೇ **ಬಲ್ಲವನು** ಇದಕ್ಕೆ ಸೋಜಿಗ ಬೇಡ. ಸಂಸ್ಕೃತದ **ದಕ್ಷ** ಎಂದರೂ ಬಲವುಳ್ಳ, ಸಾಮರ್ಥ್ಯವಂತ. **ಕಾರ್ಯದಕ್ಷ** ಎನ್ನುವಾಗ ಕೆಲಸ ಮಾಡುವಲ್ಲಿ ಬಲ್ಲವುಳ್ಳವ ಎಂದು ತಾತ್ಪರ್ಯ. ಕನ್ನಡದಲ್ಲಿ ಬುದ್ಧಿಬಲವುಳ್ಳವನನ್ನು **ಬಲ್ಲವನೆಂದೂ** ಶಾರೀರಿಕ ಬಲವುಳ್ಳವನನ್ನು **ಬಲ್ಲಿದನೆಂದೂ** ಸೂಕ್ಷ್ಮ ಭೇದ ಮಾಡಲಾಗಿದೆ.

**ವಿಚಕ್ಷಣನೂ** ಕಾರ್ಯಸಮರ್ಥನೇ. ಆದರೆ ಅವನದು ಬೌದ್ಧಿಕ ದಕ್ಷತೆ. **ಚಕ್ಷ** ಎಂದರೆ ವೇದಗಳಲ್ಲಿ **ಕಾಣುವಿಕೆ, ದರ್ಶನ.** ಅವನು ಜ್ಞಾನಿ. ಜ್ಞಾನಕ್ಕೂ ಕಾಣುವುದಕ್ಕೂ ಅನಾದಿಯಿಂದ ನಂಟು. "ಕಂಡ"ದ್ದನ್ನು ಅವನು ಪರರಿಗೆ ಹೇಳುವನೂ ಹೌದು. **ಚಕ್ಷಣಕ್ಕೆ** ಹೇಳುವವನೂ **ಎಂದೂ ಅರ್ಥ.** ಜ್ಞಾನಿಗಳನ್ನು ಕುರಿತು ಪುರಾಣಗಳಲ್ಲಿ "ವದತಾಂ ವರ" (ನುಡಿಯುವವರಲ್ಲಿ ಶ್ರೇಷ್ಠ) ಎಂಬ ಮಾತು ಪದೇ ಪದೇ ಬರುತ್ತದೆ. ಇಂಗ್ಲೀಷಿನ wise manಗೆ ಸಮಾನ **ವಿಚಕ್ಷಣ.**

**ನಿಷ್ಣಾತನ** ದಾರಿ ಬೇರೆ. ವಿಂಗಡಿಸಿದರೆ **ನಿಸ್ + ಸ್ನಾತ್** ಎಂದಾಗುವ ಈ ಮಾತಿನ ಅರ್ಥ ಚೆನ್ನಾಗಿ **ಸ್ನಾನ** ಮಾಡಿದವನು. ಇದು ಗುರುವಿನ ಆಶ್ರಮದಲ್ಲಿ ಪೂರ್ತಿ ವಿದ್ಯಾಭ್ಯಾಸ ಮಾಡಿದವನು ಅಲ್ಲಿಂದ ಬೀಳ್ಕೊಳ್ಳುವಾಗ **ಅವಭೃಥ ಸ್ನಾನ** ಮಾಡಿ ಅಪ್ಪಣೆ ತೆಗೆದುಕೊಳ್ಳುವ ಸಂಪ್ರದಾಯವನ್ನು ಸೂಚಿಸುತ್ತದೆ. ನಾವೀಗ **ಸ್ನಾತಕ** ಎನ್ನುವುದು ಈ ಪರಂಪರೆಯನ್ನು ಅನುಸರಿಸಿಯೇ. ಹೀಗೆ **ನಿಷ್ಣಾತ** ಪರಿಪೂರ್ಣ ವಿದ್ಯಾಭ್ಯಾಸದಿಂದ ಪರಿಣತಿ ಪಡೆದವ.

ಚತುರ ಇಂಗ್ಲೀಷಿನ Cleverಗೆ ಹತ್ತಿರ ಹತ್ತಿರ ಬರುತ್ತದೆಂದು ಅದರ ಮೂಲ ಶೋಧಿಸಿದರೆ ಅರ್ಥವಾಗುತ್ತದೆ. **ಚತುರ ಜ್ಞಾನಿಯೆನ್ನಲಾಗುವುದಿಲ್ಲ.** ಅವನು **ಕಾರ್ಯಸಾಧಕ.** ಸಂಸ್ಕೃತದ **ಚತ್** ಧಾತುವಿಗೆ **ಮುಚ್ಚಿಡು** ಎಂದೂ ಅರ್ಥವಿದೆ. ತನ್ನ ಗುಟ್ಟುಗಳನ್ನು, ಬಹುಶಃ ಉದ್ದೇಶವನ್ನು ಹೊರ ಬಿಡದೇ ಕೆಲಸ ಮಾಡಿಸಿಕೊಳ್ಳುವ **ಉಪಾಯ ಜಾಣನೇ** ಚತುರ. ಆದ್ದರಿಂದ **ರಾಜಕಾರಣ ಚತುರ** ತುಂಬ ಉಚಿತ ಪ್ರಯೋಗವಾದೀತು. **ಶಾಸ್ತ್ರ ಚತುರ** ಸಲ್ಲದು. ರಾಜಕಾರಣದ ಚತುರ್ ಉಪಾಯ (ನಾಲ್ಕು ಉಪಾಯ)ಗಳು **ಚತುರೋಪಾಯಗಳೂ** ಹೌದು. **ಕುಶಲ** ಚತುರನಿಗೆ ಹತ್ತಿರದವ, **ಕುಶ** ಎಂದರೆ ಮೊನೆಯಾದ ತುದಿಯುಳ್ಳ ದರ್ಭದ ಹುಲ್ಲು. ಚೂಪಾದ ಬುದ್ಧಿಯುಳ್ಳವ **ಕುಶಲ.**

**ಕೋವಿದ** ಮತ್ತು **ಪ್ರವೀಣ** ಎಂಬ ಎರಡು ಶಬ್ದಗಳ ಬಗ್ಗೆ ನನ್ನದೇ ಊಹೆಯನ್ನು ಈಗ ಮುಂದಿಡುತ್ತಿದ್ದೇನೆ. ಇದು ಮನುಷ್ಯನ ಅತಿ **ಪ್ರಾಚೀನ** ವಿದ್ಯೆಗಳಲ್ಲಿ ಒಂದಾದ **ಬಟ್ಟೆ** ನೇಯುವಿಕೆಗೆ ಸಂಬಂಧಿಸಿಲ್ಲವೆ? **ಕುವಿಂದ** ಎಂದರೆ ನೇಕಾರ. **ವಯನ** ಎಂದರೆ **ನೇಕಾರಿಕೆ,** ಇದು ಋಗ್ವೇದದಷ್ಟು ಹಳೆ ಶಬ್ದ. **ಬಟ್ಟೆ** ನೇಯುವಿಕೆ ಅತ್ಯಂತ ಗೌರವಾರ್ಹ ವಿದ್ಯೆಯಾಗಿತ್ತೆಂಬುದಕ್ಕೆ ಋಗ್ವೇದದ ೨, ೬, ೧೦ ನೇ ಮಂಡಲಗಳಲ್ಲಿ ಹಲವಾರು ಮಂತ್ರಗಳು ಸಾಕ್ಷ್ಯ ಹೇಳುತ್ತೇವೆ. "ಇಮೇ ವಯಂತಿ ಪಿತರಃ" "ಕವೇಶ್ಚಿತ್ ತಂತುಂ ಮನಸಾ ವಿಯಂತಾಃ" ಇತ್ಯಾದಿ ಋಕ್‌ಗಳನ್ನು ಉದಾಹರಿಸಬಹುದು. ೧೦೧ ದೇವತೆಗಳು ತಂತುಗಳನ್ನು ನೇಯಲು ಸೇರಿದ್ದಾರೆ, ವೃದ್ಧರು ನೇಯಲು ಮಾರ್ಗದರ್ಶನ ಮಾಡುತ್ತಾರೆ ಎಂಬರ್ಥದ ಮಂತ್ರ ಯಜುರ್ವೇದದಲ್ಲಿದೆ. ಈ ಹಿರಿದಾದ ವಿದ್ಯೆಯನ್ನು ಬಲ್ಲ **ಕುವಿಂದನೇ** ಮುಂದೆ **ಕೋವಿದ** ಪದಕ್ಕೂ **ವಯನವೇ** ಲೀನವಾಗಿ **ಪ್ರವೀಣಕ್ಕೂ** ಜನ್ಮ ಕೊಟ್ಟಿರಲಾರದೇ? **ವಯುನ** ಎಂಬ ಶಬ್ದ ಜ್ಞಾನ ಎಂಬರ್ಥದಲ್ಲಿ ಈಶಾವಾಸ್ಯದಲ್ಲಿ ಬರುತ್ತದೆ. ಅದು **ವಯನಕ್ಕೆ** ಎಷ್ಟು ಹತ್ತಿರವಾಗಿದೆಯೆಂದರೆ ಎರಡರ ಬೇರೂ ಒಂದೇ ಅನಿಸುತ್ತದೆ.

**ಪಾ. ವೆಂ.**

# ಇದುವೆ ಜೀವ ಇದು ಜೀವನ

ಮೈಸೂರಿನ ವಿದ್ಯಾರ್ಥಿನಿಯರ ಕಾಲೇಜೊಂದಕ್ಕೆ ನನ್ನ ತಂಗಿಯನ್ನು ಸೇರಿಸಲು ಹೋದೆ. ಅಲ್ಲಿ ಅಡ್ಮಿಷನ್ ಫೀಸ್ ತೆಗೆದುಕೊಳ್ಳುತ್ತಿದ್ದ ಕೌಂಟರಿನೆದುರು ಭರ್ಜರಿ ಕ್ಯೂ ಬೆಳೆದಿತ್ತು. ಅರ್ಜೆಂಟಾಗಿ ನಾನಲ್ಲಿಂದ ವಾಪಸ್ಸಾಗಬೇಕಿದ್ದರೂ ತಾಳ್ಮೆಯಿಂದಲೇ ನೀಳವಾದ ಆ ಸಾಲಿನ ಹಿಂಭಾಗಕ್ಕೆ ಹೋಗಿ ನಿಂತದ್ದಾಯಿತು. ಕ್ಯೂ ಚಲಿಸುವಂತೇನೂ ಕಾಣುತ್ತಿರಲಿಲ್ಲ. ಎಲ್ಲರಿಗೂ ಅಸಮಾಧಾನ. ಕೆಲವರು ತಮ್ಮ ಸರದಿ ಬರುವುದು ಇನ್ನೆಷ್ಟೊತ್ತೊ ಎಂದು ಕತ್ತೆತ್ತಿ, ತುದಿಗಾಲಲ್ಲಿ ನಿಂತು ಕೌಂಟರಿನತ್ತ ನೋಡುತ್ತಿದ್ದರೆ ಇನ್ನು ಕೆಲವರು ನಿಂತಲ್ಲೇ ಚಡಪಡಿಸುತ್ತಿದ್ದರು. ಅಷ್ಟೊತ್ತಿಗೆ ಲಲನೆಯರ ಒಂದು ಚಿಕ್ಕ ಗುಂಪು-ಸೀನಿಯರ್ ವಿದ್ಯಾರ್ಥಿನಿಯರಿರಬೇಕು-ಕ್ಯೂನತ್ತ ಬಂತು. ಕಾಲು ನೋಯಿಸಿಕೊಳ್ಳುತ್ತಾ ಸಮ್ಮದಿ, ಕಳೆದುಕೊಳ್ಳುತ್ತಾ ನಿಂತವರ ಅಸಹನೆಯ ನೋಟ ಅವರಲ್ಲಿ ನೆಟ್ಟವು.

ಗಂಡುಡುಗೆ! ಮನೆಯಲ್ಲಿನ ಮುದ್ದು ಜೂಲು ನಾಯಿಯನ್ನು ನೆನಪಿಗೆ ತರುವಂಥ ಕೇಶಾಲಂಕಾರ! ರಕ್ತವರ್ಣದ ರಂಗು ಬಳಿದ ತುಟಿಯಲ್ಲಿ ಟಸ್ ಪುಸ್ ಇಂಗ್ಲೀಷು! ಗಣ್ಯತೆಯ ಗತ್ತು!

ಗುಂಪು ನೇರವಾಗಿ ಕೌಂಟರಿನತ್ತ ಸಾಗಿತು. "ಹಾವ್ ಮಚ್!" ಉಲಿಯಿತು ಒಂದು ಧ್ವನಿ. ಕಿಂಡೀಲಿ ಒಳಹೋದ ಹಣಕ್ಕೆ ರಶೀದಿ ಚಕ್ ಅಂತ ಹೊರಬಂತು. ಫೀಸ್ ಕಟ್ಟೋ ಕೆಲಸ ಚಿಟಿಕೆ ಹೊಡೆದಷ್ಟು ಸಮಯದಲ್ಲಿ ಮುಗಿಯಿತು. ಬಂದ ಗಂಡು ನಡಿಗೆಯಲ್ಲೇ ಗುಂಪು ವಾಪಸ್ಸಾಯಿತು. ಕ್ಯೂನಲ್ಲಿ ನಿಂತವರನ್ನು ಆ ಲಲನಾಮಣಿಗಳು ಕೇರೇ ಮಾಡ್ಲಿಲ್ಲ. ಮುಂಭಾಗದಲ್ಲಿ ನಿಂತವರೂ 'ಕ್ಯಾರೆ' ಎನ್ನಲಿಲ್ಲ. ಬದಲಿಗೆ, ಗಪ್‌ಚಿಪ್ಪಾಗಿ ನಿಂತಿದ್ದರು-ಬೆಪ್ಪು ತಕ್ಕಡಿಗಳಾಗಿ.

ಕೌಂಟರಿನಲ್ಲಿ ಫೀಸ್ ಸ್ವೀಕರಿಸುತ್ತಿದ್ದವರ ವದನದಲ್ಲಂತೂ ಧನ್ಯತಾಭಾವ ತೇಲುತ್ತಿತ್ತು. ಎಲ್ಲರೂ ಕ್ಯೂನಲ್ಲೇ ಬರ್ಬೇಕಂತ ಅವರದೇನೂ ತಾಕೀತಿಲ್ಲ. ತಮ್ಮನ್ನು ಕಿರುಬೆರಳಿನಲ್ಲಿ ಕುಣಿಸುವಷ್ಟು ತಾಕತ್ತಿದ್ದರೆ ಸಾಕು, ಅಂಥವರ ಕೆಲಸವನ್ನು ತುರ್ತಾಗಿ ಕೈಗೆತ್ಕೋತಾರಷ್ಟೆ.

ಅದು ಸರಸ್ವತಿ ದೇಗುಲ. ಅಲ್ಲಿ ಸಜ್ಜನಿಕೆ ತೋರಿಸ್ತಾ ಕೂತವರು ತಿಳಿಗೇಡಿಗಳಾಗ್ತಾರೆ. ಯಾವ ಎಗ್ಗಿಲ್ಲದೇ ವರ್ತಿಸುವವರು ತಮ್ಮ ಗೈರತ್ತನ್ನು ಮೆರೆಸ್ತಾರೆ.

–ಸರಡವಳ್ಳಿ ಜಿ. ರಮೇಶ್

ಅಂದು ನನ್ನ ಹೆಂಡತಿಯ ಅಣ್ಣನ ಮನೆಯವರು ಊರಿಗೆ ಹೊರಡುವವರಿದ್ದರು. ಬರುವುದು ನಾಲ್ಕಾರು ದಿನಗಳಾಗುವುದರಿಂದ ರಾತ್ರಿ ಅವರ ಮನೆಯಲ್ಲೇ ಮಲಗಲು ಕೇಳಿಕೊಂಡರು. ಸರಿ ಎಂದು ಅವರು ಊರಿಗೆ ಹೊರಡುವ ಬೆಳಿಗ್ಗೆ ಅವರ ಮನೆ ಸೇರಿದೆವು. ಬಿಸಿಲು ದಿನಗಳಾದ್ದರಿಂದ ಸೆಕೆ ತಡೆಯಲಾಗದೆ ನನ್ನ ಶರ್ಟು ಬಿಚ್ಚಿ ರೂಮಿನಲ್ಲಿದ್ದ ಹ್ಯಾಂಗರಿಗೆ ತಗಲು ಹಾಕಿದ್ದೆ. ಅವರೆಲ್ಲಾ ಊರಿಗೆ ತೆರಳಿದ ಮೇಲೆ ಸಂಜೆ ತರಕಾರಿ ತರಲು ಶರ್ಟ್ ಹಾಕಿಕೊಂಡೆ. ಜೇಬಿನಲ್ಲಿದ್ದ ಪರ್ಸ್ ತೆಗೆದಾಗ ಆಶ್ಚರ್ಯ ಕಾದಿತ್ತು. ಪರ್ಸ್‌ನಲ್ಲಿದ್ದ ನೂರೂ ಚಿಲ್ಲರೆ ಹಣ ಮಾಯವಾಗಿತ್ತು. ಯಾರನ್ನು ಕೇಳುವುದು? ನನ್ನವಳ ಅಣ್ಣನ ಮನೆಯವರನ್ನು ಅನುಮಾನಿಸಲು ಮನಸ್ಸು ಬರಲಿಲ್ಲ. ಕೆಲಸದವಳು ಗುಡಿಸಿ, ಒರೆಸಿ ಹೊರಟು ಹೋಗಿದ್ದಳು. ಅವಳೂ ಅಂಥವಳಲ್ಲ-

ವೆಂಬುದು ನಮಗೆ ಗೊತ್ತಿತ್ತು. ಹೀಗಿರುವಾಗ ಯಾರನ್ನೂ ಕೇಳಲಾಗದೆ ನಮ್ಮ ದುರದೃಷ್ಟವನ್ನು ಹಳಿಯುತ್ತಾ ಸುಮ್ಮನಾದೆವು.

ಕೆಲಸದವಳು ಅವರೆಲ್ಲಾ ಊರಿಗೆ ಹೊರಟಿಂದಿನಿಂದ ಎರಡು ದಿನ ರಜೆ ಪಡೆದಿದ್ದವಳು ಮೂರು ನಾಲ್ಕು ದಿನಗಳಾದರೂ ಬರಲಿಲ್ಲ. ಮನಸ್ಸು ಅವಳ ಬಗ್ಗೆ ಮತ್ತೆ ಅನುಮಾನಿಸಲು ಪ್ರಾರಂಭಿಸಿತು. ಕಳೆದುಕೊಂಡ ಹಣದ ಬೆಲೆ ಮತ್ತೆ ಮತ್ತೆ ಮನೆಯವರ ಗುಣಗಳನ್ನು ಅನುಮಾನಿಸಲು ನೆರವಾಯ್ತು.

ಹೀಗಿರುವಾಗ ಅವರ ಮನೆಯಲ್ಲಿ ನಾವಿದ್ದ ನಾಲ್ಕನೆ ದಿನ ನಮ್ಮ ಅತ್ತೆಯವರು ನನ್ನವ ಕೊಡನೆ ಒಂದು ಬಿಳಿ ಶರ್ಟಿನ ಬಗ್ಗೆ ಹೇಳಿ ಅದರಲ್ಲಿ ಅವರ ಮಗ ಮರೆತು ಹಣವಿದ್ದ ಪರ್ಸನ್ನು ಇಲ್ಲೇ ಬಿಟ್ಟು ಹೋಗಿದ್ದುದಾಗಿಯೂ ಅವರು ಊರಿಂದ ಹಿಂತಿರುಗಿದ ಮೇಲೆ ಹಿಂತಿರುಗಿಸಲು ಹಣವನ್ನು ತೆಗೆದಿಟ್ಟಿರುವರೆಂದೂ ಹೇಳಿದರಂತೆ. ಅದರ ನಂತರ ಅವರು ಆ ಶರ್ಟನ್ನೇ ಕಾಣದೆ ಗಾಬರಿಯಾಗಿದ್ದರಿಂದ ಈ ವಿಷಯವನ್ನು ನನ್ನವಳ ಬಳಿ ಪ್ರಸ್ತಾಪಿಸಿದ್ದರು.

ಆಗ ನನ್ನವಳು ಆ ಶರ್ಟು ನನ್ನದೆಂದೂ ಅದನ್ನು ಈಗ ಒಗೆಯಲು ಹಾಕಿರುವುದಾಗಿಯೂ ಹೇಳಿದಾಗ ನಮ್ಮ ಅತ್ತೆಯವರ ಮುಖ ನೋಡಬೇಕಿತ್ತು. ತಿಳಿಯದೆ ತಮ್ಮ ಮಗನದೆಂದು ಭಾವಿಸಿ ನನ್ನ ಪರ್ಸಿನಿಂದ ಹಣ ತೆಗೆದುಕೊಂಡಿದ್ದಕ್ಕಾಗಿ ಬಹಳ ವಿಷಾದಿಸಿದರು. ಹಣ ಕಾಣದಾದಾಗ ತಕ್ಷಣ ಏಕೆ ತಿಳಿಸಲಿಲ್ಲವೆಂದು ಸಹ ಆಕ್ಷೇಪಿಸಿದರು.

–ಸಿ. ಎಸ್. ಕೃಷ್ಣಮೂರ್ತಿ

ಪಟ್ಟಣದಲ್ಲೇ ಬೆಳೆದ ನನಗೆ ಹಳ್ಳಿಯವರೆಂದರೆ ತಾತ್ಸಾರ. ಅವರು ಗುಗ್ಗುಗಳು, ಗಮಾರರು ಎಂದೆಲ್ಲಾ ತಿಳಿದಿದ್ದೆ. ಒಂದು ಸಲ ಜಯನಗರದಲ್ಲಿ ವಾಕಿಂಗ್ ಹೋಗುತ್ತಿದ್ದಾಗ ಯಾರೋ ಬಾಳೆಹಣ್ಣಿನ ಸಿಪ್ಪೆಯನ್ನು ನಡುಬೀದಿಯಲ್ಲಿ ಬಿಸಾಡಿ ಹೋಗಿದ್ದರು. ಎಲ್ಲರೂ ಅದನ್ನು ನೋಡಿಕೊಂಡು, ಬೈಯ್ದುಕೊಂಡು ಅದರ ಪಕ್ಕದಿಂದ ಹೋಗುತ್ತಿದ್ದರೇ ವಿನಾ ಯಾರೂ ಪಕ್ಕಕ್ಕೆ ಎತ್ತಿ ಬಿಸಾಕಲಿಲ್ಲ, ನನ್ನನ್ನೂ ಸೇರಿಸಿ.

ಎದುರಿಗೆ ಬರುತ್ತಿದ್ದ ಒಬ್ಬ ಹಳ್ಳಿಯವ, "ಯಾರೋ ನಡುಮಧ್ಯದಲ್ಲಿ ಬಾಳೇ ಹಣ್ಣಿನ ಸಿಪ್ಪೆ ಬಿಸಾಕಿ ಹೋಗಿದ್ದಾರೆ. ಕತ್ತಲಲ್ಲಿ ನೋಡದೇ ಯಾರಾದರೂ ಜಾರಿ ಬಿದ್ದರೆ," ಎನ್ನುತ್ತಾ ಆ ಸಿಪ್ಪೆಯನ್ನು ತೆಗೆದು ಚರಂಡಿಯಲ್ಲಿ ಬಿಸಾಕಿದ.

–ಫಣಿ ನಾಗರಾಜ್

ಅಂದು ನಾವೆಲ್ಲಾ ಹತ್ತಿರದ ಹಳ್ಳಿಯೊಂದರಲ್ಲಿನ ಆಂಜನೇಯನ ಗುಡಿಗೆ ಹೋಗಿದ್ದೆವು. ಅಲ್ಲಿ ಸ್ವಲ್ಪ ದಿನಗಳ ಹಿಂದೆಯೇ ರಥೋತ್ಸವ ನಡೆದಿತ್ತು! ಪೂಜೆ ಮಾಡಿಸಿದ ನಂತರ ಗುಡಿಯ ಸುತ್ತ ತಿರುಗಾಡುತ್ತಿದ್ದಾಗ ಗುಡಿಯ ಗೋಡೆಯ ಮೇಲೆ, "ದಿಂಡುಳ್ಳ ಮಾಡಿದರೆ ನೀರು ಸಿಗಲಾರದು," ಎಂಬ ಬರಹ ಕಣ್ಣಿಗೆ ಬಿದ್ದಿತು. 'ದಿಂಡುಳ್ಳ' ಎಂದರೇನೆಂದು ಯಾರಿಗೂ ಅರ್ಥವಾಗಲಿಲ್ಲ. ದಿಂಡುಳ್ಳ ಎಂದರೆ ಎಂಜಲು, ಮುಸುರೆ ಇರಬಹುದೆಂದು ಒಬ್ಬರು ಹೇಳಿದರೆ ನಮ್ಮಲ್ಲಿ ಮತ್ತೊಬ್ಬರು ಮಲಮೂತ್ರ ಇರಬೇಕೆಂದು ಅರ್ಥೈಸಿದರು. ಅರ್ಧ ಗಂಟೆಯಾದರೂ ಅದರ ಅರ್ಥ ತಿಳಿಯದಿದ್ದಾಗ ಸಮೀಪದಲ್ಲಿಯೇ ಕುರಿ ಕಾಯುತ್ತಿದ್ದ ೮-೧೦ ವರ್ಷಗಳ ಬಾಲಕ ಕಣ್ಣಿಗೆ ಬಿದ್ದ. ಕಡೆಗೂ ಅವನನ್ನೇ ದಿಂಡುಳ್ಳದ ಅರ್ಥ ಕೇಳಿಯೇಬಿಟ್ಟೆವು!

"ದಿಂಡುಳ್ಳ ಎಂದರೆ ಉರುಳು ಸೇವೆ ಕಣ್ರೀ", ಎಂದು ಆ ಬಾಲಕ ಹೇಳಿದಾಗ ಇನ್ನೊಬ್ಬರು, "ಅದಕ್ಕೆ ನೀರ್‍ಯಾಕೆ ಬೇಕೋ?" ಎಂದರು. "ಉರುಳಿದಾಗ, ಮುಳ್ಳು (ಮರಳು) ಮೆತ್ತಿಕೊಂಡಿರತ್ತೆ ತೆಲ್ಲ ಅದಕ್ಕೇ" ಎಂದಾಗ ಪದವಿ, ಸ್ನಾತಕೋತ್ತರ ಪದವಿ ಪಡೆದ ನಮ್ಮ ಅಜ್ಞಾನದ ಬಗ್ಗೆ ನಮಗೇ ನಗು ಬಂದಿತು.

–ಶೆರಂಗಿಣಿ

# 'ಭಗ' ಎಂದರೆ 'ಅರ್ಕ'ನೆ?

**ಡಾ. ಗುಂಡ್ಮಿ ಚಂದ್ರಶೇಖರ ಐತಾಳ**

ಕಸ್ತೂರಿ' ಸೆಪ್ಟೆಂಬರ್ ಸಂಚಿಕೆಯಲ್ಲಿ ಶ್ರೀ ಗೌರೀಶ ಕಾಯ್ಕಿಣಿಯವರು 'ಭಗ ಅರ್ಕ' ಎಂಬ ಲೇಖನವನ್ನು ಬರೆದಿದ್ದಾರೆ. ಅದರಲ್ಲಿ ಭಗ ಎಂದರೆ ಅರ್ಕ, ಸೂರ್ಯ, ಅಗ್ನಿ ಎಂಬ ಅರ್ಥವನ್ನು ಕೊಟ್ಟಿದ್ದಾರೆ. ಇದೇನೂ ಹೊಸತಲ್ಲ. 'ಭಗ' ಎಂಬ ಮಾತಿಗೆ ಸುಮಾರು ಹದಿನೆಂಟು ಅರ್ಥಗಳನ್ನು ನಿಘಂಟುಗಳಲ್ಲಿ ಕೊಡಲಾಗಿದೆ. ಅವುಗಳಲ್ಲಿ ಎಲ್ಲಿಯೂ 'ಅಗ್ನಿ' ಎಂಬ ಅರ್ಥವನ್ನು ಕೊಟ್ಟಿಲ್ಲ.

'ಭಗ ಭಗನೆ ಉರಿ' ಎಂಬುದು ಅನುಕರಣ ಶಬ್ದವೇ ಹೊರತು ಬೆಂಕಿ ಎಂಬ ಅರ್ಥದಿಂದ, 'ಭಗ' ಎಂಬ ಸಂಸ್ಕೃತದಿಂದ ಬಂದುದಲ್ಲ. ಅಗ್ನಿ ಬೇರೆ; ಸೂರ್ಯ ಬೇರೆ. ಸೂರ್ಯ ಶಕ್ತಿಯಲ್ಲಿರುವ ದೇವತೆಗೆ ಅಗ್ನಿ ಎಂದು ಹೆಸರು– 'ಅಗ್ನಿ–ದೇವತಾ'. ವಿಜ್ಞಾನಿಗಳು ಸೂರ್ಯನಲ್ಲಿ ಹೈಡ್ರೋಜನ್ ಎಂಬ ಮೂಲಧಾತುವಿದೆ. ಅದು ಹೀಲಿಯಂ ಆಗಿ ಪರಿವರ್ತಿಸುತ್ತಿರುತ್ತದೆ ಎಂದು ಹೇಳುತ್ತಾರೆ. ವಿಜ್ಞಾನಿಗಳು ಹೈಡ್ರೋಜನ್ ಬಾಂಬ್ ಈ ತತ್ತ್ವದ್ದು. ದೇವಿಯ ಬೀಜಾಕ್ಷರ ಮಂತ್ರಗಳಲ್ಲೊಂದು 'ಹ್ರೀಂ. "ಹ್ರೀಂ'– ಎಂದರೆ ಅಪಹರಿಸುವವಳು, ಹೋಗಲಾಡಿಸುವವಳು ಎಂಬ ಅರ್ಥವಿದೆ. ಸಂಸ್ಕೃತದಲ್ಲಿ ರ–ಲ ಕಾರಗಳಲ್ಲಿ ವ್ಯತ್ಯಾಸವಿಲ್ಲದುದರಿಂದ 'ಹ್ರೀಂ' ಎಂಬುದು 'ಹ್ಲೀಂ" ಎಂದೂ ಆಗಬಲ್ಲದು. ಇದೇ 'ಹೀಲಿಯಂ'. ಹೈಡ್ರೋಜನ್ ಎಂಬುದು ಬೆಂಕಿಯಲ್ಲ; ಬೆಂಕಿಯನ್ನು ಮೀರಿದುದು. ಸುಡುವಂಥ ಗುಣ ಇರುವುದೆಲ್ಲ ಬೆಂಕಿಯಲ್ಲ. ಹೋಮಕ್ಕೆ 'ಅಗ್ನಿ'ಯನ್ನು ತೆಗೆದುಕೊಂಡು ಬಾ ಎನ್ನುವರೇ ಹೊರತು 'ಬೆಂಕಿ' ತಾ ಅನ್ನುವುದಿಲ್ಲ. ಈ ಸೂಕ್ಷ್ಮವನ್ನು ಗಮನಿಸಬೇಕು.

ದೇವಿಯನ್ನು ವರ್ಣಿಸುವಾಗ 'ತ್ರ್ಯಂಬಿಕಾ' ಎಂದರೆ ಮೂರು ಕಣ್ಣುಗಳುಳ್ಳವಳು ಎಂದು ವರ್ಣಿಸಲಾಗಿದೆ. ಆ ಮೂರು ಕಣ್ಣುಗಳು ಸೂರ್ಯ, ಚಂದ್ರ, ಅಗ್ನಿ. ಅಲ್ಲಿಗೆ ಸೂರ್ಯ ಬೇರೆ; ಅಗ್ನಿ ಬೇರೆ ಎಂದಾಯಿತಲ್ಲ. ಭಗವಾನ್, ಭಗವತೀ, ಸುಭಗಾ ಸೌಭಾಗ್ಯ–ಇಲ್ಲೆಲ್ಲ ಬರಿಯ 'ಭಗ' ಎಂಬುದರ ಒಂದೇ ಅರ್ಥವಲ್ಲ. ಅನೇಕಾರ್ಥಗಳಿಂದ ಕೂಡಿದ ವಿಶಾಲಾರ್ಥದ ಮಾತುಗಳು ಅವು. ವಿಶ್ವದಲ್ಲಿ ಅಂತರ್ಗತವಾದ ಸಮಸ್ತ ಸೌಭಾಗ್ಯವೂ ದೇವಿಯ ರೂಪವಾಗಿರುವುದು. ಆದ್ದರಿಂದ ಅವಳು ಭಗವತೀ, ಸುಭಗಾ.

ರಾಮಾಯಣದಲ್ಲಿ ಸೀತೆಯನ್ನು 'ಅಗ್ನಿಪರೀಕ್ಷೆ'ಗೆ ಗುರಿಪಡಿಸಿರುವುದು ಪ್ರಸಿದ್ಧವಷ್ಟೇ. ಅವಳು ಭಗವತೀ ಸ್ವರೂಪಿಣಿಯಾದುದರಿಂದ ಅಗ್ನಿಯನ್ನು ಗೆದ್ದಳು. ಅಗ್ನಿಯನ್ನು ಅಗ್ನಿ ಸುಡುವುದೇ? ಮಹಾಭಾರತದಲ್ಲಿ ದ್ರೌಪದಿ ಅಗ್ನಿ ಕನ್ಯೆ. ಅವಳ ಸಿರಿಮುಡಿಗೆ ಕೈಹಾಕಿದುದರಿಂದ ಕೌರವ ಕುಲ ಧ್ವಂಸವಾಯಿತು. ಸೀ ದ್ರೌಪದಿಯರು ಬರಿಯ ಮನುಷ್ಯ ಮಾತದವರಲ್ಲ; ದೇವಿಯ ಅಂಶ ಸಂಭೂತರು. ಭಗವತಿಯ ಸ್ವರೂಪರು.

ಸೂರ್ಯನಲ್ಲಿರುವ ಸತ್ಯ ಧರ್ಮ ಯಾವುದೋ ಗೊತ್ತಿಲ್ಲ! ಅದು ಸತ್ಯ ಧರ್ಮದ ಸುವರ್ಣಮಯವಾದ ಮುಚ್ಚಳ. ಅದನ್ನು ತೆರೆದಾಗ ಸತ್ಯ ಧರ್ಮ ಗೋಚರಿಸುತ್ತದೆ. ವಿಶ್ವಶಕ್ತಿಯ ಅಧಿದೇವತೆ ಭಗವತಿ ಅವರಾಚೆ ಎಲ್ಲೋ ಇದ್ದಾಳೆ. ಅವಳೇ ವಿಶ್ವಜನನಿ; ಅನಂತವನ್ನು ಹೆತ್ತವಳು, ಆಕಾಶವನ್ನು ಪ್ರಸವಿಸಿದವಳು. ಬ್ರಹ್ಮ, ವಿಷ್ಣು, ಮಹೇಶ್ವರರನ್ನೂ, ಸರಸ್ವತೀ, ಲಕ್ಷ್ಮೀ, ಗೌರಿಯರನ್ನೂ ಪಡೆದವಳು. ಎಲ್ಲರಿಗೂ, ಎಲ್ಲದಕ್ಕೂ ತಾಯಿ ಅವಳು.

ಆದುದರಿಂದ 'ಭಗ' ಎಂದರೆ ಬರಿಯ ಅಗ್ನಿಯಲ್ಲ, ಬರಿಯ ಅರ್ಕನಲ್ಲ, ಅಗ್ನಿ ಅರ್ಕರಿಗೆ ಮೂಲಶಕ್ತಿಯಾದ ಆದಿಶಕ್ತಿ.

**(ಇಲ್ಲಿಗೆ ಈ ಚರ್ಚೆಯನ್ನು ಮುಗಿಸಲಾಗಿದೆ.)**
**-ಸಂ.**

# ತೊರೆದು ಜೀವಿಸಬಹುದೆ?

**ಪ್ರೊ. ವಿ. ಸೀತಾರಾಮಯ್ಯ ಕನ್ನಡ ಸಾರಸ್ವತ ಭಾಂಡಾರಕ್ಕೆ ನೀಡಿದ ಕೊಡುಗೆ ಅಮೂಲ್ಯವಾದದ್ದು. ಬರೆಹ ಬದುಕುಗಳೆರಡರಲ್ಲೂ ಸಮಸಮರಾಗಿದ್ದ ಈ ಧೀಮಂತನ ಬಾಳು ಹೇಗೆ ಸಾಗಿತು? ಅವರನ್ನು ತೀರ ಹತ್ತಿರದಿಂದ ನೋಡಿದ ಒಡನಾಡಿಗಳು ಮಾತ್ರ ಅವರ ಬಗ್ಗೆ ಹೇಳಬಲ್ಲರು. ಅವರ ಪ್ರಾಚಾರ್ಯತ್ವದಲ್ಲಿ ಪ್ರಾಧ್ಯಾಪಕರಾಗಿ, ವಿ. ಸೀ.ಗೆ ತೀರ ಆತ್ಮೀಯರಾಗಿ, ವಿ. ಸೀ. ಬಗ್ಗೆ ನಿಚ್ಚಳ ಚಿತ್ರವನ್ನು ನೀಡಬಲ್ಲವರಾಗಿರುವ ಖಜಾನೆ ಕೃಷ್ಣಮೂರ್ತಿಯವರು 'ಕಸ್ತೂರಿ'ಗಾಗಿ ಈ ನೆನಪುಗಳನ್ನಿಲ್ಲಿ ಬರೆದಿದ್ದಾರೆ. ವಿ. ಸೀ. ವ್ಯಕ್ತಿತ್ವದ ಹಲವು ಮುಖಗಳಿಲ್ಲಿವೆ. ಈ ಎಲ್ಲದರಲ್ಲೂ ನಮಗೆ ಕಾಣುವ ಒಂದಂಶವೆಂದರೆ ಅವರ ವಾತ್ಸಲ್ಯಮಯತೆ, ಶಾಂತಸ್ವಭಾವ. ನಿರೂಪಣೆಯಲ್ಲಿ ವ್ಯಕ್ತಿಚಿತ್ರಣದಲ್ಲಿದು ಒಂದು ವಿಭಿನ್ನ ರೀತಿಯ ಶೈಲಿಯಾಗಿ ನಿಲ್ಲುತ್ತದೆ.**

ಎಷ್ಟು ನೋಡಿದರೂ ತಣಿಯದ ಕಡಲ ತಡಿಯ ಸೌಂದರ್ಯ, ಪ್ರಶಾಂತ ವಾತಾವರಣ ಹಾಗೂ ಬಿ. ಆರ್. ಎಸ್. ಹೆಗ್ಡೆಯವರ ಸರಳತೆ, ಸಜ್ಜನಿಕೆಗಳೇ ವಿ. ಸೀ.ಯವರನ್ನು ಹೊನ್ನಾವರಕ್ಕೆ ಆಕರ್ಷಿಸಿದ್ದು.

ಅದೇ ಹೊನ್ನಾವರದ ಆಕರ್ಷಣೆ ನನಗೆ ಬೇರೆಯೇ ತೆರನದ್ದು. ಆ ಊರು, ಅದರ ಸುತ್ತಮುತ್ತಣ ನೆಲ, ನನ್ನ ಮೆಚ್ಚಿನ ಕಾದಂಬರಿಕಾರರಾದ ಶಿವರಾಮ ಕಾರಂತರ ಆಡುಂಬೊಲ ಸ್ವಾದಿ, ಬೇಕನಹಳ್ಳಿ, ಕುಮಟೆ, ಕರ್ಕಿ, ಹಳದಿಪುರ, ಧಾರೇಶ್ವರ, ಮುರುಡೇಶ್ವರ, ಇಡುಗುಂಜಿ, ಶಿರಾಲಿ, ವೆಂಕಟಾಪುರದ ಹೊಳೆ ಈ ಎಲ್ಲವೂ ಆ ಕಡಲ ತಡಿಯ ಭಾರ್ಗವರು ನಡೆದಾಡಿದ ನೆಲ. ಅವರ ಕಾದಂಬರಿಗಳ ನಾಯಕ ನಾಯಕಿಯರೆಲ್ಲ, ದಕ್ಷಿಣ ಕನ್ನಡದಿಂದ ಉತ್ತರ ಕನ್ನಡಕ್ಕೆ ನುಸುಳಿ ಮುಂಬೈ ಕಂಡದ್ದೇ ಹೊನ್ನಾವರದ ಮೂಲಕ! ಅವೆಲ್ಲಾ ನನ್ನ ಭಾವುಕ ಜೀವನದ ಪುಣ್ಯ ಕ್ಷೇತ್ರಗಳು.

ಶ್ರೀ ವಿ. ಸೀ. ಹಾಗೂ ಈ 'ಪುಣ್ಯಕ್ಷೇತ್ರ'ಗಳೇ ನನ್ನನ್ನು ಬೆಂಗಳೂರು ಸೇಂಟ್ ಜೋಸೆಫ್ ಯೂರೋಪಿಯನ್ ಶಾಲೆ ಬಿಡಿಸಿ ಹೊನ್ನಾವರಕ್ಕೆ ಸೆಳೆದದ್ದು.

ಶ್ರೀ ವಿ. ಸೀ. ಅಲ್ಲಿದ್ದರೆಂದೇ ಅಲ್ಲಿನ ಕುಸುಮಕ್ಕೂ ಪರಿಮಳ! ಅವರ ಆಕರ್ಷಣೆಗೆ ಲೆಕ್ಕವಿಲ್ಲದಷ್ಟು ಸಾಹಿತ್ಯ ಭ್ರಮರಗಳು ಎಲ್ಲೆಲ್ಲಿಂದಲೋ ಅಲ್ಲಿಯ ವರೆಗೆ ಹಾರಿ ಬಂದು ಅಲ್ಲಿಯ ನರ ನಾರಿಯರಿಗೆ ಸಾಹಿತ್ಯ ಸಮಾರಾಧನೆ ಮಾಡಿ ಹೋದದ್ದು!

ವಿ. ಸೀ. ಅಲ್ಲಿದ್ದರೆಂದೇ ಅನೇಕ ಅತಿರಥರೂ ಸಾಹಿತ್ಯ ದಿಗ್ಗಜಗಳೂ ಅಲ್ಲಿಗೆ ಬಂದದ್ದು ಎಂದೆ. ಅವರ ಪ್ರಭಾವ ವ್ಯಕ್ತಿತ್ವಗಳಿಗೆ ಉದಾಹರಣೆಗಳು ಒಂದೇ, ಎರಡೇ!

ಅಂದಿನ ದಿನಗಳಲ್ಲಿ ಕೇಂದ್ರ ಸರಕಾರದ ಷಿಪ್ಪಿಂಗ್ ವಿಭಾಗಕ್ಕೆ ಮಂತ್ರಿವರ್ಯರಾಗಿದ್ದ ವಿ. ಕೆ. ಆರ್. ವಿ. ರಾವ್ ಒಮ್ಮೆ ಕಾರವಾರಕ್ಕೆ ಬಂದಿದ್ದರು. ಅವರು. ವಿ. ಸೀ. ಯವರ ವಿದ್ಯಾರ್ಥಿಯಾಗಿದ್ದರೆಂದೋ ಏನೋ ಕೇಳಿದ ನೆನಪು.

ಹೊನ್ನಾವರಕ್ಕೆ ಬರಲು ವಿ. ಸೀ.ಯವರು ಅವರನ್ನು ಟೆಲಿಫೋನಿನಲ್ಲಿ ಮಾತನಾಡಿಸಿ

ಆಹ್ವಾನಿಸಿದರು. ಅವರು ಬರಲು ಒಪ್ಪಿದ ದಿನ ರಜಾದಿನವಾಗಿರಬೇಕೆ! ವಿದ್ಯಾರ್ಥಿಗಳು ಬರುತ್ತಾರೆಯೋ? ಸಿನಿಮಾ ನಟರೋ ನಟಿಯರೊ ಬಂದರೆ ಮಾತ್ರ ಜಮಾಯಿಸುವ ಜಾತಿ ಅವು!

ವಿ.ಸೀ. ಯವರು ತುಂಬಾ ಆತಂಕಗೊಂಡರು. ಸ್ವಲ್ಪ ಹೊತ್ತು ಬಿಟ್ಟು ಅವರಿಗೇನು ಹೊಳೆಯಿತೋ, ನನಗೆ ಹೇಳಿ ಕಳುಹಿಸಿದರು. ಹೋದೆ. ನನ್ನ ಕಂಡೊಡನೆ, "ಹೀಗಾದರೆ ಏನು ಮಾಡೋಣಪ್ಪ! ಒಂದ್ ಕೆಲಸ ಮಾಡೋ. ನಿನ ಕ್ಲಾಸು ಅಂದರೆ ಹುಡುಗರು ಚೆನ್ನಾಗಿ ಸೇರ್ತಾರೆ. ನಾಳೆ ಖಜಾನೆ ಕಾಪರ್‌ಫೀಲ್ಡ್ ಸ್ಪೆಷಲ್ ಕ್ಲಾಸ್ ತೆಕ್ಕೋತಾರೆ ಅಂತ ಒಂದು ಮೇಮೋ ಹಾಕಿಸ್ಲಾ?" ಎಂದರು.

ಅದನ್ನು ಕೇಳಿ ಸಂತೋಷ ತಾಳಲಾರದೆ ಬಿರಿದು ಹೋಗುವುದರಲ್ಲಿದ್ದೆ ನಾನು. ಅಬ್ಬಾ, ನನಗದೆಂಥ ಸರ್ಟಿಫಿಕೆಟ್ಟು, ನನ್ನ ಗುರುಗಳಿಂದ!

ಮೆಮೊ ಹಾಕಿದರು. ಇನ್ನೂ ಒಂದು ಸೂಚನೆಯನ್ನೂ ಕೊಟ್ಟರು.

ಮರುದಿನ ಎರಡು ತರಗತಿ ಹಿಡಿಯುವಷ್ಟು ಹುಡುಗರು ಮೇನ್ ಹಾಲ್ ತುಂಬಾ ಭರ್ತಿ! 'ಡಿಕನ್ಸ್' ಕ್ಲಾಸು!

ಹತ್ತೂವರೆ ಹತ್ತೂ ಮುಕ್ಕಾಲು ವೇಳೆಗೆ ಅತಿಥಿಗಳು ಬಂದರು.

ವಿ.ಸೀ. ಯವರು ಕಿಟಕಿಯಲ್ಲಿ ಕಾಣಿಸಿಕೊಂಡ ಕೂಡಲೇ ನಾನು ಪಾಠ ನಿಲ್ಲಿಸಬೇಕಿತ್ತು.

ತಕ್ಷಣ ನಾನು ಡೇವಿಡ್, ಪೆಗ್ಗೊಡಿ, ಬಾರ್ಕಿಸ್‌ರನ್ನು ಕುದುರೆ ಗಾಡಿಯಲ್ಲೇ ಬಿಟ್ಟು ಪುಸ್ತಕ ಟಪ್ಪನೆ ಮುಚ್ಚಿ ವಿ.ಸೀಯವರ ಶೈಲಿಯಲ್ಲೇ ಹುಡುಗರಿಗೆಲ್ಲ ಅತಿಥಿಗಳು ಬಂದ ಸುದ್ದಿ ಹೇಳಿ, "ದಯವಿಟ್ಟು ನೀವೆಲ್ಲ ಹಾಲಿನಲ್ಲಿ ಸೇರಿ ಬಂದವರನ್ನು ನಿಮ್ಮ ಉಪಸ್ಥಿತಿಯಿಂದ ಗೌರ ಸುತ್ತೀರಾ?" ಎಂದೆ. ಎಲ್ಲೋ ಒಬ್ಬಿಬ್ಬರು ರಸಭಂಗವಾದದ್ದಕ್ಕೆ ಗೊಣಗಿದರು. ಕೊನೆಗೆ ಎಲ್ಲರೂ ಹಾಲಲ್ಲಿ ಸೇರಿದರು. ಕಾರ್ಯಕ್ರಮ ಮುಗಿಯುವವರೆಗೆ ಎಲ್ಲರೂ ಅಲ್ಲಿಯೇ ಇದ್ದರು. ನನ್ನ ಮರ್ಯಾದೆ ಉಳಿಯಿತು.

ಆ ದಿನ ವಿ. ಸೀ. ಅತಿಥಿಗಳ ಪರಿಚಯ ಮಾಡುತ್ತ ಕೊಟ್ಟ ಭಾಷಣ ಒಂದು ಅನನ್ಯ ಅನುಭವ. ಆಸಕ್ತರಿಗೊಂದು ರಸಗವಳ.

ಮರುದಿನ ಅವರನ್ನು ಅಭಿನಂದಿಸಲು ಹೋದಾಗ, "ನಿನ್ನೆ ನೀನು ನನ್ನ ಮರ್ಯಾದೆ ಉಳಿಸಿದೆಯಪ್ಪಾ," ಎನ್ನುತ್ತ, "ಅಂದ್‌ಹಾಗೆ ನೀನು ಕ್ಲಾಸಲ್ಲಿ ನನ್ನ ಹಾಗೇ ಮಾತಾಡ್ತೀಯಂತೆ ಹೌದೇ?" ಎಂದು ಸೂಕ್ಷ್ಮವಾಗಿ ನೋಡಿದರು. ನಾನು ಬೆದರಿ ಬೆವತುಹೋದೆ.

ವಿದ್ಯಾರ್ಥಿಗಳ ಫ್ರೀಷಿಪ್ ಫಾರಂಗಳನ್ನು ಸಕಾಲದಲ್ಲಿ ಕಳುಹಿಸಬೇಕಾದದ್ದು ಒಮ್ಮೆ ಏಕೋ ಅವಧಿ ಮೀರಿತು. ಆ ಕೆಲಸ ಆಫೀಸಿನವರು ಮಾಡಬೇಕಾದ್ದು ಮಾಡಿರಲಿಲ್ಲ. ಕಂಟಕ–[illegible] ನಕರಾರೋ ಇದನ್ನು ವಿದ್ಯಾರ್ಥಿಗಳಿಗೆ ಚುಚ್ಚಿ ಗದ್ದಲವೆಬ್ಬಿಸಿದರು.

ಆಗಲೂ ವಿ. ಸೀ. ಮಾತ್ರ ತಮ್ಮ ಹೆಸರಿಗೆ ತಕ್ಕಂತೆ "ಶೀತಾರಾಮಯ್ಯ" (ಶೀತ + ಆರಾಮ + ಅಯ್ಯ)ನಾಗಿಯೇ ಇದ್ದರು; ಜವಾಬ್ದಾರಿಯನ್ನೆಲ್ಲ ತಮ್ಮ ಮೇಲೆ ತೆಗೆದುಕೊಂಡು.

ದಂಗೆ ಏಳಲು ಬಂದಿದ್ದವರೆಲ್ಲಾ ಚದುರಿದರು.

ಅವರೆಲ್ಲ ಹೋದ ಮೇಲೆ ವಿ.ಸೀ. [illegible] ನನ್ನನ್ನು ಎಳೆದುಕೊಂಡು ಗುಡ್ಡ ಇಳಿದು ಜಿ.ಸಿ. ಪೈ ಅವರ ಪೆಟ್ರೋಲ್ ಬಂಕಿಗೆ ಬಂದರು. ಅಲ್ಲಿಂದಲೇ ನೇರವಾಗಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಬಂದು ಟ್ರಂಕ್‌ಕಾಲ್ ತೆಗೆದುಕೊಂಡರು. ಕೆಲವೇ ಕ್ಷಣಗಳಲ್ಲಿ ಆ ಬದಿಯಿಂದ ಅಂದಿನ ರಿಜಿಸ್ಟ್ರಾರ್ ಸದಾಶಿವ ಒಡೆಯರರು ಮಾತನಾಡಿದರು.

ಸಂಭಾಷಣೆ ಮುಚ್ಚಿದ ಕ್ಯಾಬಿನ್ನಿನಲ್ಲಿ ನಡೆದದ್ದು. (ಆಮೇಲೆ ಅದನ್ನು ವಿ.ಸೀ.ಯವರೇ ನನಗೆ ತಿಳಿಸಿದರು.) ಐದು ನಿಮಿಷಗಳಲ್ಲಿ ವಿ.ಸೀ. ಹೊರಗೆ ಬಂದರು. "ಯಾಕಪ್ಪ ಈ ಮುದುಕನ್ನ ಹೀಗೆ ಗೋಳು ಹುಯ್ಕೋತೀರಿ? ಇಂಥ ಕೆಲಸ ಆಗಿದೆ... ಮರೆತೆ...ಕಾಲ ಮೀರಿದೆ. ಸ್ವಲ್ಪ ಸುಧಾರಿಸ್ತೀಯಾ? ಷೂರ್ ಆಗಿ ನಾಳೆ ನಾಡಿದ್ದರಲ್ಲಿ ಅವೆಲ್ಲಾ ಕಳುಹಿಸ್ತೀವಿ; ಆಗಬಹುದಾ?" ಎಂದರಂತೆ ವಿ.ಸೀ.

# ಮೊದಲ ಭೇಟಿ

ವಿ.ಸೀ.ಯವರನ್ನು ನಾನು ಮೊದಲ ಬಾರಿಗೆ ಭೆಟ್ಟಿಯಾದದ್ದು ೧೯೫೨ರಲ್ಲಿ. ನಾನಾಗ ಕರ್ನಾಟಕ ವಿಶ್ವವಿದ್ಯಾಲಯದ ಕುಲಸಚಿವನಾಗಿದ್ದೆ. ಮೂರು ವಿಶೇಷ ಉಪನ್ಯಾಸಗಳನ್ನವರು ಆಗ ವಿಶ್ವವಿದ್ಯಾಲಯದಲ್ಲಿ ನೀಡಿದರು. ಧಾರವಾಡದ ಸಾಹಿತ್ಯಪ್ರೇಮಿಗಳಿಗೆ ಇಂದಿಗೂ ಅಂದಿನ ಉಪನ್ಯಾಸಗಳ ಸವಿ ನೆನಪಿದೆ

ಉಪನ್ಯಾಸಗಳ ನಂತರ ತಮ್ಮ ಪ್ರವಾಸ ಭತ್ಯ ಪಡೆಯಲು ಉಪನ್ಯಾಸ ವಿಭಾಗದ ನಿರ್ದೇಶಕರೊಂದಿಗೆ ವಿಶ್ವವಿದ್ಯಾಲಯ ಹಣಕಾಸಿನ ಅಧಿಕಾರಿ ಪಾಂಡುರಂಗಿ ಎಂಬವರ ಬಳಿ ಹೋದರು. ಪಾಂಡುರಂಗಿಯವರು ತುಂಬ ನಿಸ್ಪೃಹ ವ್ಯಕ್ತಿ. ಆ ಕಾಲದಲ್ಲಿ ರೈಲಿನಲ್ಲಿ ಮೂರು ವರ್ಗಗಳಿದ್ದವು. ಸಾಧಾರಣ, ಮೇಲ್ಮಟ್ಟದ ಮಧ್ಯಮ ವರ್ಗದವರು ಹಾಗೂ ಅನುಕೂಲಸ್ಥರು ಸಾಮಾನ್ಯವಾಗಿ ಎರಡನೇ ವರ್ಗದಲ್ಲಿ ಪ್ರವಾಸ ಮಾಡುತ್ತಿದ್ದರು. ಅತಿ ದೊಡ್ಡ ಅಧಿಕಾರಿಗಳು ಶ್ರೀಮಂತರು, ಗೌರವಾನ್ವಿತರು ಒಂದನೆ ವರ್ಗದಲ್ಲಿ ಪ್ರಯಾಣಿಸುತ್ತಿದ್ದರು. ವಿ. ಸೀ.ಯವರು ವಿಶ್ವವಿದ್ಯಾಲಯದ ಆಮಂತ್ರಿತ ಗೌರವಾನ್ವಿತ ವ್ಯಕ್ತಿ. ಆದ್ದರಿಂದ ಒಂದನೇ ವರ್ಗದಲ್ಲಿ ಪ್ರಯಾಣಿಸಿದ್ದರು. ವಿಶ್ವವಿದ್ಯಾಲಯದ ಆಗಿನ ನಿಯಮಗಳ ಪ್ರಕಾರ ಒಂದನೆ ವರ್ಗದ ಪ್ರವಾಸ ಭತ್ಯ ಕೊಡುವಾಗ ಪ್ರಯಾಣಿಸುವವರ ಕಡೆಯಿಂದ 'ಒಂದನೆ ವರ್ಗದಲ್ಲಿ ಪ್ರಯಾಣಿಸುವ ರೂಢಿ ನನ್ನದಾಗಿದೆ' ಎಂದು ಒಂದು ಸರ್ಟಿಫೀಕೆಟು ಪಡೆಯಬೇಕಾಗುತ್ತಿತ್ತು. ಈ ರೀತಿಯ ಸರ್ಟಿಫಿಕೇಟ್ ಕೊಡಲು ವಿ.ಸೀ. ತಯಾರಿರಲಿಲ್ಲ ಹಾಗೆ ಬರೆದು ಸಹಿ ಮಾಡಲು ಅವರು ನಿರಾಕರಿಸಿದರು. ಇಂಥ ಸರ್ಟಿಫಿಕೇಟಿಲ್ಲದೆ ಒಂದನೆ ವರ್ಗದ ಪ್ರವಾಸ ಭತ್ಯ ಕೊಡಲು ಬರುವುದಿಲ್ಲ ವೆಂದು ಹಣಕಾಸಿನ ಅಧಿಕಾರಿ.

"ನಾನು ಒಂದನೆ ವರ್ಗದಲ್ಲಿ ಪ್ರವಾಸ ಮಾಡಿದ್ದೇನೆ," ಎಂದು ಬರೆದು ಸಹಿ ಹಾಕಬಲ್ಲೆನೆ ವಿನಾ ನನಗೆ ಒಂದನೆ ವರ್ಗದಲ್ಲಿ ಪ್ರವಾಸ ಮಾಡಿಯೇ ರೂಢಿಯೆಂದು ನಾನು ಹೇಳಲಾರೆ. ಅದು ನನಗೆ ಒಪ್ಪಿಗೆಯಾಗದ ಮಾತು," ಎಂದು ಖಡಾಖಂಡಿತವಾಗಿ ಹೇಳಿದರು ವಿ.ಸೀ.

ಅವರು ಸಹಿ ಹಾಕಲಿಲ್ಲ; ಇವರು ಹಣ ಕೊಡಲಿಲ್ಲ. ಮುಂದೇನು ಮಾಡಬೇಕೆಂದು ತೋಚದೆ ಉಪನ್ಯಾಸ ವಿಭಾಗದ ನಿರ್ದೇಶಕರು ವಿ.ಸೀ.ಯವರನ್ನು ನನ್ನೆಡೆಗೆ ಕರೆದುಕೊಂಡು ಬಂದರು. ನಡೆದ ಸಂಗತಿಯನ್ನೆಲ್ಲ ವಿವರಿಸಿದಾಗ ನನಗೆ ಪಾಂಡುರಂಗಿಯವರ ಬಗ್ಗೆ ಹೆಮ್ಮೆ ಎನಿಸಿತು. ವಿ.ಸೀ.ಯವರ ಸತ್ಯನಿಷ್ಠೆ ಹಾಗೂ ಪ್ರಾಮಾಣಿಕತೆಯ ಬಗ್ಗೆ ಅಪಾರ ಗೌರವ ಭಾವನೆಯೂ ಉಂಟಾಯಿತು.

ನಾನು ಪಾಂಡುರಂಗಿಯವರನ್ನು ಕರೆಕಳುಹಿಸಿದೆ. ಅವರು ಒಂದು ತಮ್ಮ ನಿಲುವೆಯನ್ನು ಸ್ಪಷ್ಟಪಡಿಸಿದರು. ಆ ನಿಯಮವು ಇರುವ ವರೆಗೆ ತಾವು ಅಸಹಾಯರೆಂತಲೂ ಅಂಥ ಸರ್ಟಿಫಿಕೇಟಿಲ್ಲದೆಯೆ ಒಂದನೆ ವರ್ಗದ ಭತ್ಯ ಕೊಡಲಾಗುವದಿಲ್ಲವೆಂತಲೂ ಅದಕ್ಕಾಗಿ ಹಾಗೆ ಅವರು ಬರೆಯಲೇಬೇಕಾಗುವದೆಂತಲೂ ಹೇಳಿದರು. ಮೇಲಿನ ಅಧಿಕಾರಿಗಳು ಅದನ್ನು ಕಡೆಗಣಿಸಿ ಕೊಡಬೇಕೆಂದು ಆಜ್ಞೆ ಮಾಡಿದರೆ ತಾವು ಕೊಡ ವುದಾಗಿಯೂ ಹೇಳಿದರು. ನಾನಿದನ್ನೆಲ್ಲ ಪರಿಗಣಿಸಿ ವಿ.ಸೀ.ಯವರಿಂದ 'ನಾನು ಒಂದನೇ ವರ್ಗದಲ್ಲಿ ಪ್ರಯಾಣ ಮಾಡಿದ್ದೇನೆ' ಎಂಬ ಹೇಳಿಕೆಗೆ ಮಾತ್ರ ಸಹಿ ಪಡೆದು ಭತ್ಯವನ್ನು ಕೊಡಲು ಆಜ್ಞೆ ಮಾಡಿದೆ. ಅವರಿಗೆ ಭತ್ಯ ಸಿಕ್ಕಿತು. ಆದರೆ ಇದು ಆಡಿಟ್ ಸಮಯದಲ್ಲಿ ಆಕ್ಷೇಪಿಸಲ್ಪಡಬಹುದೆಂಬುದನ್ನು ನನಗೆ ಹೇಳಲು ಪಾಂಡುರಂಗಿಯವರು ಮರೆಯಲಿಲ್ಲ. ಹಾಗೇನೂ ಆಗಲಿಲ್ಲ. ಮುಂದೆ ಆ ನಿಯಮವೂ ಬದಲಾಯಿತು.

ಭತ್ಯ ಪಡೆದಾದ ಮೇಲೆ ಸ್ವಲ್ಪ ಹೊತ್ತು ಮಾತನಾಡಿದೆವು ಇಂದಿಗೂ ಈ ಘಟನೆ ನನ್ನ ಮನದಲ್ಲಿ ಹಚ್ಚ ಹಸಿರಾಗುಳಿದು ವಿ.ಸೀ.ಯವರ ಘನ ವ್ಯಕ್ತಿತ್ವದ ನೆನಪು ಮಾಡಿಕೊಡುತ್ತದೆ.

**–ಸದಾಶಿವ ಒಡೆಯರ**

"ಹಾಗೇ ಮಾಡಿ; ಅದಕ್ಕೇನಂತೆ?" ಅಂದರಂತೆ ಒಡೆಯರ್. ಅಂಥ ವ್ಯಕ್ತಿತ್ವ ಅವರದು. ಆ ಕಾಲೇಜಿಗೆ ಅವರನ್ನು ಪ್ರಿನ್ಸಿಪಾಲ್ ಮಾಡಿದ್ದು ಯಾವುದೋ ಸಂಬಂಧವಿಲ್ಲದ ಒಂದು ದೊಡ್ಡ ಡಿಪಾರ್ಟ್‌ಮೆಂಟಲ್ ಸ್ಟೋರ್ಸ್‌ಗೆ ಮ್ಯಾನೇಜರರನ್ನಾಗಿ ಮಾಡಿದಂತಿತ್ತು. ಅಂಥದರಲ್ಲೇ ಅವರು ಅಧ್ಯಾಪನ... ಅಧ್ಯಯನ ನಡೆಸಿದ್ದರು. ತಮ್ಮ ಕೊಠಡಿಯಲ್ಲಿ ಕೂತಿದ್ದಾಗಲೂ ತೊಡೆಯ ಮೇಲೆ ಪುಸ್ತಕವಿರಿಸಿ ಓದುತ್ತಾ ಟಿಪ್ಪಣಿ ಮಾಡಿಕೊಳ್ಳುತ್ತಾ ಇದ್ದುದನ್ನು ನಾನು ನೋಡುತ್ತಲೇ ಇದ್ದೆ.

ತಾನು ಬರೆದ "Deserted Village" ನಲ್ಲಿ ಬರುವ ವಿಲೇಜ್ ಪ್ರೀಚರ್‌ನ ಚಿತ್ರಕ್ಕೆ ಆಲಿವರ್ ಗೋಲ್ಡ್‌ಸ್ಮಿತ್, ಮಾದರಿಯನ್ನು ಎಲ್ಲಿಂದ ತಂದಿದ್ದಿರಬಹುದೆಂದು ಇದ್ದ ಸಂಶಯ ವಿ. ಸೀ.ಯವರನ್ನು ನೋಡಿದ ಯಾರಿಗೂ ಬರಲು ಸಾಧ್ಯವಿಲ್ಲ.

ಶ್ರೀರಾಮಚಂದ್ರ ಅಯೋಧ್ಯಾ ನಗರವನ್ನು ಬಿಟ್ಟು ಹೊರಟಾಗ ಜನ ಏನು ಮಾಡಿದರೋ, ವಿ.ಸೀ. ಹೊನ್ನಾವರ ಬಿಟ್ಟಾಗಲೂ ಅದೇ ದೃಶ್ಯದ ಪುನರಾವರ್ತನೆ. ಅದೆಷ್ಟು ಸಮಾರಂಭಗಳು, ಹಾರೈಕೆಗಳು, ಬೀಳ್ಕೊಡುಗೆಗಳು!

ಊರಿನ ನಾಗರಿಕರಿಂದ ವಿ. ಸೀ.ಯವರಿಗೆ ಒಂದು ಹೊಚ್ಚ ಹೊಸ ಟೈಪ್‌ರೈಟರು ಕಾಲೇಜಿನಿಂದ ಶ್ರೀಗಂಧದಲ್ಲಿ ಕೆತ್ತಿದ 'ಗೀತೋಪದೇಶ ನೆನಪಿನ ಕಾಣಿಕೆಗಳು...

ಕಾಲೇಜಿನ ಅಧ್ಯಾಪಕರಾರೇ ಆಗಲಿ, ಬೋಧಕೇತರ ಸಿಬ್ಬಂದಿಯೇ ಆಗಲಿ, ತಮ್ಮ ಗಮನಕ್ಕೆ ತಾರದೆ ಯಾವ ದೂರನ್ನೂ ಕಾಲೇಜು ಸಮಿತಿಯ ಯಾವ ಸದಸ್ಯರ ಬಳಿಗೂ ತೆಗೆದುಕೊಂಡು ಹೋಗಬಾರದೆಂಬುದು ಅವರ ಆಶೆ.

ಹಾಗೆಯೇ ಕಾಲೇಜಿನ ಸಿಬ್ಬಂದಿಯ ಯಾವುದೇ ವ್ಯಕ್ತಿಯನ್ನೂ ತನಗೆ ತಿಳಿಸದೆಯೇ, ತಮ್ಮ ಅನುಪಸ್ಥಿತಿಯಲ್ಲಿ ವಿಚಾರಣೆ ನಡೆಸಬಾರದೆಂದೂ ಕಾಲೇಜು ಸಮಿತಿಯವರಿಗೂ ಹೇಳಿಬಿಟ್ಟಿದ್ದರು. ಅಂತೆಯೇ ಅಧ್ಯಾಪಕರಿಗೂ ಅವರ ತೊಂದರೆಗಳೇನೇ ಇದ್ದರೂ ನೇರವಾಗಿ ಕಾಲೇಜು ಸಮಿತಿಯವರ ಮನೆ ಬಾಗಿಲು ಬಡಿದು ಹೇಳಿ ತಮ್ಮ ಸ್ಥಾನಮಾನಕ್ಕೆ ಕುಂದು ತಂದುಕೊಳ್ಳುವ ಬದಲು ತಮಗೇ ಹೇಳಬೇಕೆಂದೂ ತಿಳಿಸಿದ್ದರು. "ನನ್ನೆದುರು ಹೇಳಿ, ನಾನು ನೋಡಿಕೊಳ್ಳುತ್ತೇನೆ," ಎನ್ನುತ್ತಿದ್ದರು. ಆದರೆ ಈ ಎಲ್ಲಾ ಸದ್ಭಾವನೆಗಳೂ ಸದ್ವರ್ತನೆಗಳೂ ಅವರು ಹೊನ್ನಾವರ ಬಿಟ್ಟೊಡನೆ ಅವರ ಹಿಂದೆಯೇ ನಡೆದವು.

ಅವರೇ ಅಲ್ಲಿಂದ ಹೋದ ಮೇಲೆ ನನಗೆ ಇನ್ನು ಬಹು ದಿನ ಅಲ್ಲಿರಲು ಇಚ್ಛೆ ಉಳಿಯಲಿಲ್ಲ. ಹಾಗೂ ಹೀಗೂ ಒಂದು ವರ್ಷ ಕಳೆಯುವುದರೊಳಗೆ ಚಿಕ್ಕಬಳ್ಳಾಪುರ ಮತ್ತು ಭದ್ರಾವತಿ ಕಾಲೇಜುಗಳಿಂದ ನೇಮಕಾತಿ ಆಜ್ಞೆಗಳು ಕೈ ಸೇರಿದವು. ಆದರೆ ಮುಂದೆ ಬಾಯಿಗೆ ಮಣ್ಣು ಹಾಕಿಕೊಳ್ಳಬೇಕಾದ ಒಂದು ಶಿಕ್ಷೆಯನ್ನು ವಿಧಿ ನನ್ನ ಹಣೆಯಲ್ಲಿ ಬರೆದಿದ್ದ. ಅದಕ್ಕೇ ಚಿಕ್ಕಬಳ್ಳಾಪುರ ಬಿಟ್ಟು ಭದ್ರಾವತಿ ಆರಿಸಿಕೊಂಡೆ.

× × ×

೧೯೭೯ರ ಜುಲೈ ೨೯ ರಂದು ಭದ್ರಾವತಿಯ ಕಾಲೇಜಿನಲ್ಲಿ ಇಂಗ್ಲೀಷ್ ಅಧ್ಯಾಪಕನಾಗಿ ಸೇರಿಕೊಂಡೆ. ಇಲ್ಲಿಗೆ ಬಂದಮೇಲೆ ಒಮ್ಮೆ ವಿ. ಸೀ. ಯವರನ್ನು ಭೇಟಿಯಾಗಿ ಬಂದಿದ್ದೆ— ಬೆಂಗಳೂರಿಗೆ ಹೋಗಿ. ನಾನು ಹೊನ್ನಾವರ ಬಿಟ್ಟಿದ್ದು ತಮ್ಮ ಮನಸ್ಸಿಗೆ ಬರಲಿಲ್ಲವೆಂದು ಬಾಯಿಬಿಟ್ಟು ಹೇಳಿಯೇಬಿಟ್ಟರು.

ಇದೇ ವರ್ಷದ ಸೆಪ್ಟೆಂಬರ್ ವೇಳೆಯಲ್ಲಿ ಶಿವಮೊಗ್ಗೆಯಲ್ಲಿ ನನ್ನೊಬ್ಬ ಅಣ್ಣಂದಿರ ಮಗಳ ಲಗ್ನದ ತಯಾರಿಯ ಗಡಿಬಿಡಿಯಲ್ಲಿ ಸೇರಿಹೋಗಬೇಕಾಯಿತು. ಲಗ್ನದ ದಿನವೇ ನಮ್ಮ ಕಾಲೇಜು ವಿದ್ಯಾರ್ಥಿ ಸಂಘದ ಆರಂಭ ಭಾಷಣ, ವಿ. ಸೀ.ಯವರಿಂದ. ವಿ. ಸೀ.ಯವರು ಬಂದು ಹೋಗಿಬಿಟ್ಟರು.

ಮರುದಿನ ಶಿವಮೊಗ್ಗೆಯಿಂದ ಭದ್ರಾವತಿಗೆ ಓಡಿದೆ. ಕೃಷ್ಣಭಟ್ ಬಡೆಕ್ಕಿಲರು ನನ್ನ ಕಂಡೊಡನೆ, "ಎಲ್ಲಿ ಹೋದಿರಿ ಖಜಾನೆ? ವಿ. ಸೀ ಯವರು ಬಂದು ಹೋಗಿಯಾಯ್ತು. ನೀವಿಲ್ಲಿದ್ದಿರೆಂದೇ ಅವರು ಬಂದದ್ದೆಂದು ಮೂರು ನಾಲ್ಕು ಬಾರಿಗೆ ಹೇಳಿದರು. ನಿಮ್ಮನ್ನು ತುಂಬಾ

ಕೇಳಿದರು..." ಎಂದರು.

ನಾನು ಅಪರಾಧ ಭಾವದಿಂದ ತಲೆ ಬಾಗಿಸಿದೆ. ಅವರು ಶಿವಮೊಗ್ಗೆಯಲ್ಲೇ ಬಿಡಾರ ಮಾಡಿದ್ದರಂತೆ! ಅವರ ವಿಳಾಸ ಪಡೆದು ಪುನಃ ಶಿವಮೊಗ್ಗಗೆ ಓಡಿದೆ. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಅತಿಥಿ ಗೃಹದ ಎರಡನೇ ನಂಬರ್ ಕೊಠಡಿ! ಕೇವಲ ಎರಡು ಗಂಟೆಗಳ ಮುಂಚೆ ಅದನ್ನು ಖಾಲಿ ಮಾಡಿ ವಿ. ಸೀ. ಬೆಂಗಳೂರಿಗೆ ಹೋಗಿಯಾಗಿತ್ತು!

ಶಿವಮೊಗ್ಗೆಯ ಕಾಲೇಜಿನವರ್‍ಯಾರೋ ಅವರನ್ನು ಕರೆದಿದ್ದು, ಆ ಖಚಿತನಲ್ಲಿ ಬಂದ ವಿ. ಸೀ. ಯವರನ್ನು ಭದ್ರಾವತಿ ಕಾಲೇಜಿನವರೂ ಬರಮಾಡಿಕೊಂಡು, ಸಮಾರಂಭ ಮಾಡಿ ಮುಗಿಸಿದ್ದರು. ಹೇಗೇ ಆಗಲಿ, ಆ ಸಮಾರಂಭದಲ್ಲಿ ಅವರನ್ನು ನಡೆಸಿಕೊಂಡ ರೀತಿ ಮಾತ್ರ ಯಾರಿಗೂ ಮರ್ಯಾದೆ ತರುವಂಥಾದ್ದಾಗಿರಲಿಲ್ಲವೆಂದು ಆಮೇಲೆ ತಿಳಿಯಿತು.

ಅವರಿಂದ ನೊಂದ ನಾನು ಬಹು ಬೇಗನೆ ಬೆಂಗಳೂರಿಗೆ ಹೋಗುವ ಒಂದು ಅವಕಾಶ ಮಾಡಿಕೊಂಡು ಅವರನ್ನು ಕಾಣಲು ಹೋದೆ.

ಬೆಳಗಿನ ೧೧ ಗಂಟೆ ಇದ್ದಿರಬೇಕು, ನಾನವರ ಮನೆ ಸಮೀಪಿಸಿದಾಗ ಅವರು ಎದುರಿಗೆ ಛತ್ರಿ ಹಿಡಿದು ಬರುತ್ತಿದ್ದರು. ದೂರದಿಂದಲೇ ನನ್ನ ಗುರುತು ಹಿಡಿದರು... ಅವರ ಮನೆ ಯಾಕೋ ಬೇರಾ ಕಾಣುತ್ತಿತ್ತು.

"ಯಾವಾಗ ಬಂದಿ?"

"ಈಗ ಬೆಳಿಗ್ಗೆ ಗುರುಗಳೇ,"

"ಗುಡ್, ಹೀಗೇ ಒಂದು ರೌಂಡ್ ಹೋಗಿ ಬರೋಣ್ವೆ?" ಎನ್ನುತ್ತ ಆಲ್ಬರ್ಟ್ ವಿಕ್ಟರ್ ರಸ್ತೆಯಲ್ಲಿ ನಡೆದರು.

"ನಿನ್ನ ಒಂದು ಸಾರಿ ಊಟಕ್ಕೆ ಕರೀಬೇಕೂಂತ ಆಸೆ ನಂಗೆ. ಆದರೆ ಏಕೋ ಆಗ್ತಾ ಇಲ್ಲ. ಈಗ ಹೀಗೇನೇ ಪ್ರಕಾಶ್ ಕೆಫೆಗೆ ಹೋಗಿ ಚೆನ್ನಾಗಿ ದೋಸೆ, ಜಾಮೂನು ತಿಂದುಬಿಡೋಣವಾ?" ಎಂದರು.

"ಬಿಲ್ ನನ್ನದು," ಎನ್ನಲು ಹೋದ ನಾನು ಹುಷಾರಾದೆ.

'ನನ್ನ ಮುಂದೆ ಅಷ್ಟು ದೌಲತ್ ಬಂತೇ ನಿನಗೆ?' ಎಂದರೆ? ಬಾಯಿ ಮುಚ್ಚಿಕೊಂಡೆ.

ಪ್ರಕಾಶ್ ಕೆಫೆಯ ಒಳಹೊಕ್ಕೆವು. ತಮ್ಮದೇ ಆದ ವಿಶಿಷ್ಟ ಶೈಲಿ, ಸ್ವರದಲ್ಲಿ ದನಿ ಎತ್ತಿ, "ಯಜಮಾನಪ್ಪಾ." ಎಂದು ಹೋಟೆಲ್ ಯಜಮಾನನನ್ನು ಆಹ್ವಾನಿಸಿದರು. ಆತ ಹಾಜರಾದ.

"ತುಂಬಾ ದೂರದಿಂದ ಈ ಹುಡುಗ ಬಂದಿದ್ದಾನೆ... ನೋಡೋಣ ಹೇಗೆ ಮಾಡ್ತೀರಾಂತ ಎರಡೆರಡು ದೋಸೆ – ಎರಡೆರಡು ಜಾಮೂನು ಒಟ್ಟಿಗೆ ಕಳುಹಿಸ್ತೀರಾ?" ಎಂದವನಿಗೆ ಅಪ್ಪಣೆ ಮಾಡಿದರು. "ನಾವಿಲ್ಲಿಗೆ ತುಂಬಾ ಹಳೆ ಗಿರಾಕಿ," ಎಂದು ನನ್ನೆಡೆ ನೋಡಿ ಹೇಳಿದರು.

ಅಲ್ಲೊಂದು ಮೂರ್ತಿ ಮೇಜು ಹುಡುಕಿ ಕುಳಿತರು.

"ನಾನು ಭದ್ರಾವತಿಗೆ ಬಂದಾಗ ಎಲ್ಲಿ ಹೋಗಿದ್ದಿ?" ಎಂದು ಶುರು ಮಾಡಿದರು. ನಾನು ವಿಷಯ ವಿವರಿಸುವಷ್ಟರಲ್ಲಿ ತಿಂಡಿ ಬಂತು. ಒಂದು ಸೆಟ್ ನನ್ನ ಕಡೆ ಸರಿಸುತ್ತಾ, "ತಕೋ" ಎಂದು ಅಪ್ಪಣೆ ಮಾಡಿ ತಾವು ಸುಮ್ಮನೆ ಕೂತರು. ಅವರು ಕೈ ಹಾಕದೆ ನಾನು ಮುಟ್ಟುವ ಧಾರ್ಷ್ಟ್ಯ ಮಾಡಲಿಲ್ಲ. ಅವರನ್ನು ಸೂಕ್ಷ್ಮವಾಗಿ ನೋಡಿದೆ. ಏಕೋ ತುಂಬಾ ದುಃಖ ಪಡುತ್ತಿದ್ದಂತೆ ಕಂಡಿತು. ಬೆವರುತ್ತಾ ತೊದಲುತ್ತಾ ನಾನು,

"ಅರ್ಥವಾಗಲಿಲ್ಲ. ಈ ದೋಸೆ... ಈ ಜಾಮೂನು..." ಎಂದೆ.

"ತಕ್ಕೋಳಪ್ಪ," ಎಂದು ಉತ್ತರೀಯದಿಂದ ಕಣ್ಣೀರು ಒರಿಸುತ್ತಿದ್ದರು.

ನನಗೆ ತುಂಬಾ ಚಿಂತೆಯಾಯಿತು. ಅವರು ತಟಕ್ಕನೆ,

"ಇವತ್ತು ನಮ್ಮ ಮನೆ ನೋಡಿದೆಯಾ? ಹೇಗ್ ಕಾಣಿಸ್ತು?" ಎಂದರು.

"ಏನೋ ಬದಲಾವಣೆ ಕಾಣಿಸ್ತು, ಸರಿಯಾಗಿ ಅಬ್ಸರ್ವ್ ಮಾಡಲಿಲ್ಲ," ಎಂದೆ.

"ತಿಳೀಲಿಲ್ವೇ? ಅಂಗಳದಲ್ಲಿ ಎರಡು ಮರಗಳಿದ್ವು ಖಜಾನೆ, ಒಂದು ಹಲಸಿನ ಮರ, ಒಂದು ತೆಂಗಿನ ಮರ. ಒಂದನ್ನ ನನ್ನ ಸಾಕು ತಾಯಿ ಮೆಕಟ್ಟವಮ್ಮ ಹಾಕಿದ್ದು... ಇನ್ನೊಂದು ನನ್ನ

ತಮ್ಮ ಹಾಕಿದ್ದು... ಅದನ್ನು ಈ ದಿನ ಮಕ್ಕಳು ಕಡಿದು ಹಾಕ್ಸಿದುವಪ್ಪ..."

ಅವರ ಕಣ್ಣಲ್ಲಿ ನೀರು ತುಂಬಿ ಹರಿಯುತ್ತಿತ್ತು.

ನಾನೂ ಗದ್ಗದ ಧ್ವನಿಯಿಂದ, "ಯಾಕೆ?" ಎಂದೆ.

"ಅಲ್ಲಿ ರೂಮ್ ಕಟ್ಟಿಸ್ತಾರಂತೆ. ಲೇ ಬೇಡಿರೋ, ಆ ಎರಡು ಮರ ಅವರ ನೆನಪಿಗೋಸ್ಕರ ಇವೆ. ನಾನು ಹೋದ ಮೇಲೆ ಏನಾದರೂ ಮಾಡಿಕೊಳ್ಳಿ ಅಂತ ಅಂಗಲಾಚಿದೆ... ಕೇಳಲಿಲ್ಲ ಕಣ್ಣು ಮುಂದೇ ಅವಕ್ಕೆ ಕೊಡಲಿ ಬೀಳುತ್ತಲ್ಲ!... ಎಲ್ಲಿಗೆ ಹೋಗಲಿ... ಏನು ಮಾಡಲಿ?... ಎಂದು ಹಂಬಲಿಸಿದೆ.

"ಅಷ್ಟರಲ್ಲಿ ಹೊನ್ನಾವರದವರು 'ಇಲ್ಲಿ ಬಂದು ಸ್ವಲ್ಪ ದಿನ ಇದ್ದು ಹೋಗಿ' ಅಂತ ಬರೆದರು. ಅಲ್ಲಿಗೆ ಹೋಗೋಕೆ ಯಾಕೋ ಮನಸ್ಸಾಗಲಿಲ್ಲ. ಶಿವಮೊಗ್ಗದವರು... ಭದ್ರಾವತಿಯವರು ಕರೆದರು. ಭದ್ರಾವತಿ, ಅಂದಕೂಡಲೆ ನಿನ್ನ ಜ್ಞಾಪಕ ಬಂತು. ತಕ್ಷಣ ಒಪ್ಪಿ ಅಲ್ಲಿಗೆ ಬಂದೆ. ಆದರೆ ನೀನೇ ಅಲ್ಲಿ ಇರಲಿಲ್ಲ... ಅಲ್ಲಿಂದ ನಾನು ವಾಪಸ್ ಬರೋದ್‌ರೊಳಗೆ ಆ ಎರಡೂ ಮರ ಉರುಳಿ ಬಿದ್ದಿದ್ವು!... ಇವತ್ತು ಅವುಗಳ ತಿಂಗಳ ತಿಥಿ. ಅದಕ್ಕೇ ಈ ದೋಸೆ... ಈ ಜಾಮೂನು... ತಕ್ಕೋಪ್ಪ." ಎಂದು ಉತ್ತರೀಯದಲ್ಲಿ ಮುಖ ಮುಚ್ಚಿಕೊಂಡರು.

ನನ್ನ ಮನಃಪಟಲದ ಮುಂದೆ ಶಿವಮೊಗ್ಗೆಯ ನಮ್ಮ ಮನೆ ಥಟ್ಟೆಂದು ಬಂದು ನಿಂತಿತು. ೫೮–೫೯ರಲ್ಲಿ ನನ್ನಿಂದ ಅಂತಹುದೇ ಒಂದು ಕೃತ್ಯ ನಡೆದಿತ್ತು. ಹಳೆಗಾಲದ ಮನೆ ಅದು... ಒಳಗೆಲ್ಲಾ ಕತ್ತಲೆ. ಬೆಳಕು ಬರಲಿ... ಎಂದೇನೋ ಉದ್ದೇಶವಿರಿಸಿ ಏನೋ ಮಾಡ ಹೋದರೆ ಇಡೀ ಮನೆಯೇ ಏನೋ ಒಂದು ಥರ ಆಗಿ ಹೋಯಿತು, ಮಾಂಗಗಳ ಕಾಟ, ಕೊಂಬೆಗಳು ಮನೆಯ ಹೆಂಚಿನ ಮೇಲೆ ಬಿದ್ದರೆ ನಾದ ಹಂಚೆಲ್ಲಾ ಪುಡಿ ಪುಡಿ ಎಂದು

ಹಿಂದಿದ್ದ ಅಶ್ವತ್ಥ ವೃಕ್ಷ (ಮುದಿಯಾಗಿ ಶಿಥಿಲವಾಗಿತ್ತು) ಕಡಿದುಕೊಂಡು ಹೋಗಲು... ತುಂಬಾ ದಿವಸದಿಂದ ಪೀಡಿಸುತ್ತಿದ್ದ ಒಂದು ಹರಿಜನ ಸಮುದಾಯಕ್ಕೆ ಅಪ್ಪಣೆ ಕೊಟ್ಟಿದ್ದ, ಅವನ್ನವರು ಕಡಿದು ಸಾಗಿಸಿಯೂ ಆಗಿತ್ತು.

ಆಗ ಆ ಮನೆಯನ್ನು ಕೊಂಡಿದ್ದ, ಕಟ್ಟಿದ್ದ, ಬಿತ್ತು ಆ ಅಶ್ವತ್ಥವೃಕ್ಷವನ್ನು ಹಾಕಿ ಬೆಳೆಸಿದ್ದ, ಆ ಆತ್ಮಗಳು ಎಷ್ಟು ನೊಂದುಕೊಂಡಿದ್ದವೋ, ಆಗ ಯೋಚಿಸಿರಲಿಲ್ಲ. ಈಗ ವಿ.ಸೀ.ಯವರು ಮತ್ತೆ ಆತ್ಮಗಳ ದರ್ಶನ ಮಾಡಿಸಿದರು.

ಮೌನ ಮರುಗಿದೆ. ಗುರು ಶಿಷ್ಯರಿಬ್ಬರೂ ತಮ್ಮದೇ ಮನೆಯಲ್ಲಿ ಹಾಗೆ ಇಬ್ಬರನ್ನೊಬ್ಬರು ನೋಡುತ್ತಾ ಕುಳಿತಿದ್ದವು. ಮಾತು ಮರೆಸಲು, "ದೋಸೆ. ಚೆನ್ನಾಗಿ ಮಾಡಿದಾನಾ?... ತಕ್ಕೋ ಆ ಜಾಮೂನು ತಕ್ಕೋ," ಎಂದು ಉಪಚಾರ ಮಾಡಿದರು. ತಾವೂ ತಿಂದರು.

"ಏನೇ ಆಗಲಿ, ದೆಹಲಿಯ ಘಂಟಾವಾಲನ ಹಾಗೆ ಸ್ವೀಟ್ಸ್ ಮಾಡಲು ಇವರ್‍ಯಾರಿಗೂ ಬರೋಲ್ಲ," ಎಂದು ಅವನನ್ನು ನೆನೆದರು.

ಅಲ್ಲಿಂದ ನಾವು ಸಚಿತ್ರ ಪರಿಷತ್ತನ್ನು ಬಲಕ್ಕೆ ಹಾಕಿ ಚಾಮರಾಜ ಪೇಟೆಯ ಮೂರ ನೆಯ ರಸ್ತೆಯಲ್ಲಿ ನಡೆದವು.

"ಸಾರ್, ನೀವು ಭದ್ರಾವತಿಗೆ ಬಂದಾಗ ಅಲ್ಲಿ ನಿಮ್ಮನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ, ನಡೆಯಿಸಿಕೊಳ್ಳಲಿಲ್ಲ, ಅಂತ ಕೇಳಿದೆ... ಅವರ ಎಲ್ಲಾ ದೋಷವನ್ನೂ ನನ್ನ ತಲೆಗೇ ಕಟ್ಟಿಕೊಳ್ಳುತ್ತೇನೆ. ಅದಕ್ಕಾಗಿ ನಿಮ್ಮ ಕ್ಷಮೆ ಕೇಳುತ್ತೇನೆ. ಅದಕ್ಕೇ ಈಗ ಬಂದದ್ದು," ಎಂದೆ.

"ಹಾಗೇನಿಲ್ಲ... ಆದರೂನೂ" ಎಂದು ಅವರು ತಾವು ಗುರುತಿಟ್ಟುಕೊಂಡಿದ್ದ ಒಂದಿಬ್ಬರ ಚಹರೆ ಹೇಳಿ, "ಅಲ್ಲಿ ಗೊಂದಲ ಎಬ್ಬಿಸುವ ಜನ ಇದಾರೇ ಎಂದು ಕಾಣುತ್ತದೆ. ಬಡೆಕ್ಕಲ ಹೇಳಿದ್ರು," ಅಂದರು. ನಾನು ಮಾತನಾಡಲಿಲ್ಲ.

"ನೀನು ಕೂಡಾ ಅಲ್ಲಿ ಹಾಜರಾಗಿಲ್ಲ ಎಂದೂ ಬಡೆಕ್ಕಲ ಅಂತಿದ್ರು. ಅವರು ನಿನ್ನನ್ನ ತುಂಬಾ ಮೆಚ್ಚಿಕೊಂಡಿದ್ದಾರೆ. ಹೊನ್ನಾವರ ಬಿಡಹಾರದಿತ್ತು ನೀನು... ಯಾಕೆ ಬಿಟ್ಟೆಯಪ್ಪ? ಹೋಗಲಿ, ಇಲ್ಲೇ ಎಲ್ಲಾದರೂ ಬೆಂಗಳೂರಲ್ಲಿ ಇದೆಯಾ ನೋಡು... ಇಲ್ಲಿ ನಿನಗೊಂದು ಜಾಗ ದೊರಕಿಸಿಕೊಡಲು ನನ್ನ ಪ್ರತಿಷ್ಠೆಯನ್ನೆಲ್ಲ ಪಣಕ್ಕೆ ಹಚ್ಚಲೂ ಸಿದ್ಧನಿದ್ದೇನೆ' ಎಂದರು.

× × ×

೧೯೬೦ರಲ್ಲಿ ವಿ. ಸೀ. ಯವರಿಗೆ ಬೆಂಗಳೂರು ಪುಟ್ಟಣ್ಣ ಚೆಟ್ಟಿ ಪುರಭವನದಲ್ಲಿ ಸನ್ಮಾನ ಸಮಾರಂಭ – ಗುಂಡ್ಮಿ ಚಂದ್ರಶೇಖರ ಐತಾಳರು ಅದರ ಅಧ್ವರ್ಯು.

ಈ ಸುದ್ದಿ ಪ್ರಕಟಗೊಂಡಾಗ ಸಂತಸಗೊಂಡ ನಾನು ಭದ್ರಾವತಿಯಿಂದ ಬೆಂಗಳೂರಿಗೆ ಹೋದೆ.

ಅವರ ಮನೆಯಲ್ಲಿ ಅಂದು ಬೆಳಿಗ್ಗೆ ತುಂಬಾ ಸಂಭ್ರಮ. ಜನಗಳ ಓಡಾಟ, ಗದ್ದಲ. ನನ್ನ ಕಂಡ ಕೂಡಲೆ,

"ಬಂದ್ಯಾ...... ಇವತ್ಸಾಯಂಕಾಲ..." ಎನ್ನುತ್ತಾ ಅಂದಿನ ಸಂದರ್ಭ ಅಚ್ಚಾದ ಒಂದು ಕಾರ್ಡ್ ಕೊಟ್ಟು, "ಇದನ್ನು ತೋರಿಸಿದರೆ ಮಾತ್ರ ಒಳಗೆ ಬಿಡುತ್ತಾರೆ. ಹತ್ತಿರ ಬಂದು ಕೂತುಕೋ," ಎಂದರು.

ಅಷ್ಟರಲ್ಲಿ ಹೊನ್ನಾವರದ ಹುಡುಗರು 'ವಿ.ಸೀ. ೭೦' ಸಂಭಾವನಾ ಗ್ರಂಥ ಪ್ರಕಟಿಸಿ, ಸಮಾರಂಭವಾಗಿ, ಅದರ ಉತ್ತಮ ಪ್ರತಿಯನ್ನವರಿಗೆ ಕಳುಹಿಸಿದ್ದ, ಅವರು ಅದನ್ನು ಓದಿಯೂ ಆಗಿತ್ತು.

"ಏನು! ನಿನ್ನ ತಸ್ಮೈ ಶ್ರೀ ಗುರವೇ ನಮಃ ತುಂಬಾ ಚೆನ್ನಾಗಿ ಬಂದಿದೆಯಪ್ಪ; ಅದೆಲ್ಲಾ ಯಾವಾಗ ಬರೆದಿ?" ನನ್ಮೇಲೆ ಇನ್ನೂ ಏನೇನು ಬರ್ಕೊಂಡಿಯಾ? ಎಂದು (ಮಹಾತ್ಮಾ) ಗಾಂಧಿ ನಗೆ ನಕ್ಕರು.

ಅಂದಿನ ಸಮಾರಂಭದ ವ್ಯವಸ್ಥಾಪಕರಿಗೆ ಇನ್ನೇನೋ ಹೊಳೆದು ಬಂದು ಸೇರುವ ಜನರನ್ನು ನಿಯಂತ್ರಿಸಲು ಬೇರೊಂದು ಕಾರ್ಡ್ ಮಾಡಿಸಿದ್ದರು. ಹೀಗಾಗಿ ನಾನು ಅಲ್ಲಿಗೆ ತೆಗೆದುಕೊಂಡು ಹೋದ ಕಾರ್ಡ್ 'ನಾಟ್

ಪೇಡ್ ಆಗಿ ನನಗೇ ವಾಪಸ್ಸು!

ಏನು ಮಾಡೋದು? ಅಂತ ಚಿಂತಿಸುವಷ್ಟರಲ್ಲಿ ವಿ.ಸೀ.ಯವರ ಮಗ ಬಂದರು. "ಬನ್ನಿ... ನಿಮ್ಮನ್ನ ಒಳಕ್ಕರೆತೊಂಬರೋಕೆ ಅಪ್ಪ ಹೇಳಿದರು," ಎಂದವರು ಹೇಳುತ್ತಿದ್ದ ಹಾಗೆ ಇನ್ಯಾರೋ ಬಂದು ಅವರನ್ನೇ ಕರೆದುಕೊಂಡು ಹೋದರು ಎಲ್ಲಿಗೋ! ನಾನು ತುಂಬಾ ನಿರಾಶನಾದೆ.

ಅಷ್ಟರಲ್ಲಿ ವ್ಯವಸ್ಥಾಪಕರು, ಸ್ವಯಂಸೇವಕರು ಪತ್ರಿಕರ್ತರು. ಓಲಗದವರು ಎಲ್ಲರೂ ಇಷ್ಟ-ಕ್ಕಿದ್ದಂತೆ ಓಡಾಟ ಗದ್ದಲ ಆರಂಭಿಸಿದರು.

ಸೊಗಸಾದ ಕಾರೊಂದು ಬಾಗಿಲಿಗೆ ಬಂತು. ಅದರ ಬಾಗಿಲು ತೆಗೆದು ವಿ. ಸೀ. ಹೊರ ಬಂದರು, ಕೈ ತೋರಿಸಿದರು. ಗುಂಡ್ಯಯವರು ಅವರಿಗೆ ಹಾರ ತೊಡಿಸಿ ನಮಸ್ಕರಿಸಿದರು, ನಂತರ ಮೇಲಕ್ಕೆ ಕರೆತಂದರು. ನಾನು ಟೌನ್ ಹಾಲ್ ಮೆಟ್ಟಿಲುಗಳ ಮೇಲೆ ಎಡ ಮೂಲೆಯಲ್ಲಿ ನಿಂತಿದ್ದೆ. ಅವರ ದೃಷ್ಟಿಗೆ ಬಿದ್ದೆ. ಕೂಡಲೆ ಬಳಿ ಬಂದರು.

"ಒಳಕ್ಕೆ ಬರಲಿಲ್ವೆ?... ನನ್ನ ಹಿಂದೆ ಬಾ." ಎಂದರು. ಹಿಂಬಾಲಿಸಿದೆ. ಅವರು ವೇದಿಕೆ ಏರಿದರು.

ನಾನು ಕೆಳಗಡೆ ಹಲವು ಸಾಲುಗಳ ಹಿಂದೆ, ನನ್ನ ಮೇಷ್ಟ್ರು ಎಲ್. ಎಸ್. ಶೇಷಗಿರಿ ರಾಯರ ಹಿಂದಿನ ಸಾಲಿನಲ್ಲಿ ಕೂತೆ...

ಸಮಾರಂಭಕ್ಕೆ ನಾಡಿನ ಗಣ್ಯ ಸಾಹಿತಿಗಳೆಲ್ಲಾ ಬಂದಿದ್ದರು.

ಕಾರಂತರು ಕುಟುಂಬ ಸಹಿತ!

ಅಂದು ವಿ. ಸೀ. ಬರೆದ 'ಮಹನೀಯರು' ಗ್ರಂಥದ ಬಿಡುಗಡೆ ಬೇರೆ! ನಾನು ಮೊದಲೇ ಬಂದು ಪ್ರತಿ ಕೊಂಡು ಸಮಾರಂಭದ ಕೊನೆಯಲ್ಲಿ ಅವರ ಮತ್ತು ಕಾರಂತರ ಹಸ್ತಾಕ್ಷರ ಪಡೆಯಲು ಆ ವೇಳೆ ಎದುರು ನೋಡುತ್ತಿದ್ದೆ.

ವಿ.ಸೀ.ಯವರಿಗೆ ಅಂದು ಸಂದ

ಗೌರವ ಸನ್ಮಾನಗಳನ್ನು ನೋಡಿ ನನ್ನ ಮನಸ್ಸು ತಣಿಯಿತು. ಮಾಸ್ತಿ, ಕಾರಂತ, ರಾಳ್ಳಪಲ್ಲಿ, ರಾಜರತ್ನಂ, ದೇ. ಜ. ಗೌ., ಕು. ಶಿ. ಮೊದಲಾದ ಮಹನೀಯರು ವಿ.ಸೀ. ಯವರ ಸಾಹಿತ್ಯ ಸೇವೆಯ ಗುಣಗಾನ ಮಾಡಿದರು.

ವಿ.ಸೀ.ಯವರು ಪೂರ್ಣವಾಗಿ ಮುಚ್ಚಿ ಹೋಗುವಷ್ಟು ಪುಷ್ಪಹಾರಗಳನ್ನು ಅವರ ಕೊರಳಿಗೆ ತೊಡಿಸಿ ಸಂತೋಷಿಸಿದರು. ವಿ.ಸೀ. ಯವರು ಕೃತಜ್ಞತೆಯ ಭಾರದಿಂದ ಬಾಗಿ ಹೋದರು.

ಸಮಾರಂಭ ಮುಗಿದ ಮೇಲೆ ಅವರ ಬಳಿಗೆ ಹೋದೆ. "ಈ ಪುಸ್ತಕ ನೀನು ಯಾಕೆ ಕೊಂಡೆ? ನಾನೇ ಒಂದನ್ನು ನಿನಗೆ ಕೊಡಬೇಕೊಂತಿದ್ದೆ," ಎನ್ನುತ್ತಾ ಕಾರಂತರ ಕಡೆ ತಿರುಗಿ, "ಕಾರಂತ್, ದಿಸ್ ಈಸ್ ಖಜಾನೆ," ಎಂದು ನನ್ನನ್ನು ತೋರಿಸಿದರು.

ಅವರಿಗೋ! ತಮ್ಮ ಷಷ್ಟ್ಯಬ್ದಿಯ ಪರ್ವದಲ್ಲಿ ಶಿವಮೊಗ್ಗೆಯಲ್ಲಿನ ಕನ್ನಡಿಗರನ್ನು ಹಂಗಿಸಿ, ಭಂಗಿಸಿ ದಂಗೆ ಎಬ್ಬಿಸಿದ ಖಜಾನೆ, ಭದ್ರಾವತಿಯಲ್ಲಿ ಬಡೆಕ್ಕಲರ ಮನೆಯಲ್ಲಿ ಬಂದು ಭೇಟಿ ಮಾಡಿ ಗೌರವ ಸಲ್ಲಿಸಿ ಹೋದ ಖಜಾನೆ ಇವನೇನೇ ಎಂದು ಹೇಗೆ ನೆನಪಾಗಬೇಕು? ಅವರ ಮಡದಿ, ಮಕ್ಕಳಿಗೂ ಪರಿಚಯ ಮಾಡಿಸಿದರು ವಿ.ಸೀ. ಅವರಿಬ್ಬರೂ ನನ್ನ ಪ್ರತಿ 'ಮಹನೀಯರು' ಪುಸ್ತಕದ ಹೊರ ಪುಟದಲ್ಲಿ ಹಸ್ತಾಕ್ಷರ ಹಾಕಿಕೊಟ್ಟರು.

"ಇರ್ತೀಯ?"

"ಇಲ್ಲ ಗುರುದೇವ್... ಇದಕ್ಕೆಂದು ಒಂದೇ ದಿನ ರಜ ಹಾಕಿದ್ದೆ. ರಾತ್ರೀನೇ ಹೋಗಬೇಕು."

"ಹಾಗಾದರೆ ಸ್ವಲ್ಪ ಹೊತ್ತು ಇರು. ಈಗಲೇ ಹೋಗಬೇಡ," ಎಂದು ನಿಲ್ಲಿಸಿಕೊಂಡರು.

ಪ್ರೆಸ್‌ನವರು, ಫೋಟೋಗ್ರಾಫರ್‌ಗಳು ಬೆಳಕು ಎರಚಿ ಲೆಕ್ಕವಿಲ್ಲದಷ್ಟು ಚಿತ್ರ ತೆಗೆದುಕೊಂಡರು. ವಿ.ಸೀ. ನನ್ನನ್ನು ಬಳಿಗೆ

ಕರೆದು ಹತ್ತಿರ ನಿಲ್ಲಿಸಿಕೊಂಡರು. ಬಲಗಡೆ ಅವರು ಅವರ ಬಲಗಡೆ ಇನ್ನೂ ಮುಖ್ಯರಾದ ಹಲವರು. ಎಡದಲ್ಲಿ ಯಾರಿದ್ದಾರೆ ಅಂತ ಕದ್ದು ನೋಡಿದರೆ ಕಾರಂತರು!

ಆದರೆ ನನ್ನ ದೌರ್ಭಾಗ್ಯ, ಇನ್ನೊಮ್ಮೆ ವಿ.ಸೀ.ಯವರನ್ನು ನೋಡಲು ಹೋದಾಗ ಅವರು ನನ್ನ ಮುಂದೆ ಅಸಂಖ್ಯಾತ ಫೋಟೋಗಳ ರಾಶಿ ಹಾಕಿದರು. ಅದರಲ್ಲಿ ನಾನಿದ್ದ ಚಿತ್ರ ಬಿಟ್ಟು ಉಳಿದೆಲ್ಲಾ ಇದ್ದವು.

ಅವರ 'ಮಹನೀಯರು' ಓದಿದಾಗ ನನಗೆ ಅದೊಂದು ಸತ್ಯಯುಗಕ್ಕೆ ಹೋದ ಅನುಭವ! ಲೇಖನಗಳು ಒಂದಕ್ಕಿಂತ ಒಂದು ಸುಂದರತರ, ಸುಂದರತಮ. ಅದರಲ್ಲೂ ಎನ್. ಎಸ್. ಸುಬ್ಬರಾಯರು, ಬಿ.ಎಂ. ಶ್ರೀ. ಯವರು, ಟಿ. ಎಸ್. ವೆಂಕಣ್ಣಯ್ಯ, ಗೋವಿಂದ ಪೈ, ಮೊಳಹಳ್ಳಿ ಶಿವರಾಯರು ಮತ್ತು ವರದಾಚಾರ್ಯರನ್ನು ಕುರಿತು ಬರೆದ ಬರಹಗಳಂತೂ ನನ್ನ ಮನ ಸೂರೆಗೊಂಡವು.

ಅದೆಷ್ಟು ವಿಷಯಗಳನ್ನು ನೆನಪಿನಲ್ಲಿರಿಸಿಕೊಂಡು ಬರೆದಿದ್ದಾರೆ! ಅವರದು ಅಗಾಧ ನೆನಪಿನ ಶಕ್ತಿ. ಅಂಗುಷ್ಟ ಮತ್ತು ತರ್ಜನಿಗಳನ್ನು ಮೂಗಿನ ಅಕ್ಕಪಕ್ಕದಲ್ಲಿ ಒತ್ತಿ ಹಿಡಿದು, ಕಣ್ಣು ಮುಚ್ಚಿ...

"ಬಹುಶಃ ೧೯೧೭–೧೮ ಅಂತ ಕಾಣುತ್ತೆ" ಅಂದರೆ ತೀರಿತು. ಅವರ ಮನಃಪಟಲದ ಮುಂದೆ ಮತ್ತೆ ಆ ವ್ಯಕ್ತಿಗಳೆಲ್ಲ ಕ್ಷಣ ಮಾತ್ರದಲ್ಲಿ ಪ್ರತ್ಯಕ್ಷ! ಆ ಘಟನೆಗಳೆಲ್ಲಾ ಫ್ಲ್ಯಾಷ್ ಬ್ಯಾಕ್ ಸಿನಿಮಾ ತಂತ್ರದಂತೆ ಕಣ್ಣ ಮುಂದೆ ಬಂದು ಹೋಗಬೇಡವೇ?

ಅದೃಷ್ಟ ಮತ್ತು ಸಾಂಪತ್ತಿಕ ದೃಷ್ಟಿಯಿಂದ ಭಗವಂತ ಅವರನ್ನೂ ನನ್ನನ್ನೂ ಒಂದೇ ಮುಹೂರ್ತದಲ್ಲಿ ಸೃಷ್ಟಿಸಿದ್ದಂತಿದೆ.

ವಿಶ್ವವಿದ್ಯಾನಿಲಯ ಅವರನ್ನು ನೋಡಿಕೊಂಡ ರೀತಿ, ನಡೆಸಿಕೊಂಡ ಬಗೆ ನೋಡಿದರೆ ಅಂಥವರು ಈ ನಾಡಿನಲ್ಲಿ ಹುಟ್ಟಬಾರದಿತ್ತೆನ್ನಿಸುತ್ತದೆ.

ನನ್ನ ಬಳಿ ಅಂಥ ಸಂಗತಿಗಳನ್ನು ಸೂಕ್ಷ್ಮವಾಗಿ ಹೇಳಿದ್ದರು. ಅವರ ಬಡ್ತಿ ಇನ್ನಾರಿಗೋ ದಕ್ಕಿತ್ತು, ಯಾರಿಗೋ ಉಪಕಾರ ಮಾಡಹೋದಾಗ ತಲೆಗೆ ಸುತ್ತಿ ಬಂದ ಋಣ ಭಾರ; ಸಂಬಳದಿಂದ ಮಾತ್ರವಲ್ಲದೆ ನಿವೃತ್ತಿವೇತನದಿಂದಲೂ ಕಟಾವಾಗುತ್ತಿದ್ದಂತಿತ್ತು, ಅದೆಲ್ಲಾ ಕಳೆದು ಬರುತ್ತಿದ್ದ ಹಣವಾದರೂ ಸಾಲುತ್ತಿತ್ತೋ ಇಲ್ಲವೋ. ಪುಸ್ತಕಗಳನ್ನು ಕೊಳ್ಳಲಿಕ್ಕಾಗಲಿ ತಮಗೆ ಪ್ರಿಯವಾದ ಲಂಡನ್ ಪ್ರತಿ "ಇಕನಾಮಿಸ್ಟ್" ತೆಗೆದುಕೊಳ್ಳಲಿಕ್ಕಾಗಲಿ ಹಣ ಹೇಗೆ ಹೊಂದಿಸುತ್ತಿದ್ದರೋ ತಿಳಿಯದು.

ಅವರು ಸರ್. ಎಂ.ವಿ ಬಗ್ಗೆ ಮಾತನಾಡುವಾಗ, "The greatest statesman engineer who engineered his life itself, ಅದೇ ವಿ.ಸೀ. one of the best economists that our country could feel proud of, and the author of the best celebrated book, ಹಣಪ್ರಪಂಚ, was a thorugh failure, who could not see through his own domestic economy." ಎಂದುದ್ಗರಿಸಿದ್ದರು.

ಅವರ ಜೀವನದಲ್ಲಿ 'ಅಸಂಗ್ರಹ' ಒಂದು ವ್ರತವಾಗಿದ್ದಿರಬೇಕು. ಅವರ ಸಂಗ್ರಹವೆಂದರೆ only RECOLLECTIONS.

ಅವರು ಎಂ.ಎ. ನಲ್ಲಿ (ಅರ್ಥಶಾಸ್ತ್ರ) ವಿಶೇಷವಾಗಿ "THRIFT" ಮೇಲೆ ಥೀಸಿಸ್ ಬರೆದು ಪಾಸ್ ಮಾಡಿದರು.

ಅದಕ್ಕೇ ಇರಬೇಕು ಅವರ ಗುರುಗಳಾದ ಎನ್.ಎಸ್. ಸುಬ್ಬರಾಯರು ಶಿಷ್ಯನನ್ನು ನೋಡಿ, "ನಿಮ್ಮ ಜನ್ಮನಕ್ಷತ್ರ ನೋಡಿದರೆ ನೀವು ಕಾರ್ ಇಡೋಕಾಗುತ್ತೋ ಇಲ್ವೋ," ಎಂದಿದ್ದರು. ('ಮಹನೀಯರು' ಪುಟ –೮)

ಕಾರು ಇರಲಿ, ಸಧ್ಯ ಅವರು ಗೌರವದಿಂದ ಜೀವನ ನಡೆಸಿಕೊಂಡು ಹೋಗಿ, "ವಿನಾ ದೈನ್ಯೇನ ಜೀವನಂ" "ಅನಾಯಾಸೇನ ಮರಣಂ" ಆಗಿ ಮುಗಿದಿದ್ದರೆ ಸಾಕಾಗಿತ್ತು.

ನಾನೇನೋ ಅವರನ್ನು ನೋಡಲು ಹೋಗುವಾಗಲೆಲ್ಲಾ ಸಿಟಿ ಮಾರ್ಕೆಟ್‌ನಿಂದ ಅವರ ಬಾಯಿಗೆ ಬರುವಂಥ ಹಣ್ಣು ಕೊಂಡುಹೋಗಿ ಅವರ ಮುಂದಿರಿಸಿದರೆ "ಇವೆಲ್ಲಾ ಯಾಕೆ ತರ್ತಿ?" ಎನ್ನುತ್ತಿದ್ದರು.

ಒಂದೆರಡನ್ನು ಬಾಯಿಗೆ ಹಾಕಿ ಚಪ್ಪರಿಸಿದಂತೆ ಮಾಡಿ "ಆಯ್ತು... ಆಯ್ತು... ತಕೋ" ಎಂದು ಹಿಂದಕ್ಕೆ ಕೊಟ್ಟುಬಿಡುತ್ತಿದ್ದರು. ನಾನು ಅಷ್ಟಕ್ಕೆ ಬಿಡದೆ ಉಪಾಯವಾಗಿ ಅವರ ಮನಸ್ಸನ್ನು ಕೈಲಾಸಂ ಕಡೆಗೋ, ಎಂ.ವಿ. ಕಡೆಗೋ, ವರದಾಚಾರ್ಯರ ವಿಷಯಕ್ಕೋ ಎಳೆದರೆ, ವಿ.ಸೀ. ಅದನ್ನು ವಿವರಿಸುವುದರಲ್ಲಿ ತನ್ಮಯರಾಗುತ್ತಿದ್ದರು. ಮಧ್ಯೆ ಮಧ್ಯೆ ಹಣ್ಣಿನ ಕವರನ್ನು ಅವರೆಡೆಗೆ ಚಾಚುತ್ತಿದ್ದರೆ ಇನ್ನು ಒಂದೆರಡು ಹಣ್ಣು ಹೆಚ್ಚಾಗಿ ತಿನ್ನುತ್ತಿದ್ದರು.

ತಕ್ಷಣ ಹೆಬ್ಬೆರಳು ತರ್ಜನಿಗಳಿಂದ ಎರಡೂ ಪಾರ್ಶ್ವದ ಕಣ್ಣುಗಳಿಗೆ ಒತ್ತಿ, "ಚಿಂತಾ... ಚಿಂತಾ" ಎನ್ನಬೇಕು. ಇದು ಅವರು ಮಗಳನ್ನು ಕರೆಯುತ್ತಿದ್ದ ರೀತಿ, ಬಂದವರಿಗೆ ಏನಾದರೂ

ಸತ್ಕಾರಕ್ಕೆ ಅಣಿ ಮಾಡಲು ಸೂಚನೆ.

"ಖಜಾನೆ ಬಂದಿದಾರಮ್ಮಾ"...

ಆ ಕಡೆಯಿಂದ ಸದ್ದು ಬಾರದಿದ್ದರೆ, "ಒಂದೆರಡು ಬಾಳೆ ಹಣ್ಣಾದರೂ ತರಿಸ್ತೀಯಾಮ್ಮಾ?" ಎನ್ನುತ್ತಾ, ತಾವು ಕುಳಿತ ಕಡೆಯಿಂದಲೇ ಹಿಂದಕ್ಕೆ ಕೈ ಚಾಚಿ, ಬುಕ್ ಷೆಲ್ಫ್‌ನ ಸಂದುಗೊಂದುಗಳಲ್ಲಿ ಕೈ ಆಡಿಸಿ (ಅದೇ ಅವರ ಪರ್ಸ್) ಒಂದೋ ಎರಡೋ ರೂಪಾಯಿ ತೆಗೆದುಕೊಡುತ್ತಿದ್ದರು. ಆ ಚಿತ್ರ ಇನ್ನೂ ಕಣ್ಣ ಮುಂದೆ ಕಟ್ಟಿದೆ. ಈ ಕಷ್ಟ ಕಾರ್ಪಣ್ಯಗಳಲ್ಲೆಲ್ಲಾ ಪರಮಾಚಾರ್ಯರು ಹೇಳಿದ್ದ ಶ್ಲೋಕ "ರಾಮಂ ವನವಾಸಕ್ಕೈದಿದಂ" ಅವರನ್ನು ರಕ್ಷಿಸಿರಬೇಕು.

× × ×

ವಿದ್ಯಾರ್ಥಿ ದೆಸೆಯಲ್ಲಿ(ಹೈಸ್ಕೂಲಲ್ಲಿ)ದ್ದಾಗ ನನ್ನ ಅಧ್ಯಾಪಕರಾಗಿದ್ದ ಅನಂತರಾಮು ಮತ್ತು ಸಂಗೀತ ಗುರುಗಳು ಚಿ. ವಿಶ್ವೇಶ್ವರಯ್ಯ (ದಿ. ಚಿ. ಸದಾಶಿವಯ್ಯನವರ ಸೋದರ) ಮೊದಲಾದವರು ನನ್ನಲ್ಲಿ ಕೈಲಾಸಂ ಬಗೆಗೆ ಆಸಕ್ತಿ ಮೂಡಿಸಿ– 'ಕೋಳೀಕೆ ರಂಗ' 'ತಿಪ್ಪಾರಳ್ಳಿ' 'ನಂಜಿ ನನ್ನಪ ರಂಜಿ' ಮೊದಲಾದ ಹಾಡುಗಳನ್ನು ಹಾಡಿಸುತ್ತಿದ್ದರು. ಕಾಲ ಕ್ರಮೇಣ ಅದು 'ಕೈ' ಅವರ ಕಾವ್ಯ ವಾಚನಕ್ಕೆ ಭಾಷಣಕ್ಕೆ ದಾರಿಮಾಡಿತು.

'ಕೈ' ಮತ್ತು ಸರ್ ಎಂ.ವಿ.ಯವರ ಕುರಿತು ಭಾಷಣ ಮಾಡಲು ನನಗೆ ವಿ.ಸೀ.ಯವರದೇ ಸ್ಫೂರ್ತಿ.

ಅಂತಹ ಎಡೆಗಳಲ್ಲಿ ಭಾಷಣ ಮುಗಿಸಿ ಕೆಳಗಿಳಿದಾಗ ಸಭಿಕರಲ್ಲಿ ಹಲವರು, "ಆ ಇಬ್ಬರು ಮಹನೀಯರ ಬಗ್ಗೆ ಇಷ್ಟು ಚೆನ್ನಾಗಿ ಮಾತನಾಡುವ ನೀವು ಅವರಿಬ್ಬರ ಗೃಹಜೀವನದಲ್ಲಿಯ ದುರಂತಗಳ ಬಗ್ಗೆ ಅಧಿಕೃತವಾಗಿ ಏನಾದರೂ ಹೇಳಬಲ್ಲಿರಾ?" ಎಂದು ಕಾಡಿದ್ದರು.

ಆ ಮಹನೀಯರ ಗೃಹಕೃತ್ಯದ ಅಂತರ್ಯ ಹೆಚ್ಚು ಕಡಿಮೆ ಒಂದೇ ರೀತಿಯ ದುರಂತವಾಗಿತ್ತಂತೆ. ಏನೇನೋ ಕಥೆಗಳು...ಗುಸುಗುಸು... ಖಚಿತವಾಗಿ ಹೀಗೇ ಎಂದು ಹೇಳಲಾಗದಂಥಾದ್ದು.

ವಿ.ಸೀ.ಯವರು 'ಎಂ. ವಿ. ಸೆಂಟೆನರಿ ಕಮಿ–

ಮೊರೇಶನ್ ವಾಲ್ಯೂಮ'ನ್ನು ಸಿಲ್ವರ್ ಜ್ಯುಬಿಲಿ ಟೆಕ್ನಾಲಜಿಕಲ್ ವಿದ್ಯಾಸಂಸ್ಥೆಯ ಪ್ರಿನ್ಸಿಪಾಲ್ ಎಂ. ಆರ್. ಕೃಷ್ಣಮೂರ್ತಿ (ಸರ್ ಎಂ.ವಿ. ಅಣ್ಣಂದಿರ ಮಕ್ಕಳು)ಯವರಿಂದ ತಂದಿರಿಸಿಕೊಂಡು ಓದುತ್ತಿದ್ದುದನ್ನು ಕಣ್ಣಾರೆ ಕಂಡಿದ್ದೆ. ಅದನ್ನು ಒಂದೆರಡು ದಿನ ಓದಿ ಹಿಂದಿರುಗಿಸಲು ಎರವಲು ಬೇಡಿದೆ. ಮೊದಲು ಅವರು ಹಿಂಜರಿದರು. (ಎಷ್ಟು ಜನ ಅವರಿಂದ ಪುಸ್ತಕ, ಪದಾರ್ಥ, ಹಣ ಪಡೆದುಕೊಂಡು ಹೋಗಿ ದಗ ಹಾಕಿದ್ದರೊ!) ಸ್ವಲ್ಪ ಹೊತ್ತಿನ ನಂತರ, "ತಕ್ಕೊಂಡು ಹೋಗಿ ಬೇಗ ತಂದ್ಕೊಡ್ತೀಯಾ! ನಾನೀಗ ಸರ್ ಎಂ. ವಿ. ಮೇಲೆ ಒಂದು ಪುಸ್ತಕ ಬರೀತಿದೇನೆ... ಸಂಗ್ರೇಕದು..." ಎಂದರು.

ಅದನ್ನು ತಲೆ ಮೇಲೆ ಹೊತ್ತು ತಂದು ಮೂರು ಹಗಲು, ಮೂರು ರಾತ್ರಿ ಆ ನೂರೆರಡು ಮಹನೀಯರು ಬರೆದ ಲೇಖನಗಳನ್ನೋದಿ, ಚಂದವೆಂದು ಕಂಡು ಬಂದದ್ದನ್ನು ಟಿಪ್ಪಣಿ ಮಾಡಿಕೊಂಡು ಆ ಗ್ರಂಥವನು ಹಿಂದಿರುಗಿಸಿದ್ದೆ. ಅವರಿಗೆ ತುಂಬಾ ಸಂತೋಷವಾಗಿ, 'ಬೇಕಾದ ವರವನ್ನು ಬೇಡು' ಎಂಬಷ್ಟು ಪ್ರಸನ್ನರಾದರು. ಆಗ ಅವರ ಮುಂದೆ ಆ ಜನ ಕೇಳುತ್ತಿದ್ದ ಪ್ರಶ್ನೆ, ಇರಿಸಿದೆ.

"ನಿಂಗ್ಯಾಕೆ ಬೇಕು? ಯಾರೊಬ್ಬನ ವೈಯಕ್ತಿಕ ದಿನಚರಿಯ [ಮೂಲೆಯಲ್ಲಿ ಕೂಡ ಸ್ಥಾನ ಸಿಗಬಾರದಂಥ ಘಟನೆಗಳವು," ಎಂದುಬಿಟ್ಟರು.

"ಸತ್ಯವನ್ನರಿಯುವ ಇಚ್ಛೆ ನನಗೆ" ಅಂದೆ ನಾನು.

"ಸತ್ಯ? ಹೂಂ. ಯಾವುದು ಸತ್ಯ? ನಾನು ನಮ್ಮಪ್ಪನ ಮಗ. ಇದು ಸತ್ಯ. ನಾನು ನನ್ನ ಮಗನ ಅಪ್ಪ ಅಂಬೋದೂ ಸತ್ಯ. ಇವರ ಮಧ್ಯೆ ನಾನು ಹೆಂಡತಿಯ ಗಂಡ ಅನ್ನೋದು ಕೂಡ. ಇವಿಷ್ಟರಲ್ಲಿ ಇದೇ ಸತ್ಯ ಎಂದು ಯಾವುದಕ್ಕೆ ಹೇಳುತ್ತೀ ಖಜಾನೆ?" ಎಂದು ಬಾಣದ ಮೇಲೆ ಬಾಣ ಬಿಟ್ಟರು. ಒಂದು ನಿಮಿಷ ತಡೆದು, "ಎಂ. ವಿ.ಯವರ ಬಗ್ಗೆ ಹೇಳುವುದಾದರೆ ನಾನು ಸೆಕ್ರೆಟರಿಯೇಟಿನಲ್ಲಿದ್ದ ಎಲ್ಲಾ ಕಾಗದ ಪತ್ರಗಳನ್ನೂ ತೆಗೆದು ನೋಡಿದೀನಿ. ಅವರು ಸಾಯೋಕ್ಮುಂಚೆ ಇತರರ ಹೆಸರುಗಳಿಗೆ ತಳಕು ಬೀಳುವಂತಹ ತಮ್ಮ ಎಲ್ಲಾ ಖಾಸಗಿ ಕಾಗದಗಳನ್ನೂ ಸುಟ್ಟು ಬಿಡುವಂತೆ [ತಮ್ಮ ಜನಕ್ಕೆ ಆಜ್ಞಾಪಿಸಿದ್ದಿರಬೇಕು. ಬಹುಶಃ ಆತನಿಗೆ ಖಾಸಗಿ ಜೀವನವೆಂಬುದೇ ಇರಲಿಲ್ಲ. ಅವರ ವ್ಯಕ್ತಿತ್ವ ಇಷ್ಟೊಂದು ಕಾಪ್ಟ್ರಮಯವಾಗಿಬಿಟ್ಟಿತ್ತು. ನಿನ್ನ ಪ್ರಶ್ನೆ ಬಗ್ಗೆ ಹೇಳೋದಾದರೆ ...ಅವರುಗಳ ಲೈಫ್, ಪರ್ಸನಲ್ ಲೈಫ್ ಹೇಳಬಲ್ಲೆ... ಬೇಡ. ನೀನು ಎಲ್ಲಾದರೂ ಬಾಯಿ ಬಿಟ್ಟುಬಿಡುತ್ತೀಯಾ," ಎಂದು ನಕ್ಕರು.

"ಅಷ್ಟು ಹೇಳಿದರೆ ಸಾಲದೆ?" ಎಂದು ನಾನೂ ನಕ್ಕೆ! ಎಲ್ರಿಗೂ ಗೊತ್ತು ನನ್ನ ಬಾಯಿ ಬೊಂಬಾಯೀಂತ!

× × ×

೧೯೭೨–೭೩ ಇರಬೇಕು. ಆ ದಿನಗಳಲ್ಲಿ ಒಮ್ಮೆ ಅವರನ್ನು ನೋಡಬಂದಾಗ–ಹೊರಗಡೆ ತಿರುಗಾಟಕ್ಕೆ ಹೊರಟೆವು. ಇದಕ್ಕಿದ್ದಂತೆ ದಾರೀಲಿ ಹೆಗಲ ಮೇಲ್ಕೈಯಿರಿಸಿ (ಈ ಸೌಭಾಗ್ಯ ಹಲವು ಬಾರಿ ನನಗೆ ಬಂದಿತ್ತು.)

"ನಿನ್ನ ಒಂದು ವಿಷಯ ಕೇಳೋಣಾಂತ... ಹೇಳ್ತೀಯಾ ಮರಿ?" ಎಂದರು.

ಈ (ಕುರಿ)ಮರಿಗೆ ಗೊತ್ತಿರುವ... ಅವರಿಗೆ ಗೊತ್ತಿಲ್ಲದಂತಹ ವಿಷಯ ಯಾವುದಿರಬಹುದು? ಎಂದು ಗಾಬರಿಯಾಯಿತು.

"ನಿಂಗೂ ಡಾ. ಎಸ್. ಎಲ್. ಭೈರಪ್ಪನವರಿಗೂ ತುಂಬಾ ಚೆನ್ನಾಗಿದೆಯಂತೆ. ಹೌದೆ?" ಎಂದವರು ಕೇಳಿದಾಗ ಜೀವ ಬಂತು ಎನ್ನಿಸಿ ಹೌದೆಂದು ತಲೆಯಾಡಿಸಿದೆ.

ಶ್ರೀನಿವಾಸ ಶ್ರೋತ್ರಿಯರನ್ನು ಸೃಷ್ಟಿಸಿದ ಭೈರಪ್ಪನವರ ಬಗೆಗೆ ವಿ.ಸೀ.ಗೆ ತುಂಬಾ ಅಭಿಮಾನ ಮೂಡಿತ್ತು. ಅವರನ್ನು ನೋಡೋದು ಹೇಗೆ? ಯಾರನ್ನು ಆಶ್ರಯಿಸಿದರೆ ಅವರು ತಮ್ಮ ಮನೆಗೆ ಬಂದಾರು? ಎಂದೆಲ್ಲಾ ಅವರು ಯೋಚಿಸಿರಬೇಕು. ಕೊನೆಗೆ, "ಖಜಾನೆಗೇ ಗೊತ್ತಿದಾರೆ... [ಅವರನ್ನೇ ಹಿಡೀರಿ ಎಂದು ಯಾರೋ ಹೇಳಿದ್ದಾರು... ಅವರಿಗೆ ಅದರಿಂದ ತುಂಬಾ ಸಂತೋಷವಾಗಿರಬೇಕು.

"ಒಂದ್ ಸಾರಿ ಅವರನ್ನು ನಮ್ಮ ಮನೆಗೆ ಕರ್ಕೊಂಡ್ ಬರ್ತೀಯಾ?"

"ಆಗಲಿ," ಎಂದೆ ಧೈರ್ಯವಾಗಿ. ವಿ. ಸೀ. ಯಂಥವರನ್ನು ನೋಡಲು ಯಾರು ತಾನೇ ಇಚ್ಛಿಸರು?

ಬಂದು ಭಂಡ ಧೈರ್ಯ. ಬರೆದೇಬಿಟ್ಟೆ ಭೈರಪ್ಪನವರಿಗೆ.

ಭೈರಪ್ಪ ಆಗ ದಿಲ್ಲಿಯ ಎನ್. ಸಿ. ಇ. ಆರ್. ಟಿ. ಯಲ್ಲಿನ 'ದರ್ಶನ'ದ ವಿಭಾಗದಲ್ಲಿದ್ದರು. ನನ್ನ ಕಾಗದ ತಲಪಿದ ಕೂಡಲೆ ಉತ್ತರ ಬರೆದರು.

ಬೆಂಗಳೂರು ವಿಶ್ವವಿದ್ಯಾಲಯದ ವ್ಯಾಪ್ತಿ ಯಲ್ಲಿನ ಶಿಕ್ಷಣ ವಿಭಾಗದ ಮುಖ್ಯಸ್ಥರಾದ ಡಾ. ಎ. ಸಿ. ದೇವೇಗೌಡರವರು ಆಗ ಇಲ್ಲೊಂದು ಸೆಮಿನಾರ್ ಹಮ್ಮಿಕೊಂಡಿದ್ದರು. ಅದಕ್ಕೆ ಆಗ–ಮಿಸಿ ಅಲ್ಲಿ ಕೆಲವು ಉಪನ್ಯಾಸ ನೀಡಲು ಭೈರಪ್ಪನವರಿಗೆ ಆಮಂತ್ರಣವಿತ್ತಿದ್ದರು. ಅದನ್ನು ತಿಳಿಸಿ ಭೈರಪ್ಪ,

"ಹೇಗಿದ್ದರೂ ಡಾ. ಎ. ಸಿ. ಡಿ. ನಿಮ್ಮನ್ನು ಬಲ್ಲರು. ನೀವು ಹೋಗಿ ಅವರನ್ನು ಭೇಟಿ ಮಾಡಿ. ನನ್ನ ವಸತಿ ಅವಧಿ, ಈ ಎಲ್ಲಾ ವಿವರಗಳನ್ನೂ ತಿಳಿದು ಬರೆಯಿರಿ. ನಂತರ ನಾನು ಅಲ್ಲಿ ಬರುತ್ತೇನೆ. ಜೊತೆಗೂಡಿ ವಿ. ಸೀ.ಯವರನ್ನು ನೋಡಹೋಗೋಣ," ಎಂದು ಬರೆದರು.

ಅವರಂತೆ ದೇವೇಗೌಡರನ್ನು ಭೇಟಿಯಾಗಿ ವಿಷಯ ಸಂಗ್ರಹಿಸಿ, ಭೈರಪ್ಪನವರಿಗೆ ಮಾರುತ್ತರ ಬರೆದುಹಾಕಿ, ಈ ಎಲ್ಲಾ ವರದಿಯನ್ನು ವಿ. ಸೀ.ಯವರಿಗೆ ಒಪ್ಪಿಸಿದೆ. "ಪರವಾಗಿಲ್ವೆ ನೀನೂನೂ?" ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಭೈರಪ್ಪ ಬೆಂಗಳೂರಿಗೆ ಬಂದು ನಾವು ವಿ. ಸೀ.ಯವರ ಮನೆಗೆ ಹೋದೆವು. ಅವರನ್ನು ಕಂಡ ವಿ. ಸೀ.ಗೆ 'ಇಷ್ಟು ತರುಣನೆ ಈತ?' ಎಂಬ ಆಶ್ಚರ್ಯ.

ನಮ್ಮ ಸುಕೃತ. ಅಂದು ಅಲ್ಲಿಗೆ ಪ್ರೊ. ಎ. ಎನ್. ಮೂರ್ತಿರಾಯರೂ ಬಂದಿದ್ದರು.

ತೆಳುವಾದ ಬಿಳಿಯ ಬಿಸಿ ದೋಸೆಗಳು, ಕಾಯಿ ಚಟ್ನಿ, ಕಾಫಿ ಸತ್ಕಾರ. ಅರಳು ಹುರಿದಂತೆ ವಿ. ಸೀ. ಪಟಪಟನೆ ಮಾತಾಡುತ್ತಿದ್ದರು. ಪದ್ಮಾಸನದಲ್ಲಿ ಕುಳಿತಿದ್ದ ಭೈರಪ್ಪ ಮಾತಿನ ನಡುವೆ, 'ಹೌದು' ಅಥವಾ 'ಅಲ್ಲ' ಎಂದಷ್ಟೇ ಅನ್ನುತ್ತಿದ್ದರು.

ಕೊಂಚಕಾಲ ವಿ. ಸೀ.ಯವರು ಮೂರ್ತಿರಾಯರು - ಮಹಾರಾಜಾ ಕಾಲೇಜಿನ ದಿನಗಳು ಇಲ್ಲಿಯ ಲಂಡನ್ ಮಿಶನ್ ಸ್ಕೂಲ್ ದಿನಗಳ ಸಹಪಾಠಿಗಳಾದ ಮಲ್ಲಾರಾಧ್ಯ, ಎಂ. ಪಿ. ಎಲ್. ಶಾಸ್ತ್ರಿ, ಡಾ. ಟಿ. ಎ. ಪುರುಷೋತ್ತಂ ಇವರೆಲ್ಲರನ್ನು ಜ್ಞಾಪಿಸಿಕೊಂಡು ಮಾತಾಡುತ್ತಿದ್ದರು.

ಆ ಮೂವರು ಮಹಾ ವಾಗ್ಮಿಗಳ ನಡುವೆ ನಾನೂ ಪಿಗ್ಮಿಯಾಗಿ ಕುಳಿತಿದ್ದೆ ಅಷ್ಟೆ. "How shall I thank you?" ಎಂದು ಮಾರು ದಿನ ಗುರುಗಳು ನನ್ನ ಬೆನ್ನಮೇಲೆ ಕೈ ಆಡಿಸಿದರು.

ವಿ. ಸೀ.ಯವರದೊಂದು ಸೌರವ್ಯೂಹ. ಅವರೇ ಅದರ ಕೇಂದ್ರ ಬಿಂದು. ಅದರ ಸುತ್ತ ಹಲವು ವೃತ್ತಗಳು. ಅವರೇ ತಿಳಿಸಿರುವಂತೆ ಡಿ. ವೆಂಕಣ್ಣಯ್ಯ, ಡಿ. ಎ. ಆರ್. ಕೃ. ಅವರ ಕಣ್ಣಿನ ದೀಪಗಳು.

ಘಟಾನುಘಟಿಗಳಾದ ಸರ್. ಎಂ. ವಿ., ಕೈಲಾಸಂ, ಕಾರಂತ, ಡಿ. ವಿ. ಜಿ., ಬೇಂದ್ರೆ ಹಾಗೂ ಇನ್ನು ಕೆಲವರು ಅವರ ಸಮೀಪವರ್ತಿಗಳು. ಅವರ ಸ್ನೇಹಕ್ಕೆ-ವಿಶ್ವಾಸಕ್ಕೆ-ಪ್ರೀತಿಗೆ ಪಾತ್ರರಾದ ಇತರ ವ್ಯಕ್ತಿಗಳು. ನಮ್ಮ ಕೃಷ್ಣಮೂರ್ತಿ ಕೆಲ್ಲಾಪುರಗೆ ಧ್ರುವನಿಯ ಹತ್ತಿರದ ಸ್ಥಾನ. ಇಂಥದರಲ್ಲಿ ನನಗೆ ಅವರು thanks ಹೇಳುವುದೇ? ನನಗೆ ಮುಜುಗರವಾಯಿತು.

× × ×

ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಅಂತೂ ಕೊನೆಗಾಲಕ್ಕೆ ಡಾಕ್ಟೋರೇಟ್ ಅನುಗ್ರಹ ಮಾಡಿತು.

ಬಾಳ ದಾರಿಯುದ್ದಕ್ಕೂ ಅವರಿಗೆ ದುರಾದೃಷ್ಟ ಕಾಡಿರಬೇಕು. ಈ ವಿಶ್ವವಿದ್ಯಾಲಯ ಅವರ ವಿದ್ವತ್ತನ್ನು ಮಾನ್ಯ ಮಾಡಿ ಆದರಿಸಲಿಲ್ಲ. ಪ್ರೊಫೆಸರ್ ಕೂಡ ಮಾಡಲಿಲ್ಲ.

ಐ. ಎ. ಎಸ್. ಅಧಿಕಾರಿಯಾಗಿರುವ ಎಂ. ಎಸ್. ಸ್ವಾಮಿನಾಥನ್ ಅವರ ವಿದ್ಯಾರ್ಥಿ. ವಿ. ಸೀ.ಯವರ ಬಗೆಗೆ ಮಾತನಾಡುತ್ತಾ, "ವಿ. ಸೀ. ಎಂದರೆ ವೈಸ್‌ಚಾನ್ಸಲರ್, ಅವರು ವೈಸ್ ಚಾನ್ಸೆಲರ್ ಆಗಬೇಕಿತ್ತು," ಅಂದಿದ್ದರಂತೆ.

ಅದಕ್ಕೆ ಪೂರ್ವದಲ್ಲಿಯೇ ಅಲ್ಲಿದ್ದ ಹುದ್ದೆಯೊಂದಕ್ಕೆ ವಿ. ಸೀ. ಯವರ ಹೆಸರು ಸೂಚಿತವಾಗಿತ್ತಂತೆ. ಇದನ್ನವರು ನನಗೆ ಹೇಳುವಾಗ ಒಬ್ಬರ ಹೆಸರು ಸೂಚಿಸಿ, "ಆತ ಜಾತಿಯ ಅಸ್ತ್ರ, ಹಿಡಿದು ಗೆದ್ದ," ಎಂದಿದ್ದರು.

ಯಾರನ್ನು ಅವರು ದೇವರೆಂದು ಸ್ಥಾಪಯಾಮಿ, ಪೂಜಯಾಮಿ, ಪ್ರಾರ್ಥಯಾಮಿ, ಮಾಡಿದ್ದರೋ, ಅವರೇ ಇವರಿಗೆ ಕೈ ಕೊಟ್ಟು ಹೋಗಿದ್ದರು.

ಅವರಿಗಿಂತ ವಯಸ್ಸಲ್ಲಿ, ಸೇವೆಯಲ್ಲಿ, ಅನುಭವದಲ್ಲಿ ಕಿರಿಯರಾದವರು ಬರಿಯ ನಲವತ್ತನೆಯ, ಐವತ್ತನೆಯ ವಯಸ್ಸಿನೊಳಗೆಲ್ಲಾ ಡಾಕ್ಟರೇಟ್ ಪಡೆದವರು, ಉತ್ಸವ ಮಾಡಿಸಿಕೊಂಡರು. ಆದರೆ ವಿ. ಸೀ.ಯವರಿಗೆ ಬಂದುದು ಸ್ವಾಗತಿಸಲಾರದ, ಅನುಭವಿಸಲಾರದ ಇಳಿವಯಸ್ಸಿನಲ್ಲಿ.

ಆ ಪದವಿ ಅವರಿಗೆ ದೊರೆತಾಗ ಅವರನ್ನು ಅಭಿನಂದಿಸಲು ನಾನು ಕ್ರಾಫರ್ಡ್ ಹಾಲ್‌ಗೆ ಹೋಗಲಿಲ್ಲ; ಚಾಮರಾಜ ಪೇಟೆಗೇ ಹೋದೆ. ಅವರು ಅದರಿಂದ ಸಂತೋಷಪಡಲಿಲ್ಲ ಎಂದಷ್ಟೇ ಇಲ್ಲಿ ಬರೆಯಬಲ್ಲೆ... ಆ ಪದವಿ ಪತ್ರವನ್ನು ನನಗೆ ತೋರಿಸಿದರು. ತಮಗಾದ ಬೇಸರ ತೋಡಿಕೊಂಡರು. ಅದನ್ನು ಮರೆಸಲು ಮತ್ತೆ ಬಿ. ಎಂ. ಶ್ರೀ, ವೆಂಕಣ್ಣಯ್ಯನವರ ಕಥೆಗಳು.

ಅಷ್ಟು ಅನ್ಯಾಯ ತಮಗಾದರೂ ಯಾರ ದೌರ್ಬಲ್ಯವನ್ನೂ ಅವರು ಎತ್ತಿ ಆಡಲಿಲ್ಲ; ಯಾರನ್ನೂ ನೋಯಿಸಲಿಲ್ಲ.

ತಮಗೆ ಸಂಬಂಧಿಸಿದ ವಿಷಯದಲ್ಲೂ ಅಷ್ಟೇ.

ಹೇಳಿಕೊಂಡದ್ದು ಕಡಿಮೆ– ಅದೂ ಸೂಕ್ಷ್ಮವಾಗಿ ಹೇಳಿಯಾರು ಹೇಳಿದರೆ.

"ನಮಗೆ ಹೀಗಾಗಬೇಕು– ಇದೇ ಸಿಕ್ಕಬೇಕು– ಎಂದು ಕೇಳೋಕೆ ನಮಗೇನು ಅಧಿಕಾರ?

"ನಾವು ಶನಿ, ರಾಹು, ಕೇತು ಅಂತೀವಲ್ಲ… ಯಾರು ಅವೆಲ್ಲಾ?

"ಒಂದ್ ಸಾರಿ ಮನೇಲಿ ಹಿರಿಯರ ದಿನ ಅಣ್ಣ ಎಲ್ಲಾ ತಮ್ಮ ಸೇರಿದ್ದರು. ಜಿಲೇಬಿ, ಜಾಂಗೀರು ಇನ್ನೂ ಏನೇನೋ ಪಂಚ ಭಕ್ಷ್ಯ ಮಾಡಿಸಿದ್ದರು," ಎಂದು ಹೇಳಲು ಹೊರಟ ಅವರಿಗೆ ಗಂಟಲುಬ್ಬಿ ಬಂತು. ಕ್ಷಣ ಬಿಟ್ಟು," ಆಗ ಇದ್ದಕ್ಕಿದ್ದ ಹಾಗೆ ಏನೋ ಜಗಳ ಎದ್ದಿತು. ಕೂಗಾಟ ಚೀರಾಟ ನಡೆಸಿ, ಅಡಿಗೆ ಪದಾರ್ಥ ಎಲ್ಲಾ ಕಿತ್ತು ಕೀರಾಡಿ ಬೀದಿಗೆಸೆದು ಸರ್ವನಾಶ ಮಾಡಿಬಿಟ್ರಪ್ಪ," ಎಂಬು ಗದ್ಗದಿಸಿದರು. "ಹಾಗಾದರೆ ನಮ್ಮನ್ನ ಕಾಡ್ತಾವಲ್ಲ ಅವು ಯಾರು? ಈ ಅಣ್ಣ, ಅಕ್ಕ. ತಮ್ಮ, ತಂಗಿ–ದಾಯಾದಿಗಳು ಇವು ಯಾರು ಅಂತ ತಿಳ್ಕೊಂಡಿದೀರಾ ಇವೇ ಶನಿಗಳು… ರಾಹುಗಳು… ಕೇತುಗಳು…" ಎಂದರು.

ಶಿವಮೊಗ್ಗೆಯ ನನ್ನ ಬೀದಿಯಲ್ಲೇ ತಂದೆ ತಾಯಿಗಳ, ಶವಸಂಸ್ಕಾರಕ್ಕೆ ಬರದಂತೆ. ಅಣ್ಣ ತಮ್ಮಂದಿರನ್ನು ತಡೆಯಲು ಮಚ್ಚು ಗೊಡಲಿ ಹಿಡಿದು ಕಾದು ನಿಂತ ವೀರರನ್ನು ಕಂಡಿದ್ದ ನನಗೆ ಗುರುಗಳ ಕಥೆ ಕುತೂಹಲ ಕೆರಳಿಸದೆ ಹೋದರೂ ಅಂಥವರಿಗೂ ಈ ಕಷ್ಟ ಬಂದಿತ್ತೇ? ಎನ್ನಿಸದಿರಲಿಲ್ಲ.

ವಿಧಿಯ ಕಷ್ಟಗಳ ಮಳೆ ಸುರಿಸೇ – ಸುರಿಸಿದರೂ (ಹೊರ ಮೈ) ಕಲ್ಲಾಗಿ ಒಳಗೆ ಅವರು ಬೆಲ್ಲವಾಗಿಯೇ ಉಳಿದದ್ದು ಇಂಥ ಸೋಜಿಗ. ಅಷ್ಟು ಮೃದು ಹೃದಯಿಯಾಗಿ, ಮೃದು ಭಾಷಿಯಾಗಿ ಹೇಗೆ ಉಳಿದರೋ ಹೇಳಲಾರೆ.

ನಾನು ವೇಣಾಕರ್ ಇಬ್ಬರೂ ಅವರನ್ನು ಒಮ್ಮೆ ಪೊನ್ನಾಪುರದಲ್ಲಿದ್ದಾಗಲೇ. "ನಿಮಗೆ ಲಾಯಿಫ್‌ನಾಗೇನಾದ್ರೂ ಡಿಸಪಾಯಿಂಟಾ-ಗಿದೆಯೇ ಸರ್ರೇ?" ಎಂದದ್ದಕ್ಕೆ,

"ಅಂಥದೇನಿಲ್ಲಪ್ಪ... ಆದರೆ ನಮ್ಮ ಕಾರಂತರೊಬ್ಬರು ಆಸ್ತಿಕರಾಗಿಬಿಟ್ಟದ್ರೆ ಸಾಕಿತ್ತು" ಎನ್ನಬೇಕೆ?

ಶಿವರಾಮ ಕಾರಂತರನ್ನು ಕುರಿತಾಡಿದ್ದು ಈ ಮಾತು ಎಂದು ನಾನು ಮತ್ತೆ ಹೇಳಬೇಕಿಲ್ಲವಷ್ಟೇ.

× × ×

ಕೆಲ ದಿನಗಳ ನಂತರ ಮತ್ತೆ ಅವರಿಗೆ ಬೆಂಗಳೂರಲ್ಲಿ ಒಂದು ಭಾರಿ ಸನ್ಮಾನಕ್ಕೆ ಸಿದ್ಧತೆ ನಡೆದಿತ್ತು. ಆದರೆ ವಿಧಿ ಕ್ರೂರ ಪ್ರಹಾರ ಮಾಡಿದ. ಸನ್ಮಾನದ ದಿನ ಬೆಳಿಗ್ಗೆ ವಿ.ಸೀ. ಯವರ ಶ್ರೀಮತಿ ತೀರಿಕೊಂಡರು.

೧೯೭೫ರ ಮೇ ತಿಂಗಳಲ್ಲೊಂದು ಬೆಳಗಿನ ಜಾವ ಎಂದೂ ಬಾರದ ವಿ.ಸೀ. ಸ್ವಪ್ನದಲ್ಲಿ ಕಾಣಿಸಿಕೊಂಡರು.

"ನೀನು ಯಾಕೆ ರಾಗಿರುವನೆ? ಹುಷಾರು. ಈ ವರ್ಷದಿಂದ ಮುಂದೆ ನಿನಗೆ ತುಂಬಾ ಕಷ್ಟಗಳು ಬಂದಾವು," ಎಂದು ಹೇಳಿ ಅದೃಶ್ಯರಾಗಿದ್ದರು.

ಹುಟ್ಟಿದಂದಿನಿಂದ ಕಷ್ಟಗಳು ಒಂದರೆಕ್ಷಣವೂ ಬಿಡದೆ ನನ್ನ ಜೊತೆಯಲ್ಲೇ ಇವೆ. ವರ್ಷಂಪ್ರತಿ ಒಂದಲ್ಲಾ ಒಂದು ರೀತಿಯ ಮಾರಕವಾದ ಪೆಟ್ಟು ಬೀಳುತ್ತಲೇ ಇದೆ...ಅವಲ್ಲದೆ ಇನ್ಯಾವ ಕಷ್ಟ? ಎಂಬ ದಾಗುಡ ಆರಂಭವಾಯಿತು.

ಸೂಚನೆ ಸುಳ್ಳಾಗಲಿಲ್ಲ. ಕಷ್ಟಗಳ ಪರಂಪರೆಯೇ ಆರಂಭವಾಯಿತು. ಮೊದಲು ಕುಂತು ಎಂಬಂತೆ ಹೆಂಡತಿ – ಮಕ್ಕಳು ಕಾಯಿಲೆಗೆ ತುತ್ತಾದರು. ಮನೆಯಾಕೆ ಆಸ್ಪತ್ರೆ ಕಂಡಳು, 'ಹ್ಯಾಮ್ಲೆಟ್' ತರಗತಿಯಲ್ಲಿ ಐದನೆ ಅಂಕ, ಮೊದಲ ದೃಶ್ಯ ಎನ್ನುವಲ್ಲಿ ಮರೆವು ಮುಸುಕಿ, ಎರಡನೆ ವಾರ್ಡ್, ಮೊದಲನೆ ಬೆಡ್ ಎಂದು ಹೇಳುವಷ್ಟರ ಮಟ್ಟಿಗಿನ ಪರವಶತೆ. ಜತೆಗೆ ಕಾಲೇಜಿನಲ್ಲಿ ಕೊಡುತ್ತಿದ್ದ ೬೦% ಸಂಬಳವೂ ಬಂದ್.

೭೨ರಿಂದಲೇ ಈ ಕಾಲೇಜು ರೋಗಿಷ್ಠವಾಗಿತ್ತು. ಅವರದೇ ಒಂದು ಮಹಾಪುರಾಣ. ಅದನ್ನು ಬೇರೆಯವರಿಗೆ ವಹಿಸುವುದರಲ್ಲೂ ಎರಡು ಪ್ರತಿಷ್ಠಿತ ಗುಂಪುಗಳ ಹೋರಾಟ. ಪರಿಣಾಮ ಅಧ್ಯಾಪಕರ ಜೇಬಿಗೆ ಮೊದಲೇ ಕತ್ತರಿ. ಈಗ ಅವರ ಚರ್ಮಕ್ಕೂ ಕತ್ತರಿ.

ಕೊನೆಗೆ ಅದನ್ನು ಸ್ಥಳೀಯ ಉಕ್ಕಿನ ಕಾರಖಾನೆ ಮತ್ತು ಕಾಗದ ಕಾರಖಾನೆಗಳ ವಶಕ್ಕೆ ಕೊಡಲು ಅವರು ದೊಡ್ಡ ಮನಸ್ಸು ಮಾಡಿ ಒಪ್ಪಿಕೊಂಡರು. ಅಲ್ಲಿಗೆ ಬಂದು ಸೇರಿದ್ದ ಅಧ್ಯಾಪಕರಲ್ಲಿ ನನ್ನನ್ನುಳಿದು ಇತರರು ವಯೋಮಾನದಲ್ಲಿ ಕಿರಿಯರು. ನಾನಾಗಲೇ ಇಲ್ಲಿ ಏಳು ವರ್ಷಗಳ ಖಾಯಂ ನೌಕರನಾಗಿ ಸೇವೆ ಸಲ್ಲಿಸಿ ಜೀವನದಲ್ಲಿ ನಡು ಪ್ರವಾಹಕ್ಕೆ ಬಂದು ಅಲ್ಲಿ ಸೆಣಸುತ್ತಿದ್ದೆ.

ಉಕ್ಕಿನ ಕಾರಖಾನೆಯ ಹಲವು ಸಹೃದಯ ಅಧಿಕಾರಿಗಳ ಮನಸ್ಸನ್ನು ಗೆದ್ದು ಅವರು ಈ ಕಾಲೇಜನ್ನು ವಹಿಸಿಕೊಳ್ಳುವಲ್ಲಿ ಹಗಲು ರಾತ್ರಿ ಓಡಾಟ ನಡೆಸಿ ಅವರ ಮನಒಲಿಸಿದ್ದೆ. ಈ ಹೆಣಗಾಟದಲ್ಲಿ ಕಣ್ಣಿಗೆ ಕಾಣುವಷ್ಟು ಪ್ರಧಾನ ಪಾತ್ರ ನಾನು ವಹಿಸಿದ್ದೆ. ತುಂಬಾ ಜನರಿಗೆ ಕಣ್ಣು ಕೆಂಪಾಗಿಬಿಟ್ಟಿತು.

ಆದರೆ ಮೇಲಧಿಕಾರಿಗಳು, "ನಮಗೇ ಇಲ್ಲಿ ಸಾಕಷ್ಟು ತಲೆನೋವಿದೆ, ನಿಮ್ಮದನ್ನೂ ಕಟ್ಟಿಕೊಂಡು ಹೆಚ್ಚಿಸಿಕೊಳ್ಳಲಾರೆವು. ಈಗಿರುವ ಅಧ್ಯಾಪಕರುಗಳನ್ನೆಲ್ಲ ಮನೆಗೆ ಕಳುಹಿಸಿ ಬರಿಯ ಕಾಲೇಜು ಕೊಟ್ಟರೆ ಮಾತ್ರ ತೆಗೆದುಕೊಳ್ಳುತ್ತೇವೆ" ಎಂದು ಮತ್ತೆ ಷರತ್ತು ಹಾಕಿದರು.

ಅದಕ್ಕೆ ಯುಜಿಸಿ ಒಂದು ಸಮಿತಿಯನ್ನು ನಿಯಮಿಸಿ ಭದ್ರಾವತಿಗೆ ಕಳುಹಿಸಿತು. ದಿ. ಪ್ರೊ. ಬಿ.ಸಿ. ವೆಸ್ಲಿಯವರು ಅದಕ್ಕೆ ಅಧ್ಯಕ್ಷರಾಗಿ ಆಗಮಿಸಿ ನನ್ನಿಂದ ಎಲ್ಲಾ ವಿಷಯ ಕೇಳಿ, "Take over means with assets and liabilities. ಈ ಷರತ್ತು ಸಲ್ಲ. The

College must be taken over with lock stock and barrel. ಅಲ್ಲದೆ ಖಾಯಂ ನೌಕರರನ್ನು ದುಷ್ಟ ನಡವಳಿಕೆಯ ವಿನಾ ತೆಗೆದು ಹಾಕಲೂ ಬಾರದು," ಎಂದು ಸ್ಪಷ್ಟವಾಗಿ ಬರೆದುಹೋದರು.

ಉತ್ತರವಾಗಿ ಕಾರ್ಖಾನೆಗಳ ಅಧಿಕಾರವರ್ಗದವರು, "ನಾವು ಸ್ಕ್ರೀನಿಂಗ್ ನಡೆಸುತ್ತೇವೆ. ಅದರಲ್ಲಿ ಪಾಸಾದವರಿಗೆ ಮಾತ್ರ ನಮ್ಮಲ್ಲಿ ಪ್ರವೇಶ ಅನುತ್ತೀರ್ಣರಾದವರನ್ನು ನೀವು ತೆಗೆದುಹಾಕಿ ಕಾಲೇಜು ಕೊಡಬೇಕು," ಎಂದು ಮರುಮತ್ತು ಹಾಕಿದರು.

ಇದಕ್ಕೆ ನಮ್ಮ ಅನ್ನದಾತರೂ ನಾವೂ ಒಪ್ಪದೆ ಕಾಲಹರಣವಾಗುತ್ತಿತ್ತು. ಒಟ್ಟಿನಲ್ಲಿ ಅಂತರಂಗ ಜೀವನ, ಬಹಿರಂಗ ಜೀವನ ಎರಡೂ ಒಂದೊಂದು ರೀತಿಯ ಕುಂಭೀಪಾಕ ನರಕವಾಗಿ ನಡೆದಿತ್ತು.

× × ×

ಈ ಮಧ್ಯೆ 'ಆತ್ಮಾಹುತಿ' ಎಂಬ ಗ್ರಂಥದ ಬಿಡುಗಡೆ ಭದ್ರಾವತಿಯಲ್ಲಿ ಆಗಬೇಕಿತ್ತು. "ವಿ.ಸೀ.ಯವರನ್ನು ಕರೆತರುತ್ತೀರಾ?" ಎಂದು ವ್ಯವಸ್ಥಾಪಕರು ನನ್ನನ್ನು ಬೆಂಗಳೂರಿಗೆ ಕಳುಹಿಸಿದರು. ಆದರೆ ಅವರು ಬರುವ ಸ್ಥಿತಿಯಲ್ಲಿರಲಿಲ್ಲ. (ಈ ನೆವದಲ್ಲಾದರೂ ಅವರು ನನ್ನ ಮನೆಗೆ ಬಂದಿರಲಿ ಎಂದೇ ನನ್ನ ಹಂಬಲ) ಅವರು ಬಾರದಿದ್ದುದಕ್ಕಾಗಿ ಇನಾಂದಾರ್,

ಚಡಗ, ಶ್ರೀಮತಿ ಎಂ.ಕೆ. ಇಂದಿರಾ, ಹೆಚ್. ಎಸ್. ಪಾರ್ವತಿಯವರನ್ನು ಕರೆದುಕೊಂಡು ಹೋಗಿ ಆ ಕಾರ್ಯಕ್ರಮ ನಡೆಸಲಾಯಿತು.

× × ×

ವರ್ಷ ಉರುಳಿ ೧೯೭೬ಕ್ಕೆ ಕಾಲಿಟ್ಟಿತು. ಮಾರ್ಚ್, ಏಪ್ರೀಲ್ ತಿಂಗಳಲ್ಲಿ ವಾರ್ಷಿಕ ಪರೀಕ್ಷೆ ಮುಗಿದ ಮೇಲೆ ಉತ್ತರ ಪತ್ರಿಕೆಗಳ ಮೌಲ್ಯ ಮಾಪನಕ್ಕೆ ಮೈಸೂರು, ಬೆಂಗಳೂರು ಕಡೆ ಪ್ರಯಾಣ.

"ಒಂದು ವೇಳೆ ಕಾರ್ಖಾನೆಯವರು 'ಸ್ಕ್ರೀನಿಂಗ್' ಎಂದು ನೋಟೀಸು ಕಳುಹಿಸಿದರೆ ಯಾರೂ ಅಂಗೀಕರಿಸಕೂಡದು" ಎಂದು ಬಾಯಿ ಮಾತಿನ ಒಪ್ಪಂದಕ್ಕೆ ಬರಲಾಗಿತ್ತು.

ಮೊದಲು ಮೈಸೂರು. ನನ್ನದು ಎಸ್.ಎಲ್. ಭೈರಪ್ಪನವರ ಮನೆಯಲ್ಲಿ ವಾಸ್ತವ್ಯ. ಅವರಾಗ 'ಪರ್ವ'ಕ್ಕಾಗಿ ಚಿಂತನ ಸಮಾಧಿಯಲ್ಲಿದ್ದರು. ಆದರೆ ಅದರಿಂದ ನನಗೇನೂ ತೊಂದರೆ ಇರಲಿಲ್ಲ. ರವಿಶಂಕರ್ ಸಿತಾರ್, ಕುಮಾರ ಗಂಧರ್ವ ಹಾಡುಗಾರಿಕೆ, ಭೀಮಸೇನ ಜೋಷಿಯವರ ಗಾಯನದ ಧ್ವನಿ ಮುದ್ರಿಕೆಗಳನ್ನು ಕೇಳುತ್ತಾ, ಭೈರಪ್ಪನವರ ಯೋಗಾಸನಗಳನ್ನು ನೋಡುತ್ತಾ, ಶ್ರೀಮತಿ ಸರಸ್ವತಿಯವರ ಕೈಯಿನ ರಸಭೋಜನ ಮಾಡುತ್ತಾ ನನ್ನ ವಾಟ್ಟಿಗೆ ನಾನಿದ್ದೆ. ತೀರ್ಥಹಳ್ಳಿಯ ತುಂಗಾ ಕಾಲೇಜಿನ ಇಂಗ್ಲೀಷ್ ಅಧ್ಯಾಪಕ ಉಡುಪರೊಂದಿಗೆ ಅಲೆದಾಟ. ಅವರಿಗೂ ಒಮ್ಮೆ ಭೈರಪ್ಪನವರ ಭೇಟಿ ಮಾಡಿಸಿ ದಿನ ತಳ್ಳಿದೆ.

ಅಲ್ಲಿಂದ ಬೆಂಗಳೂರು. ಉಡುಪರು, "ಖಜಾನೆ, ಭೈರಪ್ಪನವರ ಭೇಟಿ ಮಾಡಿಸಿದಿರಿ... ಇಲ್ಲಿ ವಿ.ಸೀ.ಯವರನ್ನು ತೋರಿಸುತ್ತೀರಾ?"ಎಂದರು.

ಉಡುಪರೊಂದಿಗೆ ವಿ.ಸೀ.ಯವರ ಮನೆಗೆ ಹೋದೆ. (೫ ಮೇ, ೧೯೭೬)

ಈಗ ಅವರನ್ನು ಈ ಮರಗಳನ್ನು ಕಡಿದು ಬರಿದಾಗಿಸಿದ ಸ್ಥಳದಲ್ಲಿ ಕಟ್ಟಿದ್ದ ಭಾಗದಲ್ಲಿ ಒಂದು ಸುಸಜ್ಜಿತ ಕೋಣೆಗೆ ಸ್ಥಳಾಂತರಿಸಿದ್ದರು. 'ಮಂಚದ ಕಟ್ಟಿಗೆ ಒರಗಿಸಿದ್ದ ದಪ್ಪ ದಿಂಬೊಂದಕ್ಕೆ ಒರಗಿ ವಿ.ಸೀ. ಕುಳಿತಿದ್ದರು.

"ಎಷ್ಟು ದಿನ ಆಯ್ತು ನಿನ್ನ ನೋಡಿ? ಯಾವಾಗ ಬಂದಿ? ಇವರ್‍ಯಾರನ್ನ ಕರ್‍ಕೊಂಡು ಬಂದಿದೀ?" ಎಂದು ಹತ್ತಿರ ಕರೆದು ಮಂಚದ ಮೇಲೆ ಕೂರಿಸಿಕೊಂಡರು.

ಅವರ ಕಣ್ಣು, ಕಿವಿ, ಎರಡೂ ಮಂದವಾಗಿದ್ದವು. ಯಾರಾದರೂ ಕೈ ಹಿಡಿದು ನಡೆಸಬೇಕಿತ್ತೇನೋ. ಕೈಲಾಸಂ ಅವರನ್ನು ನೋಡಿಕೊಳ್ಳಲು, ಅವರಿಗೆ ಷಾನ 'ಮ್ಯಾನ್ ಆ್ಯಂಡ್ ಸುಪರ್‌ಮ್ಯಾನ್' ಓದಿ ವಿಮರ್ಶೆ ಮಾಡಬಲ್ಲಂಥ ಅಡಿಗೆಯವನು ಕೃಷ್ಣ ಇದ್ದ. ವಿ.ಸೀ.ಯವರಿಗೂ ಪೊನ್ನಾವರದಲ್ಲಿ ಆಫೀಸ್-ಫ್ರಾನ್ಸಿಸ್ ಎಂಬಿಬ್ಬ ಅಟೆಂಡರ್‌ಗಳೊಂದಿಗೆ ಒಬ್ಬ-ನಾಮಧಾರಿಯೋ- ನಾಯಕನೋ ಗೊತ್ತಿಲ್ಲ- ಬಿಳಿಯಾದ ಚೂಟಿಯಾದ ೨೦-೨೨ ವರ್ಷದ ಕೃಷ್ಣ ಅಂತ ಒಬ್ಬ ಹುಡುಗ ಇದ್ದ. ಅಲ್ಲಿಂದ ಬಂದ ಮೇಲೆ ಈಗ ಇಲ್ಲಿ ಅದೇ ಹೆಸರಿನ ಕೃಷ್ಣಮೂರ್ತಿ ಎಂಬವರೊಬ್ಬರು ಕೃಷ್ಣ ವರ್ಣದ ವ್ಯಕ್ತಿ- ಅವರ ಬೆಂಗಾವಲಾಗಿದ್ದರು. ವಿ.ಸೀ.ಯವರ ಶುಶ್ರೂಷೆ ಈಗ ಅವರದಾಗಿತ್ತು.

ಉಡುಪರ ಪರಿಚಯ ಹೇಳಿದೆ. ಕಿವಿ, ಪ್ರಯೋಜನವಿಲ್ಲಾಂತ ಗೊತ್ತಾಯಿತು.

ನಮ್ಮ ಮಾತು ಅವರಿಗೆಷ್ಟು ಕೇಳಿತೋ, ತಿಳಿಯದು. ತಮ್ಮದೇ ಮಾತಾಡುತ್ತಾ ಹೋದರು. ಅದನ್ನು ಕೇಳುತ್ತಾ ನಮ್ಮ ಕಣ್ಣಲ್ಲಿ ನೀರಿಳಿಯುತ್ತಿತ್ತು. ವಿ. ಎಂ. ಇನಾಂದಾರ್ ಸಂಪಾದಿಸಿದ 'ವಿ. ಸೀ. ೭೫'ರ ಪ್ರತಿ ತೋರಿಸಿದರು. ಅದರಲ್ಲಿ ಅವರ ಮಡದಿಯ ಚಿತ್ರ ಕಾಣುತ್ತಲೇ ಕಣ್ಣು ಹನಿಗೂಡಿತು. ಆಕೆಯನ್ನು ಮುಂಚಿತವಾಗಿ ಕಳುಹಿಸಿಕೊಟ್ಟು, ತಾವು ಇನ್ನೂ ಹಣ್ಣಾಗುತ್ತಾ ಕೊನೆಯ ದಿನ ಎದುರು ನೋಡುತ್ತಿದ್ದ ಇವರನ್ನು- ಈ ಕಣ್ಣುಗಳನ್ನು ನೋಡಿ ನಮ್ಮ ಕರುಳು ಕಿತ್ತು ಬರುತ್ತಿತ್ತು.

"ಇವರಿಗೇನು ಪ್ರಾಮೀಸ್ ಮಾಡಿ ಕರ್‍ಕೊಂ-ಬಂದಿದೀಯ?" ಎಂದು ಉಡುಪರನ್ನು ನಿರ್ದೇಶಿಸಿ- ನನ್ನ ಕೇಳಿದರು.

ಒಂದು ಕಾಗದದ ಚೂರು ತೆಗೆದುಕೊಂಡು ಅದರಲ್ಲಿ, "ನಿಮ್ಮ ಗುರುಗಳಾದ ಎನ್. ಎಸ್.

ಸುಬ್ಬರಾಯರ ಕುರಿತು, 'ಮಹನೀಯರು' ನಲ್ಲಿ ಹೇಳಿರುವುದಕ್ಕಿಂತ ಇನ್ನೂ ಏನಾದರೂ ತಿಳಿಸುತ್ತೀರಾ?" ಎಂದು ಬರೆದು ಅವರ ಕೈಗೆ ಕೊಟ್ಟೆ.

ಕ್ಷೀಣವಾದ ಬೆರಳುಗಳಿಂದ ಅದನ್ನು ತೆಗೆದು ಕೊಂಡು ಬಿಡಿಸಿ ಬರಿಗಣ್ಣಿನಿಂದಲೇ ನೋಡ ಹೋದರು. ತಕ್ಷಣ ಅದನ್ನು ಹಾಸಿಗೆಯ ಮೇಲೆ ಹಾಕಿ ನನ್ನನ್ನೊಮ್ಮೆ, ಉಡುಪರನ್ನೊಮ್ಮೆ ನೋಡಿದರು. ನನ್ನೆಡೆಗೆ ತಿರುಗಿ– "ಹಾಗಾದರೆ ನಾನು ಕಿವ್ಡ ಅಂತ ನಿಂಗೂ ಗೊತ್ತಾಗಿ ಹೋಯಿತೆ?" ಎಂದರು. ನನ್ನ ದುಃಖದ ಕಟ್ಟೆ ಒಡೆದು ಹೋಯಿತು.

ಉಡುಪರು ನೀರವವಾಗಿ ಕಣ್ಣೀರು ಹಾಕು ತ್ತಿದ್ದರು; ಅದು ಅವರಿಗೆ ತಿಳಿಯಿತೋ ಏನೋ...

"ನಿನಗೆ ಗೊತ್ತೇ... ನಾನು ಕೇಂಬ್ರಿಜ್‌ಗೆ ಹೋದದ್ದು?" ಅಂತ ಬೇರೆ ಮಾತು ತೆಗೆ ದರು. ಕೇಂಬ್ರಿಜ್ಜೆ? ನನಗೆ ಆಶ್ಚರ್ಯವಾಯಿತು.

ಅಲ್ಲಿಗೆ ತಾವು ಹೋಗಿದ್ದು, ಸಂದರ್ಶಿಸಿದ ಕಾಲೇಜುಗಳು, ಭೇಟಿಯಾದ ಮಹನೀಯರು– ಈ ಎಲ್ಲಾ ವಿವರ ಹೇಳಿದರು.

ಕೇಂಬ್ರಿಜ್ ದರ್ಶನ ಅವರ ಬಹು ದಿನಗಳ ಒಂದು ಮಹತ್ತರ ಬಯಕೆ. ಎನ್. ಎಸ್. ಸುಬ್ಬರಾಯರ ಕಾಲದಲ್ಲೇ ಈ ಬಗ್ಗೆ ಅವರು ಒಂದು ದೊಡ್ಡ ಆಸೆ ಇರಿಸಿಕೊಂಡು ಅಲ್ಲಿ ನಿರಾಶ ರಾದ ಒಂದು ಧ್ವನಿಯನ್ನು ಅವರ 'ಮಹ ನೀಯರು' (ಪುಟ ೨೦)ವಲ್ಲಿ ಕಾಣಬಹುದು.

ಈಗ ಎಂದಿನಂತೆ ಕೊನೆಯ ದಿನಗಳಲ್ಲಿ ಅವರ ಈ ಆಸೆಯೂ ಪೂರೈಸಿತು. ೧೯೭೪ರ ರಲ್ಲಿ ಅಲ್ಲಿಗೆ ಹೋದಾಗ ಅಲ್ಲಿನ ಹವಾಮಾನ ವೈಪರೀತ್ಯಗಳಿಂದ ಆರೋಗ್ಯ ಕೆಟ್ಟು ಒಂದು ಆಸ್ಪತ್ರೆಗೆ ದಾಖಲಾದರಂತೆ. ಅಲ್ಲಿಯ ಅಚ್ಚು ಕಟ್ಟು, ಶುಭ್ರತೆ–ವೈದ್ಯರು–ದಾದಿಯರ ಕರ್ತವ್ಯ ತತ್ಪರತೆ, ಪರಸ್ಪರ ಸಹಕಾರ ಇವೆಲ್ಲಾ ಹೇಳಿ ದರು. ತಮ್ಮನ್ನು ನೋಡಿಕೊಂಡು ಶುಶ್ರೂಷೆ ಮಾಡಿದ ಓರ್ವ ಯುವತಿ ದಾದಿಯ ಕಥೆ ಹೇಳಿ ಆಕೆಯ ಚಿತ್ರ ತೋರಿಸಿದರು.

ಅಲ್ಲಿಯ ಜನ ಸ್ನಾನಕ್ಕಿಳಿವಾಗ birth day suite. ವಿ.ಸೀ.ಯವರಿಗೆ ಸ್ನಾನ ಮಾಡಿಸುವಾಗ ಅದೇ ಕಷ್ಟ ಪ್ರಾಪ್ತಿಯಾಯಿತು.

ಆಕೆಯೇನೋ– "ನೀವು ನನ್ನ ತಾತ ಇದ್ದ ಹಾಗೆ. ಯಾವುದೇ ಸಂಕೋಚ ಬೇಡ, ಬಟ್ಟೆ ಯನ್ನೆಲ್ಲಾ ಕಳಚಿಬಿಡಿ. ನಿಮಗೆ ಸ್ಪಾಂಜ್ ಬಾತ್ ಮಾತ್ರ ಮಾಡಿಸುತ್ತೇನೆ" ಎನ್ನುತ್ತಾ ಅವರ ಎಲ್ಲಾ ಬಟ್ಟೆಗಳನ್ನು ಸಲೀಸಾಗಿ ಕಳಚಿ ಹಾಕಿ ದಳು! ವಿ. ಸೀ. ಯವರಿಗೆ ಪೀಕಲಾಟಕ್ಕಿಟ್ಟು ಕೊಂಡಿತು ಆಗ ಹಟ ಹಿಡಿದು ಕೌಪೀನ ಮಾತ್ರ ಉಳಿಸಿಕೊಂಡರು. ಆಕೆ ಕನಿಕರವಿಟ್ಟು ಅದಕ್ಕೆ ರಿಯಾಯಿತಿ ತೋರಿಸಿ ಜನಿವಾರಕ್ಕೆ ಕೈಹಾಕಬೇಕೆ!

ಈಗ ಏನು ಮಾಡಬೇಕು? ವಿಜಾತೀಯ ಳಾದ ಆಕೆಗೆ ಈ ಜನಿವಾರ ಕುರಿತು ಏನು ವ್ಯಾಖ್ಯೆ ಹೇಳಬೇಕು?

ಆಕೆ. "ಇದು ಏನು?" ಎನ್ನಲು ವಿ. ಸೀ. ಕೊಂಚ ಅತ್ತಿತ್ತ ನೋಡಿ ಆಕೆಯ ಕೊರಳೆಡೆ ದಿಟ್ಟಿಸಿದರು. ಅಲ್ಲಿ ಬಂಗಾರದ ಒಂದು ಪುಟ್ಟ ಕ್ರಾಸ್ ನೇತಾಡುತ್ತಿತ್ತು. ಬದುಕಿದರು. ಅದನ್ನಾಕೆಗೆ ತೋರಿಸುತ್ತಾ,

"ನಿನಗೆ ಈ ಕ್ರಾಸ್ ಹೇಗೋ ನನಗೆ ಇದು," ಎಂದರು.

× × ×

"ಸರ್ ಎಂ.ವಿ. ಯವರನ್ನು ಕುರಿತು ಬರೆದ ನಿಮ್ಮ ಕೃತಿ ಏನಾಯಿತು? ಎಲ್ಲಿಗೆ ಬಂತು?" ಅಂತ ಕೇಳಿದೆ.

"ಗೊತ್ತಿಲ್ವೆ ನಿಂಗೆ?... ಅದು ಪಬ್ಲಿಷ್ ಆಯಿತು. ಈ ದೇಶ ಎಲ್ಲಾದರಲ್ಲೂ ಹೀಗೇ ಅಂತ ಕಾಣುತ್ತೆ. ನನಗೊಂದು ಹತ್ತು ಕಾಪಿ? ಊಹುಂ. ಒಂದು ಕಾಗದವೂ ಇಲ್ಲ. ಇದೊಂದು ಕಾಪಿ ಬಂದಿದೆ ನೋಡು." ಎನ್ನುತ್ತಾ ಪಕ್ಕದ ಷೆಲ್ಫ್‌ನಿಂದ ಅದನ್ನು ತೆಗೆದು ತೋರಿಸಿದರು. ನನ್ನ ಆಸೆ ತುಂಬಿದ ಕಣ್ಣುಗಳನ್ನು ಗಮನಿಸಿ.

"ನನ್ನ ಹತ್ತಿರ ಇರೋದು ಇದೊಂದೇ ಅಪ್ಪಾ! ಇಲ್ದೆ ಹೋಗಿದ್ದರೆ ನಿನಗೂ ಒಂದು ಕೊಡ್ತಿದ್ದೆ," ಎಂದರು. ನಾನು ತಲೆ ತಗ್ಗಿಸಿದೆ. ಅವರಿಗೇನನ್ನಿಸಿತೋ ಏನೋ!

"ಪೆನ್ನು ಕೊಡ್ತೀಯಾ?" ಎಂದರು. ಯಾರೋ ಕೇಳ್ತಿದ್ದಾರೆ ಅಂತ ಪೆನ್ನಿನ ಮುಚ್ಚಳ ತೆರೆದು ಅವರ ಕೈಲಿರಿಸಿದೆ.

ಆ ಪುಸ್ತಕದ ಮುಖ ಪುಟ ತಿರುವಿ ಹಾಕಿ, "ಇನ್ನೆಷ್ಟು ದಿನ ಇರ್ತೀನಿ? ಆ ಮೇಲೆ ಇದು ಯಾರ ಕೈಗೆ ಹೋಗುತ್ತೋ? ಏನಾಗುತ್ತೋ! ನಿಗುತ ಈ ಪುಸ್ತಕಕ್ಕೆ ಯಾರು ಬಾಧ್ಯರು?" ಎಂದವರೆ ಒಳ ಪುಟದ ಮೇಲೆ ನಡುಗುವ ಕೈಯಿಂದ, 'ಶ್ರೀ ಖಜಾನೆಯವರಿಗೆ, ವಿಶ್ವಾಸ ಪೂರ್ವಕ ವಿ. ಸೀತಾರಾಮಯ್ಯ' ಅಂತ ಹಸ್ತಾಕ್ಷರ ಹಾಕಿ ಕೊಟ್ಟೇಬಿಟ್ಟರು.

ಪ್ರೊ. ಹಿರಿಯಣ್ಣನವರು ಬರೆದ 'Art Experience' ಎಂಬ ಇನ್ನೊಂದು ಪುಸ್ತಕ ಉಡುಪರಿಗೆ ನಾವಿಬ್ಬರೂ ಸಾಷ್ಟಾಂಗ ನಮಸ್ಕರಿಸಿದೆವು.

ಹೊರ ಬಂದರೆ ಅವರ ಇತ್ತೀಚಿನ ನಿರ್ವಾಹಕ, ರಕ್ಷಕ, ಕೃಷ್ಣ (ಮೂರ್ತಿ) ಎದುರಾದರು. ಅವರನ್ನು ಸಮೀಪಿಸಿ, "ಗುರುಗಳು" ಎಂದು ಗದ್ಗದಿಸಿದೆ. "ಹೌದು, ತುಂಬಾ ಸೋತಿದ್ದಾರೆ ಸಾರ್... ಇನ್ನು ಬಹಳ ದಿನ ಇರಲಾರರು," ಎಂದರವರು. ಅದನ್ನು ಕೇಳಿಯೇ ಬೆಚ್ಚಿ, "ನಾನು ನನ್ನ ವಿಳಾಸವಿರುವ ಕಾರ್ಡೊಂದನ್ನು ಕೊಡುವೆ. 'ಹಾಗೇನಾದರೂ' ಆದರೆ ದಯವಿಟ್ಟು ಬರೆಯಿರಿ," ಎಂದು ಕೇಳಿಕೊಂಡೆ.

ಅಲ್ಲಿಂದ ಭದ್ರಾವತಿಗೆ ಹಿಂದಿರುಗುವ ಮುನ್ನವೇ ನನಗೆ 'ಸ್ಕ್ರೀನಿಂಗ್‌ಗೆ ಬರಬೇಕು,' ಎಂದು ತಂತಿ! ಮಾಡಿಕೊಂಡಿದ್ದ ಒಪ್ಪಂದ, ಆಡಿದ್ದ ಮಾತೆಲ್ಲಾ ಗಾಳಿಯಲ್ಲಿ ತೂರಿಹೋಗಿತ್ತು. ೧-೪-೭೭ರಿಂದ ಕಾಲೇಜನ್ನು ವಹಿಸಿಕೊಂಡಿದ್ದರೂ ಕಾರಖಾನೆಯವರು ಸ್ಕ್ರೀನಿಂಗ್ ನಡೆಸಿದ್ದು ಮೇ ೧೦ ರಂದು. ಅವರಲ್ಲಿ, 'This English lecturer is unfit to teach and English is incapable of expression' ಎಂದು ತೀರ್ಪು ಬಂದು ಜೂನ್ ೧ ರಂದು ನನ್ನನ್ನು ಬೀದಿಪಾಲು ಮಾಡಲಾಯಿತು.

ಮರಣ ಶಿಕ್ಷೆ ನನ್ನ ಕೈ ಸೇರಿದಾಗ ಮುದದಿಯಾಗಲಿ ಎಂಟು-ಹತ್ತು ವರ್ಷದ ಮಗ ಮಗಳಾಗಲೀ ಬೀದಿ ಪಾಲಾಗುತ್ತಾರೆಂಬ ದುಃಖಕ್ಕಿಂತ, "ವಿ.ಸೀ. ಯವರಿಗೆ ಗೊತ್ತಾದರೆ ಅವರೇನೆಂದಾರು?" ಎಂಬ ದುಃಖ.

ನನ್ನನ್ನೂ ಮತ್ತೊಬ್ಬ ಗ್ರಂಥಪಾಲನನ್ನೂ ಕೆಲ ದಿನ ತೆಗೆದು ಕಾಲೇಜು ವಹಿಸಿಕೊಡಲು ಕಾಗದಪತ್ರಗಳು ಓಡಾಡಿದವು. ಕಮಿಟಿಯವರು ವಿರೋಧಿಸಿ ಬರೆದರೂ ಪ್ರಯೋಜನವಾಗಲಿಲ್ಲ. ಕಷ್ಟಪಡುತ್ತಾ ೧೯೭೮ರವರೆಗೂ ಭದ್ರಾವತಿಯಲ್ಲೇ ಕಳೆದೆ. ವಿ.ಸೀ. ಸ್ವಪ್ನದಲ್ಲಿ ಸೂಚಿಸಿದ್ದು ನಿಜವಾಯಿತು.

× × ×

ಮದುವೆಗೆ ಮುಂಚೆಯೇ ಅವಿವೇಕ ಮಾಡಿಕೊಂಡ ಮಗಳು ತಂದೆಗೆ ಮುಖ ತೋರಿಸಲಾರದೆ ಹೇಗೆ ಹೊಳೆಯೋ ಬಾವಿಯೋ ನೋಡಿಕೊಳ್ಳುತ್ತಾಳೋ ನನಗೂ ಹಾಗೇ ಎನ್ನಿಸಿ ವಿ.ಸೀ. ಯವರಿಗೆ ಮುಖತೋರಿಸಲಾರದೆಅಡಗಿದೆ.

"ಲಾಗಾ ಚುನರಿಮೆ ದಾಗ್ ಛುಪಾವೂಂ
ಕೈಸೆ?
ಬಾಬುಲ್‌ಸೆ ನಜರೇ ಮಿಲಾವೂಂ ಕೈಸೇ?
ಘರ್ ಜಾವೂ ಕೈಸೆ?"

ಎಂದು ಕಬೀರನನ್ನು ಭೈರವಿ ರಾಗದಲ್ಲಿ ಗೊಣಗುತ್ತಾ ಕಷ್ಟ ಪಡುತ್ತಾ ಕಾಲಹರಣ ಮಾಡುತ್ತಿದ್ದೆ. ವಿ.ಸೀ. ಯವರನ್ನು ಕಾಣಲು ಹೋಗಲೇ ಇಲ್ಲ.

× × ×

ಅವರಿಗೆ ತಿಳಿಯಿತು... ನನ್ನ ಮಿತ್ರ ಎಂ. ಎಸ್. ಭೈರಪ್ಪ ಅವರಿಗೆ ದೂರದ ಅನುಬಂಧಿಗಳು. ಅವರ ಬಂಧುಗಳ ಮನೆಯಲ್ಲಿ ನಡೆದ ಒಂದು ಮದುವೆಗೆ ವಿ.ಸೀ. ಹೋಗಿದ್ದರು. ಭೈರಪ್ಪ ಅವರನ್ನು ವಂದಿಸಲು ಹೋದಾಗ ವಿ.ಸೀ.ಗೆ ಗುರುತು ಸಿಕ್ಕಿ ನನ್ನ ವಿಚಾರ ಕೇಳಿದರಂತೆ. ತಕ್ಷಣ, "ಹೀಗಾಯಿತಂತೆ ಅವನಿಗೆ! ಎಂಥ ಕಾನೂನಿದು? ಖಾಯಂ ಆದ ಉಪನ್ಯಾಸಕನೊಬ್ಬನನ್ನು ಸರಕಾರ ಅಥವಾ ವಿಶ್ವವಿದ್ಯಾಲಯದ ಪರವಾನಿಗೆಯನ್ನು ಮೊದಲೇ

ಪಡೆಯದೆ ವಜಾ ಮಾಡುವುದು ಹೇಗೆ ಸಾಧ್ಯ? ಬಡುಕೊಂಡೆ ಪೊನ್ನಾವರ ಬಡಬೇಡಾಂತ... ಏನು ಕಷ್ಟ ಬಂತಪ್ಪ ಅವನಿಗೆ... ಈಗ ಎಲ್ಲಿ ದಾನೆ?" ಎಂದೆಲ್ಲಾ ಮರುಗಿದರಂತೆ. ಬೆಂಗಳೂರಲ್ಲೇ ಇದ್ದು ಸ್ಮಶಾನ ಕಾಯುತ್ತಿದ್ದಾನೆ ಅಂತ ಮಾತ್ರ ಅವರಿಗೆ ಗೊತ್ತಿರಲಿಲ್ಲ.

× × ×

ಈ ಆರೇಳು ವರ್ಷಗಳಲ್ಲಿ ವಿ.ಸೀ. ಅನೇಕ ಕಡೆ ಭಾಷಣಕ್ಕೆ ಹೋಗಿದ್ದರು. ನನ್ನೂರವರು ಅವರನ್ನು ಬರಮಾಡಿಕೊಂಡು ಸನ್ಮಾನಿಸಿ ಐದು ಸಹಸ್ರ ಹಮ್ಮಿಣಿ ಅರ್ಪಿಸಿದ್ದರು.

ನಂತರದ ವರ್ಷಗಳಲ್ಲಿ, "ವಿ.ಸೀ ಯವರ ಕಣ್ಣು, ಕಿವಿ ಹೋಗಿವೆ... ದಿನಗಳು ಯಾತನಾಮಯವಾಗಿವೆ. ಮನೆ ಹತ್ತಿರ ಧೂಳು ಕಾರುವ ಸಿಮೆಂಟ್ ಡೀಪೋ, ...ಕಿವಿ ಒಡೆಯುವಂತೆ ಲಾರಿಗಳ ಸದ್ದು... ಗ್ಯಾರೇಜುಗಳವರ ಕೊಟ ಕೊಟ. ... ಕುಸಿಯುತ್ತಿರುವ ಅವರ ಮನೆ!!" ಪತ್ರಿಕೆಗಳಲ್ಲಿ ಬರೀ ಇವೇ ಸುದ್ದಿ ಓದಿ, ಓದಿ ಜೀವ ಹಿಂಡಿ ಹೋಗುತ್ತಿತ್ತು.

× × ×

ನನ್ನ ಅಲೆದಾಟದಲ್ಲಿ ಸಾಗರ್ ಮೆಜೆಸ್ಟಿಕ್ ಪ್ರದೇಶದಲ್ಲಿ ಆಗಾಗ ವಿ.ಸೀ.ಯವರ ಮಗ ಸತ್ಯನಾರಾಯಣ ಸಿಕ್ಕುತ್ತಿದ್ದರು. 'ಇವರು ಅಪ್ಪನ ಜೊತೆ ಪೊನ್ನಾವರದಲ್ಲಿದ್ದವರು' ಎಂದಷ್ಟೇ ಅವರಿಗೆ ಗುರುತು. ನಾನೇ ಖಜಾನೆ ಅಂತ ಅವರಿಗೆ ಗೊತ್ತಿಲ್ಲದಿರಲೂಬಹುದು.

"ಅಪ್ಪ ಹೇಗಿದ್ದಾರೆ?" ಎಂದರೆ,

"ಇದ್ದಾರೆ... ಕಣ್ಣು, ಕಿವಿ... ಎರಡೂ ಇಲ್ಲ... ಯಾರಾದರೂ ಬಂದರೆ 'ಓಹೋಹೋ. ಬಂದಿರಾ... ಬನ್ನಿ ಬನ್ನಿ' ಎನ್ನುತ್ತಾರೆ... ಕೊಂಚ ಹೊತ್ತಿಲ್ಲೆ... 'ಇಲ್ಲ... ಇಲ್ಲ... ಮರೆತ್ಹೋಯ್ತು' ಎನ್ನುತ್ತಾ ತಮಗೆ ತಾವೆ ಮಾತಾಡಿಕೊಳ್ಳುತ್ತಾರೆ ..."

"ನಂದೊಂದು ಅವಿವೇಕ ಆಗಿದೆ... ಅವರಿಗೆ ಮುಖ ತೋರಿಸದ ಹಾಗಾಗಿದೆ! ಬರಬೇಕು ಒಂದು ಸಲ ಬರ್ತೀನಿ... ನನ್ನ ನಮಸ್ಕಾರ ಹೇಳಿ," ಎಂದು ತಲೆ ತಪ್ಪಿಸಿಕೊಳ್ಳುತ್ತಿದ್ದೆ.

ಎಲ್ಲಾ ಮರೆವಂತೆ! ಮುಗಿಯಿತು...ಎಲ್ಲಾ ಮುಗಿಯಿತು. ನಾನು ಹೋದರೆ ಗುರುತು ಸಿಕ್ಕದೋ ಏನೋ... ಸಿಕ್ಕಿದರೆ ಅವರಿಗೆ ಇನ್ನಷ್ಟು ದುಃಖ... ಏನು ಮಾಡಲಿ ಎಂದು ದಿನಗಟ್ಟಲೆ ದುಃಖಿಸಿದೆ.

ಹೇಗಾದರಾಗಲಿ, ಲಕ್ಷದೋಷ ಗುರುರ್ಹಂತಿ... ಗುರುತು ಸಿಕ್ಕಲಿ ಬಿಡಲಿ– ಕಿವಿ ಕೇಳಿಸಲಿ ಬಿಡಲಿ, ಒಮ್ಮೆ ಅವರಲ್ಲಿಗೆ ಹೋಗಿ, 'ಅಪರಾಧ ಸಹಸ್ರಾಣಿ ಕ್ರೀಯುತಿ ಅಹರ್ನಿಶಂ ಮಮ' ಹೇಳಿ ಪಾದಸ್ಪರ್ಶ ಮಾಡಿ ಕ್ಷಮೆ ಬೇಡಿ ಬಂದುಬಿಡಲೆ? ಎಂದು ಅವರ ಮನೆಯ ವರೆಗೂ ಕಳ್ಳನಂತೆ ಕದ್ದು ಹೋಗಿ ಮತ್ತೆ ಹಿಂದಕ್ಕೆ ಬಂದದ್ದೂ ಉಂಟು.

ಗೆಲುವು ನನ್ನದಾದರೆ, ಒಂದು ಬೆಳ್ಳಿಯ ತಟ್ಟೆಯಲ್ಲಿ ಅವರಿಗೊಂದು ಜೊತೆ ೫೦೦x೮ ಮಲ್ ಪಂಚೆ, ಜುಬ್ಬಕ್ಕೆ ಸಿಲ್ಕ್ ಬಟ್ಟೆ, ರೇಶ್ಮೆಯ ಉತ್ತರೀಯ, ಫಲತಾಂಬೂಲ– ಒಂದು ದೊಡ್ಡ ಗುಲಾಬಿ ಹೂ, ಒಂದು ಶ್ರೀಗಂಧದ ವಾಕಿಂಗ್ ಸ್ಟಿಕ್. ಇಷ್ಟನ್ನು ಅರ್ಪಿಸಿ. ನಮಸ್ಕರಿಸಿ,

"ನೀವು ಕಂಡರಿಸಿ ನಿಲ್ಲಿಸಿದ ಕಾಡು ಕಲ್ಲು ಇದು. ಈ ಅಗ್ನಿ ದಿವ್ಯದಿಂದ ಪಾರಾಗಿ ಬಂದಿದ್ದೇನೆ." ಎಂದು ಹೇಳಿ ಪಾದಸ್ಪರ್ಶಮಾಡಿ ಎರಡೂ ಕಿವಿ ಹಿಡಿದುಕೊಂಡು, ಪ್ರವರ ಸಹಿತವಾಗಿ ಸಾಷ್ಟಾಂಗ ಮಾಡಿ... ಎಂದೇನೇನೋ ಕನಸು ಕಂಡೆ... ಆ ದಿನ ಬರಲೇ ಇಲ್ಲ!

× × ×

೧೯೮೦ರ ಸಪ್ಟೆಂಬರ್ ಒಂದರಂದು ವಿಲ್ಸನ್ ಗಾರ್ಡನ್ ವಿದ್ಯುತ್ ಚಿತಾಗಾರದಲ್ಲಿ ನನ್ನೋರ್ವ ಹಿರಿಯ ಮಿತ್ರರ ಶವಸಂಸ್ಕಾರ. ಅಲ್ಲಿಗೆ ಹೋಗಿದ್ದೆ. ಅಲ್ಲಿ ನಮ್ಮಂತೆ ಇನ್ನೊಂದು ಶವ ಕಾಯುತ್ತಿತ್ತು. ಎರಡು ಒಳಗೆ ಆಗಲೇ ಬೇಯುತ್ತಿದ್ದವು.

ಅಲ್ಲೊಂದು ಗುಂಪಿನಲ್ಲಿ ವಿ.ಸೀ.ಯವರ ಮಗ ಕಾಣಿಸಿಕೊಂಡರು. ಎದೆ ಧಸಕ್ ಎಂದಿತು. ಅವರು ನನ್ನ ಗುರುತು ಹಿಡಿದು ಹತ್ತಿರ ಬಂದೂ ಆಯಿತು. ನನಗೆ ಮಾತು

ನನ್ನ ನಾಲಿಗೆ ಏಳಲಿಲ್ಲ. ಅವರೇ ನಗುತ್ತಾ, "ಯಾರೋ ನನ್ನ ಅನುಬಂಧಿಗಳು," ಎಂದು ನನ್ನ ಗಾಬರಿ ನಿವಾರಿಸಿದರು. ಜೀವ ಹಿಡಿದು ಮನೆಗೆ ಬಂದೆ.

ಮತ್ತೊಂದು ವರ್ಷ ಉರುಳಿತು. ನಾನು ಆ ತೀರ್ಪಿನ ವಿರುದ್ಧ ಮತ್ತೆರಡು ರಿಟ್ ಅರ್ಜಿ ಸಲ್ಲಿಸಿ ಡಿವಿಜನಲ್ ಬೆಂಚ್ ಮುಂದೆ ಹೋರಾಟಕ್ಕಿಳಿದಿದ್ದೆ. ಕೊನೆ ಮೊದಲಿಲ್ಲದ ಓಡಾಟ, ಕಷ್ಟ, ದೈಹಿಕ ಮತ್ತು ಮಾನಸಿಕ ಶ್ರಮ.

ಪುನಃ ಸಪ್ಟೆಂಬರ್ ಬಂದಿತು. ೨೦ನೆಯ ತಾರೀಖಿನಂದು ಬಸವನ ಗುಡಿಯಿಂದ ರಂಗ ರಾವ್ ರಸ್ತೆಯಲ್ಲಿ ಈ ಕಡೆ ಸೈಕಲ್ ತುಳಿಯುತ್ತಾ ೧೨ರ ಮಧ್ಯಾಹ್ನದ ಉರಿಬಿಸಿಲಲ್ಲಿ ಬರುತ್ತಿದ್ದೆ. ಚಾಮರಾಜಪೇಟೆ ೫ನೇ ರಸ್ತೆ ದಾಟಿದರೆ ಮುಂದೆ ವಿ.ಸೀ.ಯವರ ಮನೆ-ಪಕ್ಕದಲ್ಲೇ ಹಾದು ಹೋಗುವ ಮುಖ್ಯ ರಸ್ತೆ. ಈಗವರು ಎದುರಿಗೆ ಅಕಸ್ಮಾತ್ ಸಿಕ್ಕಿದರೆ... ಎಂದೊಂದು ಯೋಚನೆ ಬಂತು. ಹಾಗೆಂದು ಕೊಳ್ಳುವುದರೊಳಗಾಗಿ ಅವರು ಎದುರಿನಿಂದಲೇ ಬರುತ್ತಿರಬೇಕೆ?

ಮಂಗಮಾಯವಾಗಿ ಬಿಡೋಣ ಎನ್ನುವು-ದಕ್ಕೂ ಅವಕಾಶ ಕೊಡದಷ್ಟು ಹತ್ತಿರ!

ಮಾಸಿದ ಒಂದು ಷರಟು. ಮುಂಡು ಪಂಚೆ. (ಅವರೆಂದೂ ಹಾಗೆ ಉಟ್ಟವರಲ್ಲ.) ತಲೆಯ ಮೇಲೆ ಬಿಸಿಲಿನ ರಕ್ಷಣೆಗೊಂದು ಟವೆಲ್ಲು. ಕೈಲಿ ಒಂದು ಅಲ್ಯೂಮಿನಿಯಂ ವಾಕಿಂಗ್ ಸ್ಟಿಕ್. ಪಕ್ಕದಲ್ಲಿ ಅವರ ಗೈಡು ಕೃಷ್ಣಮೂರ್ತಿ ತಳ್ಳಿಕೊಂಡು ಬರುತ್ತಿರುವ ಸೈಕಲ್ ಸೀಟಿನ ಮೇಲಿದೆ ಒಂದು ಕೈ. ಕನ್ನಡಕ ಇಲ್ಲ.

ಸಿಕ್ಕಿ ಹಾಕಿಕೊಂಡೇ ಬಿಟ್ಟೆ! ತಕ್ಷಣ ಅವರು "ಕೃಷ್ಣ! ಸೈಕಲ್ ಮೇಲೆ ಬರ್ತಿದಾನೆ ನೋಡು ಅಲ್ಲಿ... ಇಳಿಸು ಅವನನ್ನು...ಲೇ... ಇಳಿಯೋ ಕೆಳಗೆ... ಕೆಳಗಿಳೀಽಽ..." ಅಂತ ಸ್ವಲ್ಪ ಜೋರಾಗಿಯೇ ಗದರಿಸಿ ಇಳಿಸಿಬಿಟ್ಟರು ನನ್ನನ್ನು!

ರಸ್ತೆಯ ಪಕ್ಕದಲ್ಲಿ ಸೈಕಲ್ ನಿಲ್ಲಿಸೋದ ರಲ್ಲಿ ನನ್ನ ಕಣ್ಣು ತುಂಬಿ ಬಂದವು. ಹಾಗೇ ಕೈ ಜೋಡಿಸಿದೆ.

ಕನ್ನಡಕವಿಲ್ಲದ ನಿಸ್ತೇಜವಾದ ಆ ಕಣ್ಣು ಗಳು ಈ ಪಾಪಿಯನ್ನು ಗುರ್ತಿಸಿದ್ದವು. ಸ್ಮರಣೆ ಹೋಗಿದೆ ಎಂದು ಪ್ರಚಾರಗೊಂಡಿದ್ದ ಅವರ ಸ್ಮರಣೆ ಇದಕ್ಕಿದ್ದಂತೆ ತಳ ಮೇಲಾಗಿ ಈ ಅಪ ರಾಧಿಯ ಚಿತ್ರ ಅದರ ಮೇಲೆ ಬಂದಿತ್ತು.

ತಲೆಯ ಮೇಲೆ ಕೈ ಇರಿಸಿದರು. ಅದನ್ನು ಗಟ್ಟಿಯಾಗಿ ಹಿಡಿದುಕೊಂಡೆ. "ಖಜಾನೆ ಅಲ್ವೆ?... ಏನಿದು... ಎಲ್ಲಿದೀಯಪ್ಪ! ಇಲ್ಲೇ ಇದೀಯಂತೆ. ಹೌದೆ?... ನಾನಿನ್ನು ಬದುಕಿ ದೀನಿ ಕಣೋ... ಬದುಕಿದೀನಿ!" ಎನ್ನುತ್ತಾ ಗದ್ಗದಿಸಿ ದನಿ ಏರಿಸಿ ಮಾತನಾಡಿದರು. ನಾನು ಅವರ ಪಾದ ಸ್ಪರ್ಶಮಾಡಿ, ಕಣ್ಣೀರು ಉದುರಿಸಿ ನಿಂತೆ. ಮನಸ್ಸು ಮಾತ್ರ, 'ಹೌದು ಗುರು ಗಳೇ... ನೀವು ಬದುಕಿದಿರಿ; ಈ ಪಾಪಿ ಸತ್ತು ಆರು ವರ್ಷಆಯಿತು' ಎನ್ನುತ್ತಾ ಬಿಕ್ಕು ತ್ತಿತ್ತು.

"ಮಾತಾಡಲ್ವೇನೋ... ಯಾಕೆ ಹೀಗೆ ಮಾಡಿದಿ? ನನ್ನ ನೋಡಲೇಬಾರದು ಅಂತ ಮಾಡಿದ್ಯಾ?" ಎನ್ನುತ್ತಾ ಮತ್ತೆ ನನ್ನ ತಲೆ ನೇವರಿಸಿದರು. ನನ್ನ ಅಪರಾಧ ಭಾವನೆಗಳೆಲ್ಲಾ ಕ್ಷಣಮಾತ್ರ ಮಾಯವಾದಂತೆ ಕಂಡವು. "ದೇವರು ಕಾಪಾಡಬೇಕು ನಿನ್ನ..." ಎಂದು ಕೈ ತೆಗೆದರು. ನಡೆದರು. ನಾನಲ್ಲೆ ನಿಂತಿದ್ದೆ ಅವರನ್ನೇ ನೋಡುತ್ತಾ!

ಒಂದಷ್ಟು ದೂರ ಹೋಗಿ, "ಕೃಷ್ಣಾ... ಅವನು ಖಜಾನೆ ತಾನೆ?" ಎಂದು ಕೇಳಿದ್ದು ಕೇಳಿಸಿತು.

ಮತ್ತೆ ಓಡಿದೆ. ಅವರ ನಿರ್ವಾಹಕನನ್ನು ದ್ದೇಶಿಸಿ,

"ಕೃಷ್ಣಾ ನಿಜ ಹೇಳಿ... ಅವರಿಗೆ ನಿಜವಾಗ್ಲೂ ನನ್ನ ಗುರುತು ಸಿಕ್ಕಿದೆಯೋ ಅಥವಾ ಭ್ರಮೇಲಿ ಮಾತಾಡ್ತಿದಾರೋಂತ."

"ಇಲ್ಲ ಸಾರ್. ಅಲ್ಲಿಂದಲೇ ತೋರಿಸಿದರು ನಿಮ್ಮನ್ನು... ಈಗಲೂ ಕೇಳಿದರು..."

ವಿ.ಸೀ. ಈಗ ನಮ್ಮಿಂದ ಸ್ವಲ್ಪ ದೂರ ನಿಂತು ಈ ಯಾವ ಮಾತೂ ತಮಗೆ ಸಂಬಂಧ

ವಿಲ್ಲದವರಂತಿದ್ದರು.

ಅವರಿಬ್ಬರೂ ನಿಧಾನವಾಗಿ ನಡೆದು ನಾಲ್ಕ ನೆಯ ರಸ್ತೆಯಲ್ಲೆಲ್ಲೋ ಮಾಯವಾದರು. ನಾನು ಮೂರನೇ ರಸ್ತೆಯಿಂದ ಬಸ್ ರೂಟಿನಲ್ಲಿ ಅಲೆದಾಡಿ ಕೆಲವು ಹಣ್ಣು ಕೊಂಡು ಅಲ್ಲಿಂದ ಅವರ ಮನೆಗೆ ಹೋದೆ.

ಅವರ ಮಗ, ತಮ್ಮ ಮಗನನ್ನು ತೊಡೆಯ ಮೇಲೆ ಕೂರಿಸಿಕೊಂಡು ಕುರ್ಚಿಯಲ್ಲಿ ಕುಳಿ ತಿದ್ದರು.

"ಬನ್ನಿ... ಅಪ್ಪ ಇಲ್ಲ... ಈಗೆಲ್ಲೋ ಹೊರಗೆ ಹೋದರು."

"ಇಲ್ಲ; ಅವರನ್ನು ಕಂಡೇ ಈ ಕಡೆ ಬಂದೆ... ಅವರು ಹಿಂದಿರುಗಿ ಬಂದ ಮೇಲೆ ಇದನ್ನವರಿಗೆ ಕೊಡುತ್ತೀರಾ?" ಎಂದು ಕೊಟ್ಟು ಹಿಂದಿರು ಗಿದೆ.

× × ×

೧೯೮೩ರ ಜನವರಿ. ನನ್ನ ರಿಟ್ ಅರ್ಜಿಗಳು ವಿಚಾರಣೆಗೆ ಬಂದು ವಜಾ ಆಗಿ ನನ್ನ ಇತಿಶ್ರೀ ಯಾಯಿತು.

೧೯೮೩ರ ಅಗಸ್ಟ್ ತಿಂಗಳಲ್ಲಿ 'ಸುಧಾ' ಓರ್ವ ವೃದ್ಧರು ಪುಸ್ತಕವೊಂದನ್ನು ಓದುತ್ತಿ ರುವ ರಕ್ಷಾಕವಚ ಹೊತ್ತು ಹೊರಬಂತು. ಅದು ವಿ.ಸೀ. ಯವರದೆಂದು ಗುರುತು ಹಿಡಿ ಯುವುದೇ ಕಷ್ಟವಾಯಿತು. ಅಷ್ಟು ಕ್ಷೀಣವಾಗಿ ದುರ್ಬಲರಾಗಿಬಿಟ್ಟಿದ್ದರು.

ಈ ತಿಂಗಳ ಕೊನೆಯಲ್ಲಿ ನನ್ನಲ್ಲಿಗೆ ಶಿವ ಮೊಗ್ಗೆಯಿಂದ ಅಣ್ಣನ ಮಗ ಮುರಳಿ ಬಂದ. ಅವನಿಗೆ ನನ್ನೊಂದಿಗೆ ವಿ.ಸೀ. ಯವರ ದರ್ಶನ ಮಾಡಬೇಕೆಂಬಾಸೆ. ಆದರೆ ಅದಾಗಲಿಲ್ಲ. ಅಂದು ಸಂಜೆ ಅವನೊಂದಿಗೆ ಅವರ ಕುರಿತು ಮಾತಾ ಡುತ್ತಾ, "ಇನ್ನು ಬಹಳ ದಿನ ಎಳೆಯಲಾರದು. ಸದ್ಯದಲ್ಲೇ ಪೇಪರುಗಳಲ್ಲಿ ಅವರ 'ಅಬಿ ಚುಯರಿ' ಬಂದರೆ ಆಶ್ಚರ್ಯವಿಲ್ಲ," ಎಂದು ಎಲ್ಲೋ ನೋಡುತ್ತಾ ಹೇಳಿಬಿಟ್ಟೆ.

ಒಂದೇ ವಾರ!

ಮತ್ತೆ ಸಪ್ಟೆಂಬರ್ ೪... ಅವತ್ತಿಡೀ ಅಲಸ್ಯ. ಭಾನುವಾರ... ದೊಡ್ಡ ಮನಸ್ಸು ಮಾಡಿ ಮಕ್ಕಳು ರೇಡಿಯೋಕ್ಕೆ ವಿರಾಮ ಕೊಟ್ಟು ಎದುರು ಮನೆಯಲ್ಲಿ ಟಿ. ವಿ. ನೋಡು ತ್ತಿದ್ದವು.

ಸಂಜೆ ತ್ಯಾಗರಾಜ ನಗರಕ್ಕೆ ಹೋದೆ. ಹೋಗುವಾಗ ಎದುರಿಗೆ ವಿ.ಸೀ. ಯವರ ಮನೆ ಕಡೆ ತಿರುಗದೆ ರಾಯನ್ ವೃತ್ತದಲ್ಲಿ ಎಡಗಡೆಗೆ ತಿರುಗಿ ಶಂಕರ ಮಠದ ರಸ್ತೆಯಲ್ಲಿ ಹಾದುಹೋದೆ.

ಅಲ್ಲಿ ೭-೩೦ರಲ್ಲಿ ತಿಳಿಯಿತು.

ವಿ.ಸೀ. ಬೆಳಿಗ್ಗೆ ೧೦-೨೦ರ ಸುಮಾರಲ್ಲಿ ಕೊನೆಯುಸಿರೆಳೆದಿದ್ದರು. ಸುದ್ದಿ ಕೇಳಿದ ಕೂಡಲೇ ನನ್ನ ಹೃದಯ ಒಂದಷ್ಟು ಹೊತ್ತು ಡವ ಗುಡಲೇ ಇಲ್ಲ. ಸೈಕಲ್ ಏರಿ ವಿದ್ಯುತ್ ವೇಗ ದಿಂದ ಚಾಮರಾಜಪೇಟೆಗೆ ಬಂದೆ. ಎದೆ ಬಡಿದುಕೊಳ್ಳುತ್ತಿತ್ತು... ಕೈಕಾಲಿನ ತ್ರಾಣವೇ ಕ್ಷೀಣವಾಗುತ್ತಿತ್ತು. ಸೈಕಲ್ ಅಲ್ಲಿ ನಿಲ್ಲಿಸಿ ಸೂಕ್ಷ್ಮವಾಗಿ ಪರೀಕ್ಷಿಸಿದೆ... ಫೂಟ್‌ಪಾತ್ ಪಕ್ಕದಲ್ಲಿ ಬೆಳಿಗ್ಗೆ ಸ್ಥಾಪಿಸಿ ಆರಿಸಿದ್ದ ಕೊಳ್ಳಿಯ ತುಂಡುಗಳು ಬಿದ್ದಿದ್ದವು.

ನಿಧಾನವಾಗಿ ಹೆಜ್ಜೆ ಇಡುತ್ತಾ ಕಾಂಪೌಂಡ್ ದಾಟಿ ಒಳಗೆ ಕಾಲಿರಿಸಿದೆ. ಹೊರಗೆ ಕತ್ತಲೆ, ಅಲ್ಲಲ್ಲಿ ಬೆಂಚುಗಳ ಮೇಲೆ ಅವರ ನಿರ್ವಾಹಕ ಕೃಷ್ಣಮೂರ್ತಿಯಲ್ಲದೆ ಇತರರು ಯಾರ‍್ಯಾರೋ ಕುಳಿತು ಮಾತಾಡುತ್ತಿದ್ದರು. 'ಬನ್ನಿ'... ಎಂದು ಕಣ್ಣಲ್ಲೇ ಸೂಚಿಸಿದರು. ಹೋಗಿ ಪಕ್ಕದಲ್ಲೇ ಕುಳಿತೆ.

ಅಷ್ಟರಲ್ಲಿ ವಿ.ಸೀ.ಯವರ ಹಿರಿಯ ಮಗ ಕೃಷ್ಣಮೂರ್ತಿ ಬಂದವರೇ, "ಬಂದಿರಾ? ಬರ್ತೀನಿ ಬರಬೇಕೂಂತಿದ್ದಿರಿ..ಅಂತೂ ಬಂದಿರಿ." ಎಂದರು. ಕೂಡಲೇ ನನ್ನ ದುಃಖಕಟ್ಟೆಯೊಡೆದು ಮುಖ ಮುಚ್ಚಿಕೊಂಡು ಗಟ್ಟಿಯಾಗಿ ಅತ್ತು ಬಿಟ್ಟೆ.

"ಯಾಕೆ ಬರಲಿಲ್ಲ?" ಅವರ ಪ್ರಶ್ನೆ.

"ನಂಗೆ ತಿಳಿದದ್ದೇ ಈಗ..." ಎನ್ನುತ್ತಾ ಬಿಕ್ಕಿದೆ.

"ಬೆಳಿಗ್ಗೆಯಿಂದ್ಲೂ ರೇಡಿಯೋದಲ್ಲಿ ಹೇಳ್ತಾ ಇದ್ರಲ್ಲ?"

"ನಾನು ರೇಡಿಯೋ ಕೇಳೋದು ಅಪರೂಪ ಈಗ," ಎನ್ನುತ್ತಾ ಅಳುತ್ತಲೇ ಇದ್ದೆ.

ಈತನ ದುಃಖದ ಪೂರ ಹರಿದು ಹೋಗಲಿ ಎಂದವರು ನನ್ನ ಪಾಡಿಗೆ ನನ್ನನ್ನು ಬಿಟ್ಟು ದಿನ ಕರ್ಮ ಆರಂಭ ಮಾಡುವ ವಿಚಾರ ಮಾತಾಡುತ್ತಿದ್ದರು.

ಅಲ್ಲಿಂದೆದ್ದು ತೂರಾಡುತ್ತಾ, ಕೊನೆಯ ಬಾರಿ ಅವರ ಕೋಣೆ ನೋಡಿ ಬಿಡೋಣ ಎಂದು ಭ್ರಮಿಷ್ಟನಂತೆ ಕಾಂಪೌಂಡ್ ಪಕ್ಕದ ಸಂದಿಯಲ್ಲಿ ನುಸುಳಿ ಕಿಟಕಿಯಲ್ಲಿ ಇಣುಕಿದೆ. ಅದು ಮುಚ್ಚಿದ್ದರೂ ಗಾಜಿನ ಮೂಲಕ ಒಳಗಿನದೆಲ್ಲಾ ಕಾಣಿಸುತ್ತಿತ್ತು. ಅವರು ಮಲಗಿದ್ದ ಸ್ಥಳದಲ್ಲಿ ಅಷ್ಟೇ ದೊಡ್ಡದಾದ ಸುಗಂಧರಾಜ ಹೂವಿನ ಹಾರ ಮಲಗಿತ್ತು. ತಲೆಯ ಪ್ರದೇಶದಲ್ಲಿ ಮಣೆಯ ಮೇಲೆ ದೀಪ ಉರಿಯುತ್ತಿತ್ತು.

"ಈ ಊರಲ್ಲೇ ಇದ್ದು ನನ್ನ ನೋಡಲಿಕ್ಕೆ ಬರದೆ ಸತಾಯಿಸಿದಿಯಾ... ಮಾಡ್ತೀನಿ ತಾಳು," ಎನ್ನುತ್ತಾ ಅವರು ಹೇಳದೆ ಕೇಳದೆ ಅಂಗುಷ್ಠ ತೋರಿಸಿ ನಗುತ್ತಾ ನಡೆದು ಬಿಟ್ಟಿದ್ದರು. ಈ ಪಾಪಿಗೆ ಅವರ ಅಂತಿಮ ದರ್ಶನ ಕೂಡ ಇಲ್ಲವಾಯಿತು.

ಅವರ ಮಗ ಬಂದು ಸಮಾಧಾನ ಹೇಳಿದರು.

ಅಲ್ಲಿಂದ ಬರುವಾಗ ನನ್ನ ಜೀವ ದಾರಿಯುದ್ದಕ್ಕೂ ಅಯ್ಯೋ,... ಅಯ್ಯೋ... ಎಂದಳುತ್ತಿತ್ತು.

"ನಾನು ಸತ್ತರೆ ವ್ಯಾನ್‌ನಲ್ಲಿ ನನ್ನ ಸಾಗಿಸ ಬೇಡಿ... ವಿದ್ಯುತ್ ಚಿತೆಯಲ್ಲಿ ನನ್ನ ದಹಿಸ ಬೇಡಿ," ಎಂದೆಲ್ಲಾ ವಿ.ಸೀ. ಕೇಳಿಕೊಂಡಿದ್ದರಂತೆ.

ಆದರೆ ಮರಣದ ನಂತರ ಅಲ್ಲಿ ಸೇರಿದ್ದವರು ವ್ಯಾನ್‌ಗೆಂದು ಫೋನ್ ಮಾಡಿದ್ದರು. "ಮಧ್ಯಾಹ್ನ ಮೂರೂವರೆವರೆಗೂ ಇಲ್ಲ," ಎಂದು ಉತ್ತರ ಬಂದು, ವಿ. ಸೀ.ಯವರೇ ಗೆದ್ದರು. ನಾಲ್ವರ ಹೆಗಲ ಮೇಲೆಯೇ ಕೆಂಪಾಂಬುಧಿಯ ಕಡೆ ನಡೆದಿದ್ದರು.

ಅಣ್ಣ ಮತ್ತು ಎರಡು ತಲೆ ಹಿಂದಿನ ಸೋದರ ಮಾವಂದಿರಂತೆ ನಾನು ಕೂಡ ಈ ವಯಸ್ಸಿಗೇನೆ ಸುಮಾರು ಜನರ ಶವಸಂಸಾರ ಮಾಡಿದ್ದೆ. ಬದುಕಿದ್ದಂತೆಯೇ ನನ್ನ ತಿಥಿ ಮಾಡಿದ ಭದ್ರಾವತಿಯಲ್ಲಿ ಇಂಗ್ಲೀಷ್ ಉಪಾಧ್ಯಾಯನಾಗಿ ಅಲ್ಲಿನ ನೀರಿನ ನೆಲದ ಋಣ ತೀರಿಸಿದ್ದಲ್ಲದೆ, 'ಚಚ್ಚೋಪಾಧ್ಯಾಯ'ನಾಗಿಯೂ ಅಲ್ಲಿ ಅನೇಕರ ಶವಸಂಸ್ಕಾರಮಾಡಿದ್ದೆ.

ಈಗ ಈ ಗುರುವಿನ ಅಂತ್ಯ ಕಾಲದಲ್ಲಿ ಅವರಿಗೊಂದು ಹೆಗಲು ಕೊಡುವ-ಹೋಗಲಿ ಅವರ ಶರೀರದ ಹಿಂದೆ ಕೊನೆಯ ಬಾರಿ ಐದು ಹೆಜ್ಜೆ ನಡೆಯುವ ಪುಣ್ಯವನ್ನೂ ಕಳೆದುಕೊಂಡಿದ್ದೆ.

೭೬ರಲ್ಲಿ ಅವರಿಂದ ದೂರವಾದ ಅವಧಿಯಲ್ಲಿ ಏಳು ಕೋಟಿ ರೂಪಾಯಿಗೆ ಸಮನಾಗುವಷ್ಟು ಮುಕ್ತಾಫಲಗಳನ್ನು ಪಡೆದು ನನ್ನ ಜ್ಞಾನ ಭಂಡಾರ ಭರ್ತಿಯಾಗಿ ನಾನು ಹೆಸರಿಗೆ ತಕ್ಕಂತೆ ಖಜಾನೆಯಾಗಿಯೇ ಉಳಿಯುತ್ತಿದ್ದೆ... ಎಲ್ಲಾ ಹೋಯಿತು. ಇಂಥವರನ್ನು ತೊರೆದು ಜೀವಿಸಬಹುದೆ?



**Edited, printed & published by M. N. Mahishi on behalf of the Receiver (Moveables), Loka Shikshana Trust, Samyukta Karnataka Press, Koppikar Road, Hubli-580 020. Rept: Bombay: V. Satyamurthy Phone: 5510592. Calcutta: H. Majumdar Phone: 46-42331 Madras: K. A. Subramanian Phone: 842201: New Delhi: V. K. Chopra Phone: 7114785.**

*Registered with the Registrar of News papers for India under No.3533/57*